# ಕಸ್ತೂರಿ

ಏಪ್ರಿಲ್, ೧೯೮೬



ರೂ. ೨-೫೦

# ಕಸ್ತೂರಿ

ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ :
ಆರ್. ಜೆ. ದೇಸಾಯಿ

**

ಸಹಸಂಪಾದಕ :
ಮಾಧವ ನಾ. ಮಹಿಷಿ

**

ಕಲೆ :
ಪಿ. ಆರ್. ಪಾಟೀಲ

**

ಮುಖಪುಟ :
ನಿನಗಲ್ಲವೆ ವಸಂತ ?

**

ಛಾಯಾಚಿತ್ರ :
ವಿ. ಗೋಪಾಲ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI, April 1986

# ಬೆಳಕಿಂಡಿ

ವಿಚಾರಿಸುವುದನ್ನು ಬಿಟ್ಟ ಕ್ಷಣವೇ ಸ್ಥಿರವಾದ ಅಭಿಪ್ರಾಯ ನೆಲೆಗೊಳ್ಳುತ್ತದೆ.

—ಜೋಸೆಫ್ ಹೆನನ್

*

ವಸ್ತುಗಳನ್ನು ಉಪಯೋಗಿಸಿಕೊಳ್ಳುವ ಹಾಗೂ ಮನುಷ್ಯರನ್ನು ಪ್ರೀತಿಸುವ ಬದಲು ಇತ್ತೀಚೆಗೆ ನಾವು ಮನುಷ್ಯರನ್ನೇ ಉಪಯೋಗಿಸಿಕೊಳ್ಳುತ್ತಿದ್ದೇವೆ ಹಾಗೂ ವಸ್ತುಗಳನ್ನು ಪ್ರೀತಿಸುತ್ತಿದ್ದೇವೆ. —ಕೀಪಲ್ ಹೋ

*

ಹದಿವಯಸ್ಸಿನವರು ಬೆಳೆಯುವುದರಲ್ಲಾಗಲಿ ಮನೆ ಬಿಡುವುದರಲ್ಲಾಗಲಿ ಅಥವಾ ಮದುವೆಯಾಗುವುದರಲ್ಲಾಗಲಿ ಹೊಸತನ ಕಾಣುವುದಿಲ್ಲ. ನನಗೆ ಅದು ಒಡೆದು ಕಾಣಿಸುವುದು ಅವರು ಈಗೀಗ ಈ ಕ್ರಮವನ್ನು ಬದಲಿಸುತ್ತಿರುವುದರಲ್ಲಿ.

—ಹರ್ಬರ್ಟ್ ಮಿಲ್ಲರ್

*

ಅಜ್ಞಾನವಲ್ಲ, ಅಜ್ಞಾನವಿದೆಯೆನ್ನುವುದರ ಅಜ್ಞಾನವೇ ಜ್ಞಾನದ ಮೃತ್ಯು.

—ಆಲ್ಫ್ರೆಡ್ ಪ್ರೈಟ್‌ಹೆಡ್

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ

ಸಿಡಿಚಿಂತನ

## ಅಪರೂಪದ ವಿಜ್ಞಾನಿ

ಮಾರ್ಚ್ ತಿಂಗಳ ಕಸ್ತೂರಿಯಲ್ಲಿ ಶ್ರೀ ಪಾಂಡುರಂಗ ಹೆಗಡೆಯವರು 'ಅಪರೂಪದ ಕೃಷಿ ವಿಜ್ಞಾನಿ' ಡಾ. ಎ. ಎನ್. ನಾಗರಾಜ ಅವರ ಬಗ್ಗೆ ಬರೆದ ಪರಿಚಯ ಲೇಖನ ಅತಿ ಸರಳ, ಸುಂದರ ಹಾಗೂ ಹೃದಯಸ್ಪರ್ಶಿಯಾಗಿತ್ತು. ಲೇಖನದ ಉತ್ತರಾರ್ಧವನ್ನು ಓದಿದಾಗ ಮನಸ್ಸಿಗೆ ವೇದನೆಯಾಯಿತು. ಭಾರತದ ಬಹುಸಂಖ್ಯಾತ ಕೃಷಿಕರಿಗೆ ಆದರ್ಶವಾಗಬಲ್ಲ ಕೃಷಿ ಋಷಿ, ಸ್ವದೇಶಾಭಿಮಾನದಿಂದ, ಇಲ್ಲಿ ಬಂದು ನೆಲಸಿದರೂ ಅವರ ಸದುಪಯೋಗ ನಮಗಾಗುತ್ತಿಲ್ಲ.

ಇವರ ಜ್ಞಾನದ ಉಪಯೋಗವನ್ನು ಜನತೆಗೆ ಕೊಡಲು ಸರಕಾರ ಸಹಕಾರಿಯಾಗಲಿ, ಡಾ. ನಾಗರಾಜ ಶತಾಯುಷಿಯಾಗಲಿ.

ಬೆಂಗಳೂರು — ತಲೆಕೆರಿ ಗೋಪಾಲಕೃಷ್ಣ ಹೆಗಡೆ

ಡಾ. ಎ. ಎನ್. ನಾಗರಾಜರ ಬಗೆಗಿನ ಲೇಖನದಲ್ಲಿ ಅಮೇರಿಕದಲ್ಲಿ ಎಸ್‌ಬೆಸ್ಟಾಸ್ ಹಂಚನ್ನು ಬಳಸಬಾರದೆಂದು ನಿಷೇಧಿಸಲಾಗಿದೆ, ಇದರ ಬಳಕೆಯಿಂದ ರೋಗ ಬರುವ ಸಾಧ್ಯತೆ ಇದೆಯೆಂದು ಬರೆದಿದ್ದಾರೆ. ಈ ಬಗ್ಗೆ ಸರಕಾರ ನಿಷೇಧ ಹೇರದಿದ್ದರೂ ಇವರ ಕೆಟ್ಟ ಪರಿಣಾಮಗಳ ಬಗ್ಗೆ ಸುದ್ದಿ ಮತ್ತು ಪ್ರಚಾರ ಮಾಧ್ಯಮಗಳು ಜನರಿಗೆ ತಿಳಿಸುವ ಕೆಲಸ ಮಾಡಿದಲ್ಲಿ ಅನೇಕ ಮಂದಿ ಶ್ರೀಮಂತರೂ ತಮ್ಮ ಮನೆಗಳಿಗೆ ಇಂತಹ ಶೀಟುಗಳನ್ನು ಬಳಸುವುದನ್ನು ನಿಲ್ಲಿಸಬಹುದು.

ಅಡ್ಯನಡ್ಕ — ಟಿ. ಕೆ. ಪಿ.

## ಆಶ್ಚರ್ಯವಾಗುತ್ತದೆ!

ಪಾ. ವೆಂ. ಅವರ ಲೇಖನ 'ನನಗೆ ಆಶ್ಚರ್ಯವಾಗುತ್ತದೆ!' ಓದುತ್ತಿದ್ದಂತೆ ನನಗೂ ಆಶ್ಚರ್ಯವಾಯಿತು. ಇಂದ್ರಿಯಗಳು ನಮ್ಮವೇ ಆದರೂ ಅದರ ಬಗೆಗಿನ ಕಾರ್ಯವೈಖರಿ ತಿಳಿದು ನನಗೆ ಹೊಸ ದಿಗಂತವೇ ಗೋಚರಿಸಿದಂತಾಯಿತು. ಲೇಖಕರು ಸೂಕ್ಷ್ಮ ಹಾಗೂ ಸ್ಫಟಿಕದಂಥ ವಿಚಾರಶ್ರೇಣಿಯಿಂದ ವಸ್ತು ವಿಷಯದ ಆಳಕ್ಕಿಳಿಸಿ ಹೊಸ ಅರಿವನ್ನೇ ಮೂಡಿಸುತ್ತಾರೆ.

ಅಥಣಿ — ಸುಧೀರ ಕುಲಕರ್ಣಿ

## ಪಂಚತಂತ್ರ

ದುರ್ಗಸಿಂಹನ ಪಂಚತಂತ್ರದ ಬಗ್ಗೆ ಡಾ. ವರದರಾಜ ಹುಯಿಲಗೋಳರ ಬರಹ ಮೆಚ್ಚುವಂತಹದಾಗಿದೆ.

ಹತ್ತನೇ ಶತಮಾನದ ಪೂರ್ವದಲ್ಲಿ ಪಂಚತಂತ್ರ ಸಾಹಿತ್ಯವು ಬೆಳೆದುಬಂದು, ಪ್ರೌಢಾವಸ್ಥೆ ಹೊಂದಿ ಪ್ರಪಂಚದ ಅನೇಕ ಭಾಷೆಗಳಿಗೆ ಅನುವಾದಗೊಂಡು ಜನಜೀವನದಲ್ಲಿ ಬೆರೆತು ಹೋಯಿತೆಂಬುದನ್ನು ತೋರಿಸಿ ಕೊಡುವ ಈ ತೌಲನಿಕ ಬರೆಹ ಚೆನ್ನಾಗಿದೆ. ವಸುಭಾಗನೇ ಮೊದಲು ಬರೆದ ಪಂಚತಂತ್ರವನ್ನು ಆಧರಿಸಿ ದುರ್ಗಸಿಂಹನು ಕನ್ನಡದಲ್ಲಿ ಅನುವಾದಿಸಿದನೆಂದು ಸಾಧಾರವಾಗಿ ಲೇಖಕರು ತೋರಿಸಿ ಕೊಟ್ಟಿದ್ದಾರೆ.

ಅಂತೂರ ಬೆಂತೂರ — ಕೆ. ಬಿ. ಬಾಜಿ

## ಹೌದೆ?

ಮಾರ್ಚ್ ೮೭ರ ಕಸ್ತೂರಿಯಲ್ಲಿ ಮೂಡಿಬಂದ 'ಅಂ. ರಾ. ಭ್ರಷ್ಟಾಚಾರ ಸಮಸ್ಯಾ ಸಂವಾದ' ಲೇಖನವನ್ನು ಶಂ. ಬಾ. ಮನಗೋಳಿಯವರು ಬಹಳ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಈ ಲೇಖನ ಬರೀ ಹರಟೆಯೆನಿಸಿದರೂ, ಇಂದಿನ ರಾಜಕೀಯ ಹಾಗೂ ಸಾಮಾಜಿಕ ಸ್ಥಿತಿಗತಿಗಳಿಗೆ ಚಾಟಿ ಏಟು ಕೊಟ್ಟಂತಾಗಿದೆ. ಲೇಖನದಲ್ಲಿ ಮೂಡಿ ಬಂದ ಹತ್ತು ಗೊತ್ತುವಳಿಗಳನ್ನು ಕಾರ್ಯರೂಪದಲ್ಲಿ ತಂದರೆ ಭ್ರಷ್ಟಾಚಾರದ ಸಮಸ್ಯೆಯೇ ಉದ್ಭವಿಸುವದಿಲ್ಲ. ಅಲ್ಲವೆ?

ಸವಣೂರು — ರಾಜು ಬಿ. ಕುಮಶೀಕರ್

## ಭಲೆ

ಮಾರ್ಚ್ 'ಕಸ್ತೂರಿ' ಯಲ್ಲಿ ಪ್ರಕಟವಾದ ಲೇಖನಗಳೆಲ್ಲವೂ ಆಕರ್ಷಕವಾಗಿದ್ದವು. 'ಸ್ವಾಮಿ ದಯಾನಂದ ಸರಸ್ವತಿ' ಸಂದರ್ಶನ ಲೇಖನ ಚೆನ್ನಾಗಿತ್ತು.

ಹಾಗೆಯೆ ನನ್ನನ್ನು ಆಕರ್ಷಿಸಿದ್ದು ಶ್ರೀ

ಮೋಹನ ವೇರ್ಣೇಕರ್ ಅವರ 'ನಿರ್ಧಾರ' ಕತೆ. ಕಥಾನಾಯಕನ ಮಾನಸಿಕ ತುಮುಲ, ಅಂತ್ಯದಲ್ಲಿ ಆತನ ನಿರ್ಧಾರ ಅಭಿವ್ಯಕ್ತಗೊಳ್ಳುವ ವೇಳೆಗೆ ಕತೆ ತನ್ನದೇ ಆದ ತಿರುವನ್ನು ಪಡೆಯುತ್ತದೆ. ಮನ ಸೆಳೆಯುವ ಶೈಲಿ ಮತ್ತು ನಿರೂಪಣಾ ತಂತ್ರ ಬಹಳ ಹಿಡಿಸಿತು.

ಬೆಂಗಳೂರು —ಡಿ. ಶ್ರೀದೇವಿ

### ಕಾವಲು

'ಕಾವಲು' ಮರಾಠಿ ಕಥೆ ಅತ್ಯಂತ ಸುಂದರವಾದ-ಅಷ್ಟೇ ಸರಳ ಭಾಷೆಯ ಕೃತಿ. ಮೂಲವನ್ನು ಓದದವರಿಗೆ ಕನ್ನಡದ ಕಥೆ ಎನ್ನಿಸಿಬಿಡುವಷ್ಟು ಅನುವಾದ ಸೊಗಸಾಗಿದೆ. ರೇಖಾಚಿತ್ರವೂ ಕಥೆಗೆ ತಕ್ಕಂತೆ ಸುಂದರವಾಗಿದೆ.

ಮೈಸೂರು —ಪಿ. ಆರ್. ತಿಪ್ಪೇಸ್ವಾಮಿ

### ಸರಿಯಲ್ಲ

ಕಸ್ತೂರಿ ಮಾರ್ಚ್ ೧೯೮೬ ರ ಸಂಚಿಕೆಯಲ್ಲಿ ಬಂದ 'ಪ್ರಾಚೀನ ಭಾರತದಲ್ಲಿ ವಿಜ್ಞಾನ' ಎಂಬ ಲೇಖನವನ್ನು ಓದಿದೆ. ಲೇಖಕರು 'ಶಂಕರರ ಅದ್ವೈತ'ವು ಕಣಾದನ ಪರಮಾಣು ವಾದ, ಕಪಿಲರ ಸಾಂಖ್ಯ ವಾದ,' ನೈಯಾಯಿಕರ ನ್ಯಾಯ ಶಾಸ್ತ್ರ ಇತ್ಯಾದಿಗಳನ್ನು ಹಿಮ್ಮೆಟ್ಟಿಸಿ ವಿಜ್ಞಾನ ಪರಂಪರೆಗೆ ತೆರೆ ಎಳೆಯಿತು ಎಂದಿದ್ದಾರೆ. ಇದು ವಾಸ್ತವಿಕವಾಗಿ ಸತ್ಯಕ್ಕೆ ದೂರವಾದದ್ದು.

ಸರಿಯಾಗಿ ಹೇಳಬೇಕೆಂದರೆ, ಕಣಾದ ಇತ್ಯಾದಿ ಮೇಲಿನವರ ವಾದಗಳು ಭೌತಿಕ ವಾದ ಎನ್ನಬಹುದು. ಹಾಗೂ ಶಂಕರರದು ಭೌತಾತೀತ ಚೈತನ್ಯವಾದ ಎನ್ನಬಹುದು. ಬ್ರಹ್ಮಸೂತ್ರ ಭಾಷ್ಯದಲ್ಲಿ ವಿಶ್ವದ ಸೃಷ್ಟಿ, ಲಯಗಳಿಗೆ ಭೌತಿಕ ವಾದ ಪರಮಾಣುಗಳು ಹೇಗೆ ಕಾರಣವಲ್ಲ ಹಾಗೂ ಭೌತಾತೀತವಾದ ಚೈತನ್ಯವೇ ಕಾರಣ ಎನ್ನುವುದು ಸರಿ ಎಂದು ತಾರ್ಕಿಕವಾಗಿ ಸಾದರ ಪಡಿಸಿದ್ದಾರೆ. ಅಲ್ಲದೇ ಇಂದಿನ ವಿಜ್ಞಾನಿಗಳ 'ಮಹಾ ಸ್ಫೋಟ ವಾದ' ಇತ್ಯಾದಿ ಸಂಶೋಧನೆಗಳೂ ಭೌತಾತೀತ ಚೈತನ್ಯವೇ ವಿಶ್ವದ ಆದಿ ಎನ್ನುವುದಕ್ಕೆ ದಾರಿ ಮಾಡಿಕೊಟ್ಟಿವೆ. ಮತ್ತೆ ಕಣಾದ ಇತ್ಯಾದಿಯವರದು ದ್ವೈತ ವಾದ ಅಂದರೆ ವಿಶ್ವಕ್ಕೆ ಮೂಲವಾಗಿರುವುದು ಎರಡು ಪದಾರ್ಥಗಳು (ಪರಮಾಣು ಹಾಗೂ ಈಶ್ವರ) ಈ ರೀತಿಯಾದ ಭಾವನೆ ಇಂದಿನ ಯಾವ ವೈಜ್ಞಾನಿಕ ಸಂಶೋಧನೆಗಳಲ್ಲೂ ಕಂಡುಬಂದಿಲ್ಲ. ಆದರೆ ಶಂಕರರ ಮಾಯಾ ವಾದವು ಸಾಪೇಕ್ಷತಾ ವಾದಕ್ಕ ಸಮನಾಗಿದೆ. (ಎರಡೂ ಸಂಶೋಧನೆಗಳು ಭೌತಿಕ ವಿಶ್ವವನ್ನು ಕಾಲ—ಆಕಾಶಗಳ ಮಿತಿಗೆ ಒಳಪಡಿಸುತ್ತವೆ). ಅಲ್ಲದೇ ಕಣಾದನ ಪರಮಾಣು ವಾದವೇ ಬೇರೆ, ಇಂದಿನ ಪರಮಾಣು ವಾದವೇ ಬೇರೆ. ಶ್ರೀಯುತರು 'ಸೂತ್ರ ಭಾಷ್ಯದ ಪರಮಾಣು ಜಗತ್ಕಾರಣತ್ವಾಧಿಕರಣ'ವನ್ನು ನೋಡಿದರೆ ವಾಸ್ತವಾಂಶವು ಅರಿವಾಗುತ್ತದೆ.

ಅಲ್ಲದೆ 'ಭಾರತೀಯ ಶಸ್ತ್ರಚಿಕಿತ್ಸಾ ವಿಧಾನ' ಏಕೆ ಮರೆಯಾಯಿತು ಎನ್ನುವುದಕ್ಕೆ ಕಾರಣ ಕೊಟ್ಟಿಲ್ಲ. ಸದ್ಯದ ಚರಿತ್ರಕಾರರ ಅಭಿಪ್ರಾಯದಂತೆ ಬೌದ್ಧರ ಅತಿಯಾದ ಅಹಿಂಸಾವಾದವೇ ಕಾರಣವೆನ್ನಲಾಗಿದೆ. ಬುದ್ಧನ ಕಾಲದ ಸರ್ವಶ್ರೇಷ್ಠ ವೈದ್ಯನಾದ ಜೀವಕನು. ಶಸ್ತ್ರಚಿಕಿತ್ಸೆಯನ್ನು ಮಾಡುತ್ತಿರಲಿಲ್ಲವೆಂಬುದೂ ಗಮನಾರ್ಹ.

ಹೊಸಪೇಟೆ —ಸಿ. ಎನ್. ಎಸ್. ರೇಣುಕಾ ಪ್ರಸಾದ

### ಪ್ರತೀಕಾರ

ಪುಸ್ತಕ ವಿಭಾಗದಲ್ಲಿ ಮೂಡಿ ಬಂದ 'ಪ್ರತೀಕಾರ' (ಕಸ್ತೂರಿ, ಮಾರ್ಚ್) ಕಥೆಯು ಕೂತೂಹಲಕಾರಿಯಾಗಿದ್ದು ಅಂತ್ಯದ ವರೆಗೂ ವಾಚಕರ ಮನಸ್ಸನ್ನು ಚಂಚಲಗೊಳಿಸದೆ ಹಿಡಿದಿಟ್ಟು ಓದಿಸಿಕೊಂಡು ಹೋಗುವಲ್ಲಿ ಯಶಸ್ವಿಯಾಗಿದೆ.

ಕಥಾನಾಯಕ ರೊಮಾನಿ, ಪ್ರತೀಕಾರವನ್ನು ರೂಪಿಸಿಕೊಂಡ ಬಗೆಯಲ್ಲಿ ಆತನ ಸಂಯಮ ಹಾಗೂ ಔದಾರ್ಯ(ಪತ್ನಿಯನ್ನು ಸಾಯಿಸದಿದ್ದುದು)ವನ್ನು ಗುರುತಿಸಬಹುದು.

ಈ ಬರಹ ನಿರೂಪಣೆಯಲ್ಲಿ ಎಲ್ಲೂ ಸಡಿಲು ಕಾಣದೆ ಲೇಖನಿಯ ನಿರೂಪಣಾ ಕೌಶಲವನ್ನು ಪ್ರಕಟಗೊಳಿಸುತ್ತದೆ.

ಬೆಂಗಳೂರು —ಪ. ರಾಮಚಂದ್ರರಾವ್

# ಕಸ್ತೂರಿ

ವರ್ಷ : ೩೦ ಎಪ್ರಿಲ್ ೧೯೮೬ ಸಂಚಿಕೆ : ೮

## ಸತ್ಯವಂತ

ಇರ್ಷಾದ್ ಮೂಡಬಿದ್ರಿ

ಪ್ರವಾದಿ ಸಂತರಲ್ಲಿ ಹಜರತ್ ಅಬ್ದುಲ್ ಕಾವರ್ ಜಿಲಾನಿಯುವರ ಹೆಸರು ಬಹು ಜನಪ್ರಿಯ. ಇದು ಅವರ ಬಾಲ್ಯದಲ್ಲಿ ನಡೆದ ಘಟನೆ.

ಜಿಲಾನಿಯುವರ ತಾಯಿ ದೈವಭಕ್ತೆ, ಸದ್ಗುಣ ಸಂಪನ್ನೆ, ಸನ್ಮಾರ್ಗದರ್ಶಿನಿ. ಒಂದು ದಿನ ಅವರು ಮಗನನ್ನು ಬಾಗ್ದಾದಿಗೆ ಕಾರ್ಯ ನಿಮಿತ್ತ ಕಳುಹಿಸಿದಳು.

ಮುಚ್ಚಂಜೆಯ ಸಮಯ ಜಿಲಾನಿಯು ವ್ಯಾಪಾರ ತಂಡದೊಂದಿಗೆ ದುರ್ಗಮ ಕಾಡಿನ ಮೂಲಕ ಪ್ರಯಾಣ ಬೆಳೆಸುತ್ತಿದ್ದರು. ಅಷ್ಟರಲ್ಲಿ ಎಲ್ಲಿಂದಲೋ ಒಂದು ದರೋಡೆಕೋರರ ಗುಂಪು ಅವರ ಮೇಲೆ ದಾಳಿ ಇಟ್ಟಿತು. ಪ್ರತಿಯೋರ್ವ ವ್ಯಾಪಾರಿಯ ಹಣ, ಒಡವೆ, ಸರಕನ್ನು ದೋಚಿದರು. ಕೊನೆಗೆ ದಂಡನಾಯಕ ಜಿಲಾನಿಯ ಬಳಿ ಬಂದು "ನಿನ್ನಲ್ಲಿ ಏನಿದೆ?" ಎಂದು ಗದರಿಸಿದ. ಬಾಲಕ ಜಿಲಾನಿ ಧೈರ್ಯಗೆಡದೆ, ಸೌಮ್ಯವಾಗಿ, "ಹತ್ತು ದಿನಾರ್‌ಗಳಿವೆ?"

ಎಂದರು. ಕಳ್ಳನು "ಎಲ್ಲಿ ಅಡಗಿಸಿಬಿಟ್ಟಿರುವೆ?" ಎಂದು ಪ್ರಶ್ನಿಸಿದ.

ಜಿಲಾನಿಯುವರು ತಮ್ಮ ಒಳ ಅಂಗಿಯ ಕಿಸೆ ತೋರಿಸಿ, "ಇಲ್ಲಿ" ಎಂದರು. ನಾಯಕ ಕೂಡಲೆ ಅವರ ಅಂಗಿಯನ್ನು ಹುಡುಕಾಡಿದ, ಆದರೆ ಹಣ ದೊರೆಯಲಿಲ್ಲ.

ಕಳ್ಳ ಪುನಃ ಗದರಿಸುತ್ತ, "ಎಲವೋ ಪೋರ ನನ್ನಲ್ಲಿ ಸುಳ್ಳನ್ನಾಡುವೆಯಾ?" ಎಂದ. ಜಿಲಾನಿಯವರು ನಿರ್ಭಯವಾಗಿ, "ಇಲ್ಲ ನಾನೆಂದಿಗೂ ಸುಳ್ಳು ಹೇಳಲಾರೆ. ಸತ್ಯವನ್ನು ನುಡಿಯುತ್ತಿದ್ದೇನೆ. ಬೇಕಿದ್ದರೆ ಇನ್ನೊಮ್ಮೆ ಪರಿಶೋಧಿಸಿರಿ" ಎಂದರು.

ಕಳ್ಳ ಪುನಃ ಹುಡುಕಾಡಿದ ಹತ್ತು ದಿನಾರ್ ಸಿಕ್ಕಿದವು. ಪುನಃ ಅದೆಷ್ಟು ಹುಡುಕಿದರೂ ಒಂದು ದಿನಾರೂ ದೊರೆಯಲಿಲ್ಲ.

ಕಳ್ಳನಿಗೆ ಆಶ್ಚರ್ಯವಾಯಿತು. ಆತ ಬಾಲಕನ ತೇಜಸ್ವಿ ಮುಖವನ್ನು ದಿಟ್ಟಿಸಿ "ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಏಕೆ ಸತ್ಯವನ್ನು ನುಡಿದೆ-ಸುಳ್ಳು ಹೇಳಬಹುದಿತ್ತಲ್ಲಾ?" ಎಂದು ಪ್ರಶ್ನಿಸಿದ.

ಅದಕ್ಕೆ ಬಾಲಕ ಜಿಲಾನಿ, "ನನ್ನ ತಾಯಿಯು ಎಂತಹ ಪರಸ್ಥಿತಿಯಲ್ಲೂ ಸುಳ್ಳು ನುಡಿಯಬಾರದು ಎಂದು ಉಪದೇಶಿಸಿದ್ದಾಳೆ. ಹಾಗಾಗಿ ನಾನು ಸತ್ಯವನ್ನೇ ನುಡಿಯುತ್ತಿದ್ದೇನೆ, ಎಂದಿಗೂ ಸುಳ್ಳು ಹೇಳಲಾರೆ," ಎಂದ.

ತಕ್ಷಣ ನಾಯಕನ ಕಣ್ಣಿಂದ ಅಶ್ರುಧಾರೆ ಹರಿಯಿತು. ಆತ ಬಾಲಕ ಹಾಗೂ ವ್ಯಾಪಾರಿ ತಂಡದೊಂದಿಗೆ, "ಇನ್ನೆಂದಿಗೂ ನಾನು ದರೋಡೆ ಮಾಡಲಾರೆ, ಇಂದಿನಿಂದ ಸತ್ಯ, ಧರ್ಮದೊಂದಿಗೆ ಬದುಕುತ್ತೇನೆ" ಎಂದು ಕ್ಷಮೆ ಕೋರಿದ.

✡



ಹಳ್ಳಿಯ ಮುದುಕ ರೈತನೊಬ್ಬನಿಗೆ ಕಠಿಣವಾದ ಜ್ವರ ಬಂದು ನಾಲಿಗೆ ಬಿದ್ದು ಹೋಯಿತು. ಹಣ್ಣೆಲೆ ಉದುರುತ್ತದೆಯೆಂದರೆ ಏಕೆ ತಲೆ ಬಿಸಿ? ಎಂದು ಅವನ ಮಗ ಮತ್ತು ಹೆಂಡತಿ ಔಷಧ ಮಾಡಿಸದೆ ಅಸಡ್ಡೆಯಿಂದಿದ್ದರು. ರೈತ ನೆಲದಲ್ಲಿ ಮಲಗಿ ಹಟ್ಟಿಯ ಕಡೆಗೆ ನೋಡುತ್ತಾ ಕೈಸನ್ನೆಯಿಂದ ಮಗನಿಗೆ ಏನನ್ನೋ ತೋರಿಸುತ್ತಾ ಒದ್ದಾಡ-ತೊಡಗಿದ. ತಾಯಿ ಮಗನಿಗೆ ಆ ಸನ್ನೆಯ ಅರ್ಥ ಆಗಲೇ ಇಲ್ಲ. ರೈತ ಧಾರಾಳವಾಗಿ ಹಣ ಗಳಿಸಿ, ಹಟ್ಟಿಯ ಮೂಲೆಯಲ್ಲೆಲ್ಲೋ ಹೂಳಿರಬೇಕು. ಅದನ್ನೇ ಸನ್ನೆಯಿಂದ ಹೇಳುತ್ತಿದ್ದಾನೆಂದು ಭಾವಿಸಿದ ಮಗ, ಹೇಗಾದರೂ ತಂದೆಗೆ ಬಾಯಿ ಬರುವಂತಾದರೆ ಆತ ಅದನ್ನು ವಿವರಿಸಬಲ್ಲನೆಂದು ನೆನೆದು ವೈದ್ಯರ ಬಳಿಗೆ ಹೋದ.

ವೈದ್ಯರು ಬಂದು ರೈತನಿಗೆ ಚಿಕಿತ್ಸೆ ಮಾಡಿದರು. ಅವರಿಗೆ ದೊಡ್ಡ ಮೊತ್ತದ ಹಣ ಸಿಕ್ಕಿದ ಮೇಲೆ ರೈತ ಮಾತನಾಡುವ ಸ್ಥಿತಿಗೆ ಬಂದ.

ಆಮೇಲೆ ಮಗ ಆತ್ಯಾತುರದಿಂದ ತಂದೆಯ ಬಳಿಗೆ ಹೋಗಿ, "ಅಪ್ಪಾ, ಕಾಯಿಲೆ-ಯಿಂದಿರುವಾಗ ಹಟ್ಟಿಯ ಕಡೆ ಕೈಮಾಡಿ ಒಂದೇ ಸವನೆ ಸನ್ನೆಯಿಂದ ತೋರಿಸುತ್ತಿದ್ದೆಯಲ್ಲ, ಏನದು? ಏನುಂಟು ಅಲ್ಲಿ?" ಎಂದು ಕೇಳಿದ.

"ಇವತ್ತು ಕೇಳ್ತಾ ಇದ್ದಿಯಲ್ಲ ಮಾರಾಯ, ಎಮ್ಮೆ ಕರು ಅಲ್ಲಿ ನಿಂತು ಕಸಬರಿಗೆ ತಿನ್ತಾ ಇತ್ತು. ಎಲ್ಲಾದರೂ ಗಂಟಲಿನಲ್ಲಿ ಸಿಕ್ಕಿಕೊಂಡೀತೂಂತ ಅದನ್ನ ಬಿಡಿಸಿಕೊಳ್ಳ ಹೇಳ್ತಿದೆ," ಎಂದ ರೈತ.

—ಪ. ರಾಮಕೃಷ್ಣ ಶಾಸ್ತ್ರಿ

# ಪೊರೆ ಕಳಚಿ ಹೊರ ಬರುವ ಮುನ್ನ

ಸಮಯಾವಕಾಶಗಳ ಮೇಲೆ ಮೊದಲ ಬಿಂದು
ಜನನಿಯ ಗರ್ಭದಿಂದ ಹೊರಬಂದು ನಾನು ರೋದಿಸಿದಾಗ
ಸಮಯಾವಕಾಶಗಳ ಮೇಲೆ ಎರಡನೆಯ ಬಿಂದು
ಸಾವಿನ ಸಮಾಧಿಗಾಗಿ ನಾನು ಕೊನೆಯ ಉಸಿರೆಳೆವಾಗ
ನನ್ನ ಚಿಂತನೆಗಳ, ನನ್ನ ಮುಲುನಗೆಯ, ನನ್ನ ಕನಸುಗಳ
ನವಿರಾದ ಜೀವಗೆರೆ, ಈ ಎರಡು ಬಿಂದುಗಳ ನಡುವೆ
ಹಗುರಾಗದಿರಬಹುದು, ಕೊನೆಯ ಬಿಂದು ಇಡುವ ಮೊದಲು
ಆದರೂ ಬದುಕಿ ಸುತ್ತುತ್ತೇನೆ ಈ ಬಾಳಿನೊಂದಿಗೆ
ಚಿರನಿದ್ರೆಯಲ್ಲಿ ವಿರಮಿಸುವ ಮೊದಲು

ನನ್ನ ಬಾಳಗಂಟೆ ಮೊಳಗುತ್ತದೆ
ವಿಸ್ತರಿಸುತ್ತವೆ ನನ್ನ ಕಣ್ಣಾಲಿಗಳು
ತಂಡೋಪತಂಡ ಭಾರದ್ವಾಜ ಪಕ್ಷಿಗಳನ್ನು ಕಂಡು
ಮಸಣದಲ್ಲಿ ಪವಡಿಸುವ ಮೊದಲು
ಕಾಣಬೇಕು ನಾನು
ಸಾಯಂಕಾಲದ ಸುಳಿಗಾಳಿ ತಂದ ಬೂದಿ ಬಣ್ಣದ ಮೋಡಗಳನ್ನು
ಅಳೆಯಬೇಕು
ಸೃಷ್ಟಿಯ ಗೊತ್ತುಗುರಿಯಿರದ ಆಳವನ್ನು
ಶೋಧಿಸಬೇಕು
ಪ್ರಕೃತಿಯ ಅನಂತ ಶಕ್ತಿಯ ಇನಿದಾದ ನಾದಲಯವನ್ನು
ಕೊನೆಯ ಬಿಂದು ಇಡುವ ಮೊದಲು
ಆತ್ಮಾವಲೋಕಿಸಬೇಕು ನನ್ನ ಗರ್ವದ ಎತ್ತರವನ್ನು
ಕಂಡಿರಬೇಕು
ಗಾವುದ ಗಾವುದ ಪಸರಿಸಿದ ನನ್ನ ದೇಶದ ಉದ್ದ-ಅಗಲವನ್ನು
ಅರಿಯಬೇಕು ನನ್ನ ಜನತೆಯ ಮಿಡಿತವನ್ನು
ಫಲ ಸಿಗಬೇಕು
ನನ್ನ ಅವಿರತ ಶ್ರಮಕ್ಕೆ, ಅನಂತ ಪ್ರೀತಿಗೆ
ದೇಶದ ಪೊರೆ ಕಳಚಿ ಹೊರಬರುವ ಮುನ್ನ
ತ್ರಿವಿಕ್ರಮನಾಗಿ ಬೆಳೆದು
ಅಮರತ್ವದ ಕೈಯಿಂದ ಕಳಚಿ
ಜೀವ ಬೀಜವಾಗುವದಕ್ಕೆ

ಶ್ರೀನಿವಾಸ ವಾಡಪ್ಪಿ

(ಒಂದು ಹಳೆಯ ರಶಿಯನ್ ಕವಿತೆಯಿಂದ ಪ್ರೇರಿತ)



# ಜೆ. ಕೆ. ವಿಚಾರಧಾರೆ

ಕೆ. ಜಿ. ಕುಲಕರ್ಣಿ

ಯಾವುದು ಸುಖ, ಯಾವದು ದುಃಖ, ಇವುಗಳನ್ನು ಹೆಸರಿಸಿದವರು ಯಾರು?

"ಸುಖ ದುಃಖೇ ಸಮೇಕೃತ್ವಾ" ಎಂದು ಹೇಳುತ್ತೇವೆ. ಸುಖ ದುಃಖ ಎಂದು ಹೆಸರಿಸಿ, ಅವುಗಳನ್ನು ಒಂದೇ ದೃಷ್ಟಿಯಿಂದ ನೋಡುವುದರ ಬದಲು ಹೆಸರಿಸದೇ ಇರುವುದು ಸಾಧ್ಯವೆ?

"ಸುಖಮಾಪತಿತಂ ಸೇವ್ಯಂ, ದುಃಖಮಾಪ ತಿತಂ ತಥಾ, ಚಕ್ರವತ್ ಪರಿವರ್ತಂತೆ ಸುಖಾನಿ ಚ ದುಃಖಾನಿ ಚ" ಎಂದೂ ಹೇಳುತ್ತೇವೆ.

ಸುಖ ದುಃಖಗಳು ಅನಿವಾರ್ಯವೇ ಎಂದಾಗ ಅವುಗಳನ್ನು ಅನುಭವಿಸಲೇಬೇಕಾದಾಗ ಇದು "ಸುಖ, ಇದು ದುಃಖ" ಎಂದು ಏಕೆ ತಾನೆ ಹೆಸರಿಸಬೇಕು? ಯಾವುದನ್ನೂ ಹೆಸರಿಸದೇ, ಕೇವಲ ನಿರೀಕ್ಷಣೆ ಮಾಡಿದಾಗ ಹೇಗೆ ಇರುತ್ತೆ? ಹಾಗೆ ಮಾಡಿಯೇ ನೋಡಿದಾಗ ಅದರ ನಿಜವಾದ ಅನುಭವ ಆದೀತು.

### ಮಾನವ-ಮನಸ್ಸು

"ತನ್ನಂತೆ ಪರರ ಬಗೆದೊಡನೆ ಕೈಲಾಸ ಬಿನ್ನಣವಕ್ಕು" ಎಂದು ಸರ್ವಜ್ಞ ಕವಿ ಹೇಳಿದ್ದಾನೆ.

ಹಾಗೆಂದರೇನು? ಇತರರ ಸುಖ ದುಃಖಗಳು ನನ್ನವೇ ಎಂದು ಅಂತಃಕರಣಪೂರ್ವಕವಾಗಿ ಅರಿಯುವುದೇ? ಅಲ್ಲವೆ ಆ ರೀತಿ ನಡೆಯುವುದೆ? ನಾನು ದುಃಖಕ್ಕೆ ಒಳಗಾದಾಗ, ಏನು ಮಾಡು-

---

**ಜಿಡ್ಡು ಕೃಷ್ಣಮೂರ್ತಿ –ಜೆ.ಕೆ.– ಮೊನ್ನೆ ಫೆಬ್ರುವರಿಯಲ್ಲಷ್ಟೆ ಕೊನೆಯುಸಿರೆಳೆದರು. ಶ್ರೇಷ್ಠತ್ವಕ್ಕಾಗಿ ಸೆಣಸುತ್ತಿರುವ ಧರ್ಮ-ಧರ್ಮಗಳ ಕೋಟಲೆಯ ಮಧ್ಯದಲ್ಲಿ ಜನಕ್ಕೆ ಆಂತರಿಕ ಸ್ವಾತಂತ್ರ್ಯದ ಕಲ್ಪನೆಯನ್ನು ನೀಡಿ-ದವರು ಜೆ. ಕೆ. ಕಳೆದ ಎಪ್ರಿಲ್ ಸಂಚಿಕೆಯಲ್ಲೆ ಅವರ ಕುರಿತು ಲೇಖನವೊಂದು ಪ್ರಕಟ-ವಾಗಿತ್ತು. ಇದು ಶ್ರದ್ಧಾಂಜಲಿಯ ರೂಪದಲ್ಲಿ ಬರುತ್ತಿದೆ. ಆದರೆ ಅವರೇ ಎಚ್ಚರಿಸಿದ್ದಾರೆ- ತಮಗೆ ಯಾವುದೇ ಬಗೆಯ ಸ್ಮಾರಕ ನಿರ್ಮಿಸ-ಕೂಡದೆಂದು. ಅಂದಾಗ ಶ್ರದ್ಧಾಂಜಲಿ ಕೂಡ ಅವರಿಗೆ ಹಿಡಿಸಬಹುದೆ?**

---

ತ್ತೇನೊ, ಇದನ್ನೇ ಇತರರು ದುಃಖಕ್ಕೆ ಒಳಗಾದಾಗ, ಅವರಿಗಾಗಿ ಅದನ್ನೇ ಮಾಡುತ್ತೇನೆಯೇ? ಇದು ಹೇಗೆ ಸಾಧ್ಯ? ನನ್ನನ್ನು ಮಾನವ ಕುಲದಿಂದ ಪ್ರತ್ಯೇಕಿಸಿಕೊಳ್ಳದೇ, 'ಮಾನವ-ಮನಸ್ಸು' ಒಂದು ಎಂದು ಅರಿತು ನಡೆಯಲಾದೀತೆ?"

"ಲೋಕಾಸ್ಸಮಸ್ತಾಃ ಸುಖಿನೋ ಭವಂತು" ಎಂದು ಹೇಳುವುದರ ಅರ್ಥವೇನು? ಇದು ಹೇಗೆ ಸಾಧಿಸೀತು–'ಮಾನವ ಮನಸ್ಸು' ಒಂದು ಎಂದು ಅರಿವಾಗದ ವಿನಾ? ಕೇವಲ ಬೌದ್ಧಿಕವಾಗಿ ಅರಿಯದೇ, ನಿತ್ಯ ಜೀವನದಲ್ಲಿ ಇದನ್ನು ಅನುಭವಿಸಬಹುದಾಗಿದೆ. ಯಾರನ್ನೂ ದ್ವೇಷಿಸದೇ, ಸರ್ವರನ್ನೂ ಪ್ರೀತಿಸುವುದು ಹೇಗೆ ಎಂಬು

ದನ್ನು ಮಾಡಿಯೇ ನೋಡಬೇಕು. ಆಗಲೇ ಅದರ ಅನುಭವ ಸಾಧ್ಯ.

ವರ್ಣಭೇದ, ಜಾತಿಭೇದ, ಮತಭೇದ, ಸಿದ್ಧಾಂತ ಭೇದಗಳಿಂದ ಆದದ್ದಾದರೂ ಏನು? ಈಗ ನಡೆಯುತ್ತಿರುವುದಾದರೂ ಏನು? ಒಂದು ಇನ್ನೊಂದರಕ್ಕಿಂತ ಶ್ರೇಷ್ಠವಾದುದು ಎಂದು, ಸಾಧಿಸುವ ಯತ್ನ ತಾನೆ? ಇದರಿಂದ ಪರಸ್ಪರರಲ್ಲಿ ಘರ್ಷಣೆ ಅಲ್ಲದೆ ಬೇರೆ ಏನನ್ನು ನಾವು ನೋಡುತ್ತಿರುವುದು?

ಸಾವಿರಾರು ವರುಷಗಳಿಂದ ನಡೆದುಬಂದಿರುವ ಈ ಪರಂಪರೆಯಿಂದ ಸಾಧಿಸಿದ್ದಾದರೂ ಏನು? ಇದನ್ನು ಕೊನೆಗಾಣಿಸಿ, ಹೊಸ ದೃಷ್ಟಿಯಿಂದ ಜೀವನವನ್ನು ನೋಡಲು ಸಾಧ್ಯವೆ?

ಹಿಂದಿನದನ್ನು ನೆನೆಯದೆ, ಮುಂದೆ ಏನಾಗುವುದೋ ಎಂದು ಚಿಂತಿಸದೆ, ಇಂದು ಈ ಕ್ಷಣ ಏನು ಮಾಡುತ್ತಿದ್ದೇವೆ ಎಂಬುದರ ಬಗೆಗೆ ಜಾಗೃತರಾಗಿರುವುದು, ನಿತ್ಯ ಜೀವನಕ್ಕೆ ಉಪಯುಕ್ತವಲ್ಲವೆ?

ನಮ್ಮ ಸುತ್ತಲಿರುವ ಭವ್ಯ ಆಕಾಶ, ಸೂರ್ಯ, ಚಂದ್ರ, ನಕ್ಷತ್ರಗಳು, ಸಾಗರ, ಸರೋವರಗಳು, ಕಾನನ, ಪಶು-ಪಕ್ಷಿ ಸಂಕುಲ ಇವೆಲ್ಲವುಗಳ ಮಧ್ಯೆ, ಮಾನವ ಜೀವಿ ಎಷ್ಟು ದೊಡ್ಡದು? ಮಳೆ-ಗಾಳಿ, ಬಿಸಿಲು-ಶೀತ, ನೆರೆ, ಭೂಕಂಪ-ಸೃಷ್ಟಿಯಲ್ಲಿ ಆಗುವ ಎಲ್ಲ ಸ್ಥಿತ್ಯಂತರಗಳು ಸ್ವಾಭಾವಿಕ, ಮಾನವನ ವರ್ತನೆಯೇ ಅಸ್ವಾಭಾವಿಕ. ಅದೇ ದುಃಖಕ್ಕೆ ಮೂಲ. 'ಬೇಕು-ಬೇಡ'ಗಳನ್ನು ಎಣಿಸದೆ, ಕೇವಲ ನಿರೀಕ್ಷಣೆ ಮಾಡುವುದು ಸಾಧ್ಯವೆ?

## ಸಾವಿನೊಂದಿಗೆ ಜೀವನ

"ಜಾತಸ್ಯ ಮರಣಂ ಧ್ರುವಂ" ಎಂದು ಕೇಳಿದ್ದೇವೆ. ಹುಟ್ಟಿದವನಿಗೆ ಸಾವು ನಿಶ್ಚಿತವೆಂದು ಎಲ್ಲರಿಗೂ ಗೊತ್ತು. ಸಾಯುವಾಗ ಯಾವ ವಸ್ತುವೂ, ನಂಬುಗೆಯೂ ಜೊತೆಗೆ ಬರಲಾರದೆಂದು ತಿಳಿದಾಗಲೂ ಜೀವಿಸುತ್ತಿರುವಾಗಲೇ, ಅವುಗಳ ಬಗೆಗಿನ ವ್ಯಾಮೋಹ, ಬಂಧನಗಳನ್ನು ಕಿತ್ತೊಗೆಯಲು ಸಾಧ್ಯವೆ? ನಾವು ಪ್ರತಿ ಕ್ಷಣ ಯೋಚಿಸಬೇಕಾದ ವಿಷಯ. ನಮ್ಮ ನಿತ್ಯದ ಚಟುವಟಿಕೆಗಳನ್ನು ಜಾಗರೂಕತೆಯಿಂದ ನಿರೀಕ್ಷಿಸುವುದೇ ಧ್ಯಾನ.

ಸಾಯುವುದೆಂದರೆ ದೈಹಿಕ, ಮಾನಸಿಕ, ಬೌದ್ಧಿಕ ಬಂಧನಗಳನ್ನು ಕಳಚಿಕೊಳ್ಳುವದು. ಹಾಗಾದರೆ, ಜೀವಿಸುವಾಗಲೇ, ಸ್ವಸಂತೋಷದಿಂದ, ಸುಲಭವಾಗಿ ಯಾವುದೇ ಯತ್ನವಿಲ್ಲದೆ, ಆ ಬಂಧನವನ್ನು ಕಳಚಿಕೊಳ್ಳಲು ಸಾಧ್ಯವೇ? ಅದೇ ಸಾವಿನೊಡನೆ ಜೀವನ. ಮುಪ್ಪಾಗಿ, ರೋಗದಿಂದ ಸಾಯುವದಲ್ಲ. ಶಕ್ತಿ-ಸತ್ವದಿಂದ ಒಡಗೂಡಿ, ಬೌದ್ಧಿಕ ತೀಕ್ಷ್ಣತೆ ಹಾಗೂ ಪ್ರೇಮಳ ಅಂತಃಕರಣದಿಂದ ಜೀವಿಸುತ್ತಿರುವಾಗಲೇ, ಬಂಧನಗಳನ್ನು ಕೊನೆಗೊಳಿಸುವದು—ಸಾಯುವುದು. ಅಂದರೆ ಜೀವಿಸುವಾಗಲೇ, ಸಾವಿನೊಡನೆಯೂ ಬದುಕುವದು. ಸಾವೆಂಬುದು, ಬಹು ದೂರದ, ಜೀವನದ ಕೊನೆಗೆ ಬರುವ—ಅಪಘಾತದಿಂದಲೋ ಬೇನೆ ಅಥವಾ ಮುಪ್ಪಿನಿಂದಲೋ—ಬರುವದಲ್ಲ. ಅದು ನೆನಪಿನ ಉಗ್ರಾಣದಲ್ಲಿರುವ ವಿಷಯಗಳನ್ನು ಕೊನೆಗೊಳಿಸುವದು. ಅದೇ ಸಾವು—ಜೀವನದಿಂದ ಪ್ರತ್ಯೇಕವಾದ ಸಾವಲ್ಲ.

## ಧಾರ್ಮಿಕ ಮನಸ್ಸು

ಧಾರ್ಮಿಕ ಮನಸ್ಸೆಂಬುದು ವಾಸ್ತವಿಕ ಮನಸ್ಸು. ಅದು ವಸ್ತುಸ್ಥಿತಿಯೊಡನೆ ವ್ಯವಹರಿಸುತ್ತದೆ. ಜಗತ್ತಿನ ಒಳಗೆ ಹೊರಗೆ ಏನು ನಡೆಯುತ್ತಾ ಇದೆ—ಎನ್ನುವದರೊಡನೆ ವ್ಯವಹರಿಸುತ್ತದೆ. ಹೊರಗಿರುವುದೆಲ್ಲ ಒಳಗೆ ನಡೆಯುವುದರ ಅಭಿವ್ಯಕ್ತಿಯೇ ಆಗಿದೆ. ಒಳಗೆ-ಹೊರಗೆ ಎನ್ನುವ ಭೇದವೇ ಇಲ್ಲ. ಧಾರ್ಮಿಕ ಜೀವನವು ಕ್ರಮಬದ್ಧ, ಸುವ್ಯವಸ್ಥಿತವಾದ ಜೀವನವಿದ್ದು, ಅದು ಒಬ್ಬನಲ್ಲಿ ವಾಸ್ತವಿಕವಾಗಿ ಇರುವುದರೊಂದಿಗೇ ವ್ಯವಹರಿಸುತ್ತದೆ. ಇದರಲ್ಲಿ ಯಾವದೇ ಭ್ರಮೆ ಇಲ್ಲ, ಹಾಗಾಗಿ ಅವನು ವ್ಯವಸ್ಥಿತವಾದ ನಿಯತ್ತಿನ ಜೀವನವನ್ನು ನಡೆಸುತ್ತಾನೆ. ಈ ರೀತಿಯ ಜೀವನ ಅಬಂಧಿತವಾಗಿ, ಗಟ್ಟಿಯಾಗಿ ನೆಲಸಿದ ಮೇಲೆ, ಧ್ಯಾನ ಎಂದರೇನೆಂಬುದನ್ನು ನಾವು ವಿಚಾರಿಸಲು ಪ್ರಾರಂಭಿಸಬಹುದು. ✡

# ಲೇಸರ್ ಕಿರಣ

**ಎಂ. ಶಿವರಾಮ ಆಚಾರ್**

ಹಗಲಿನಲ್ಲಿ ನಮಗೆ ಸೂರ್ಯನು ಬೆಳಕು ನೀಡುತ್ತಾನೆ. ರಾತ್ರಿಯಲ್ಲಿ ಕೆಲವೊಮ್ಮೆ ಚಂದ್ರನ ಬೆಳಕು ಸಿಗುತ್ತದೆ. ಆದರೆ ಮಾನವನು ಕತ್ತಲನ್ನೋಡಿಸಲು ನಾನಾ ತರದ ದೀಪಗಳನ್ನು ರಾತ್ರಿಯಲ್ಲಿ ಬೆಳಗಿಸುತ್ತಾನೆ. ಈ ಎಲ್ಲಾ ತರಹದ ಬೆಳಕಿನಲ್ಲಿಯೂ ಒಂದು ರೀತಿಯ ಚೈತನ್ಯವು ಅಡಗಿದೆ. ಅಂದರೆ ಬೆಳಕನ್ನೊಳಗೊಂಡ ಚೈತನ್ಯದ ಕಣಗಳು ಎಲ್ಲಾ ತರದ ಪ್ರಕಾಶದಲ್ಲಿಯೂ ತುಂಬಿರುತ್ತವೆ. ಆ ಬೆಳಕಿನ ಕಣಗಳ ಸಮೂಹವನ್ನೇ ಪ್ರಕಾಶದ ಕಿರಣವೆನ್ನು-ತ್ತೇವೆ. ಈ ಕಿರಣಗಳು ಎಲ್ಲೆಡೆಗೆ ಪಸರಿಸುವುದರಿಂದಲೇ ನಮಗೆ ಬೆಳಕಿನ ಪ್ರಕಾಶವು ಸಿಗುತ್ತದೆ. ರಾತ್ರಿಯಲ್ಲಿ ಒಂದು ಕೋಣೆಯಲ್ಲಿ ಒಂದು ದೀಪವನ್ನು ಉರಿಸಿದರೆ ಅದರ ಕಿರಣಗಳಲ್ಲಿರುವ ಬೆಳಕಿನ ಕಣಗಳು ಎಲ್ಲೆಡೆಗೂ ಪಸರಿಸಿ ಕೋಣೆಯನ್ನು ಪ್ರಕಾಶಮಯವನ್ನಾಗಿರಿಸುತ್ತವೆ. ಈ ಬೆಳಕಿನ ಕಣಗಳನ್ನು ಫೋಟಾನ್‌ಗಳೆನ್ನುತ್ತಾರೆ. ಸಾಮಾನ್ಯವಾಗಿ ಎಲ್ಲ ತರದ ಬೆಳಕಿನಲ್ಲಿಯೂ ಈ ಫೋಟಾನ್‌ಗಳು ತೆರೆಗಳೋಪಾದಿಯಲ್ಲಿ ಮುಂದೆ ಚಲಿಸುತ್ತವೆ. ಆದರಿಂದ ಹೊರಟ ಈ ಕಿರಣಗಳು ಎಲ್ಲ ಕಡೆಗೆ ಹರಡಿಕೊಳ್ಳುತ್ತವೆ. ಉದಾ: ಶಾಲೆ ಬಿಟ್ಟ ಬಳಿಕ ಮಕ್ಕಳು ಚೆಲ್ಲಾಪಿಲ್ಲಿಯಾಗಿ ಎಲ್ಲ ದಿಕ್ಕುಗಳಿಗೂ ಚದರಿ ಹೋಗುವಂತೆ ಅಥವಾ ಸಿನೆಮಾ ಬಿಟ್ಟ ಬಳಿಕ ಪ್ರೇಕ್ಷಕರು ಹೊರಬಂದು ಎಲ್ಲ ಕಡೆಗೂ ಚದರುವಂತೆ ಈ ಬೆಳಕಿನ ಫೋಟಾನ್‌ಗಳು ಎಲ್ಲೆಡೆಗೂ ಹರಡುತ್ತವೆ. ಬೆಳಕಿನ ಕಿರಣವು ಚಲಿಸುವ ಅತ್ಯಂತ ವೇಗವೆಂದರೆ ಸೆಕೆಂಡಿಗೆ ೨,೯೯,೭೯೩ ಕಿಲೋಮೀಟರುಗಳು. ಆದರೆ ಲೇಸರ್ ಕಿರಣಗಳು ಸಾಮಾನ್ಯ ಬೆಳಕಿನ ಕಿರಣಗಳಿಂದ ಭಿನ್ನವಾಗಿವೆ. ಏಕೆಂದರೆ ಇದರ ಫೋಟಾನ್‌ಗಳು ಚಲಿಸುವ ರೀತಿ ಇತರ ಬೆಳಕಿನ ಕಿರಣಗಳ ಫೋಟಾನ್‌ಗಳಂತಿಲ್ಲ. ಲೇಸರ್ ಕಿರಣಗಳ ಫೋಟಾನ್‌ಗಳು ಮಿಲಿಟರಿಯಲ್ಲಿ ಸೈನಿಕರು ಸಾಲುಸಾಲಾಗಿ ಒಬ್ಬರ ಹಿಂದೊಬ್ಬರು ಪಥಚಲನ ನಡೆಸಿದಂತೆ ಶಿಸ್ತಿನಿಂದ ಸಮದೂರ ಕಾಯ್ದುಕೊಂಡು ಏಕಮುಖವಾಗಿ ಚಲಿಸುತ್ತವೆ. ಇದೇ ಲೇಸರ್ ಕಿರಣಕ್ಕೂ ಇತರ ಬೆಳಕಿನ ಕಿರಣಗಳಿಗೂ ಇರುವ ಮುಖ್ಯ ತಾರತಮ್ಯ. ಆದುದರಿಂದ ಲೇಸರ್ ಕಿರಣವನ್ನು ಒಂದೆಡೆಗೆ ಗುರಿಯಿಟ್ಟು ಮುಟ್ಟುವಂತೆ ಮಾಡಬಹುದು.

ಲೇಸರ್ ಕಿರಣದ ಪರಿಶೋಧನೆ ೧೯೬೦ರಲ್ಲಾಯಿತು. ಲೇಸರ್ ಅಂದರೆ ಉತ್ತೇಜಕ ವಿಕಿರಣದ ಮೂಲಕ ಹೊರ ಸೂಸುವ ಬೆಳಕಿನ ವರ್ಧನೆ ಎಂಬ ಅರ್ಥ ಬರುವ ಇಂಗ್ಲೀಷ್ ವಾಕ್ಯದ ಸಂಕ್ಷಿಪ್ತ ರೂಪ (LASER = Light Amplification by Stimulated Emission by Radiation) ವಿವಿಧ ದಿಕ್ಕಿಗೆ ಪಸರಿಸುವ ಬೆಳಕಿನ ಕಿರಣಗಳಿಗಿಂತ ಒಂದೇ ದಿಕ್ಕಿಗೆ ನೇರವಾಗಿ ಚಲಿಸುವ ಫೋಟಾನ್-

ಗಳುಳ್ಳ ಈ ಲೇಸರ್ ಕಿರಣವು ಬಹಳ ಶಕ್ತಿಯುತವಾಗಿದೆ. ಶಿಸ್ತುರಹಿತ ಜನ ಸಮೂಹದ ಚಲನೆಗೂ ಶಿಸ್ತಿನ ಸಿಪಾಯಿಗಳ ಚಲನೆಗೂ ಇರುವ ವ್ಯತ್ಯಾಸದಂತೆ ಲೇಸರ್ ಕಿರಣವನ್ನು ವಸ್ತ್ರದ ಮೇಲಾಗಲಿ, ಪ್ಲಾಸ್ಟಿಕ್ಕಿನ ಮೇಲಾಗಲಿ ಹಾದು ಹೋಗುವಂತೆ ಮಾಡಿದರೆ ಅದು ಸೀಳಾಗಬಹುದು. ಲೇಸರ್ ಕಿರಣವು ಲೋಹದ ಎರಡು ತುಂಡುಗಳನ್ನು ಬೆಸೆಯಬಲ್ಲದು. ವೈದ್ಯರು ಶಸ್ತ್ರಕ್ರಿಯೆಯ ಸಮಯದಲ್ಲಿ ದೇಹದ ಅಂಗಗಳಲ್ಲಿ ಸೂಕ್ಷ್ಮವಾದ ಕೊರೆತವನ್ನುಂಟು ಮಾಡಲು ಈ ಲೇಸರ್ ಕಿರಣವನ್ನು ಉಪಯೋಗಿಸಲು ಸಾಧ್ಯವಿದೆ. ಸಾಮಾನ್ಯವಾಗಿ ಉಪಯೋಗಿಸುವ ಲೋಹದ ಚೂರಿ ಅಥವಾ ಇತರ ಶಸ್ತ್ರಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ಲೇಸರ್ ಕಿರಣವನ್ನು ಬಳಸಬಹುದು. ಲೇಸರ್ ಕಿರಣವು ಆಳತೆಯ ಕೋಲಿನಂತೆ ನೇರವಾಗಿರುವುದರಿಂದ ಪರಮಾಣುವಿಗಿಂತಲೂ ಕಡಿಮೆ ಇರತಕ್ಕ ದೂರದ ಅಳತೆಮಾಡಲು ಅದು ಬಹಳ ಉಪಯುಕ್ತ. ಲೇಸರ್ ಕಿರಣವನ್ನು ಎರಡಾಗಿ ಸೀಳಿ ಅವು ಪುನಃ ಒಂದನ್ನೊಂದು ಕೂಡುವಂತೆ ಮಾಡಿದಾಗ ಅದರ ಒಂದು ಸೀಳು ಇನ್ನೊಂದನ್ನು ಸೇರಲು ಮುಂದೆ ಬಂದಾಗ ಒಂದು ಸೀಳು ಇನ್ನೊಂದಕ್ಕಿಂತ ಹೆಚ್ಚು ದೂರ ಸರಿದರೆ ಅವು ತಮ್ಮ ಸ್ಥಾನಪಲ್ಲಟವಾಗಿ ಒಂದನ್ನೊಂದು ಹೊಡೆದು ಕಿರಣವೇ ಅಂತರ್ಧಾನವಾಗುವುದು. ಆಗ ಉಂಟಾಗುವ ಬೆಳಕು ಅಂದರೆ ಸೀಳುಗಳು ಸಮ ದೂರಕ್ಕೆ ಚಲಿಸಿ ಪರಸ್ಪರ ಕೂಡಿದಾಗ ಉಂಟಾಗುವ ಪ್ರಜ್ವಲಿತ ಬೆಳಕು ಅಥವಾ ಪರಸ್ಪರ ಹೊಡೆದುಕೊಂಡು ಸ್ಥಾನಪಲ್ಲಟದಿಂದಾಗಿ ಉಂಟಾಗುವಕತ್ತಲೆ ಇವನ್ನು ಹೆಚ್ಚು ಉಪಯುಕ್ತವಾಗಿ ಬಳಸಿಕೊಳ್ಳುತ್ತಾರೆ. ಇದೇ ಹೋಲೋಗ್ರಾಂ (hologram)ನ ಮೂಲವಾಗಿದ್ದು ಲೇಸರ್ ಕಿರಣದ ಆಕರ್ಷಕ ಉಪಯೋಗವಾಗಿದೆ.

ಲೇಸರ್ ಕಿರಣವನ್ನು ಫೋಟೋಗ್ರಾಫಿಕ್ ಪ್ಲೇಟಿನ ಮೇಲೆ ಹಾಯಿಸಿದಾಗ ಬಿಂಬಗಳು ಕಾಣುತ್ತವೆ. ಅದರ ಮೇಲೆ ಇನ್ನೊಂದು ಪ್ರಕಾಶ ಬೀಳುವಂತೆ ಮಾಡಿದರೆ ಈ ಬಿಂಬವು ಮೂರು ಬದಿಗಳಿದ್ದು ಗೋಚರವಾಗುವ 3-D ಬಿಂಬದಂತೆ ಕಾಣುತ್ತದೆ. ಈ ಬಿಂಬವನ್ನು ನಾವು ಕೈಯಿಂದ ಹಿಡಿಯಬಹುದೆಂಬ ಭ್ರಾಂತಿಯನ್ನು ಉಂಟುಮಾಡಬಲ್ಲುದು.

ಲೇಸರ್ ಕಿರಣದ ಉಪಯೋಗವು ಅಷ್ಟಿಷ್ಟಲ್ಲ. ವೈದ್ಯಕೀಯ ಶಸ್ತ್ರಚಿಕಿತ್ಸೆಯಲ್ಲಂತೂ ಉಂಟಾಗತಕ್ಕ ರಕ್ತಸ್ರಾವವನ್ನು ತಡೆಗಟ್ಟುವುದಲ್ಲದೆ ಶಸ್ತ್ರಕ್ರಿಯೆಯಿಂದುಂಟಾದ ಗಾಯದ ಕುರುಹೂ ಇಲ್ಲದಂತೆ ಮಾಡುತ್ತದೆ. ಮುಖದಲ್ಲಿ ನೆರಿಗೆಗಳೂ ಗಾಯದ ಕಲೆಗಳೂ ಇದ್ದಲ್ಲಿ ಅವನ್ನು ಮಾಸುವಂತೆ ಮಾಡಿ ಮುಖದ ಅಂದವನ್ನು ಹೆಚ್ಚಿಸಲೂ ಮುಖದ ಚರ್ಮಕ್ಕೆ ಹೊಸ ಚೈತನ್ಯವನ್ನೀಯಲೂ ಉಪಯೋಗಿಸಬಹುದಂತೆ. ಹಾಗೆಯೇ ಮುಖದಲ್ಲಿ ಮತ್ತು ಚರ್ಮದಲ್ಲಿ ವಿಷಪೂರಿತ ಕಶ್ಮಲಗಳಿದ್ದರೆ (toxins) ಅವುಗಳ ನಿವಾರಣೆಗೂ, ಅಂತೆಯೇ ಕಾಲವ್ಯತ್ಯಾಸದಿಂದುಂಟಾಗುವ ಚರ್ಮದ ಮೇಲಿನ ದುಷ್ಪರಿಣಾಮಗಳ ನಿವಾರಣೆಗೂ ದೈಹಿಕ ನಿರೋಧ ಶಕ್ತಿಯನ್ನು ಹೆಚ್ಚಿಸಲೂ ಉಪಯೋಗಿಲಾಗುತ್ತದೆ. ಲೇಸರ್ ಕಿರಣಗಳನ್ನು ತಲೆಯ ಅಗ್ರಭಾಗದ ಮೇಲೆ ಹಾಯಿಸಿದಾಗ ನೆತ್ತಿಯಲ್ಲಿರುವ ಸೂಕ್ಷ್ಮರಕ್ತನಾಳಗಳು ಉತ್ತೇಜಿಸಲ್ಪಟ್ಟು ರಕ್ತಸಂಚಾರ ಅಧಿಕವಾಗಿ ಕೂದಲ ಬೆಳವಣಿಗೆಯನ್ನು ಹೆಚ್ಚಿಸಬಹುದೆಂದು ತಿಳಿದು ಬಂದಿದೆ.

ಚೀನೀಯರ ಚಿಕಿತ್ಸಾಕ್ರಮವಾದ ಸೂಜಿ ಚುಚ್ಚುವಿಕೆ (acupuncture)ಯ ಬದಲು ಅಷ್ಟೇ ಪರಿಣಾಮಕಾರಿಯಾಗಿ ಲೇಸರ್ ಕಿರಣಗಳನ್ನು ಉಪಯೋಗಿಸುವುದು ಒಂದು ಕ್ರಾಂತಿಕಾರಕ ಬದಲಾವಣೆ. ಇದರಿಂದ ಹೆಚ್ಚಿನ ರೋಗಗಳ ಚಿಕಿತ್ಸೆಗೆ ಲೇಸರ್ ಕಿರಣದ ಬಳಕೆ ಆರಂಭವಾಗಿದೆ. ಚರ್ಮದ ಹುಳ ಮೇಯುವ ಕಜ್ಜಿಗೆ ಕೂಡ ಅಕ್ಯುಪಂಕ್ಚರ್ ಬದಲು ಲೇಸರ್

ಕಿರಣದ ಬಳಕೆ ಶೇಕಡಾ ೭೫ ರಷ್ಟು ಹೆಚ್ಚಾಗಿದೆ. ಚೀನೀಯರ ಕ್ರಮದಲ್ಲಿ ಸೂಜಿ ಚುಚ್ಚುವಿಕೆಯಿಂದಾಗುವ ನೋವನ್ನು ಲೇಸರ್ ಕಿರಣಗಳ ಬಳಕೆಯು ಸಂಪೂರ್ಣವಾಗಿ ಇಲ್ಲದಂತೆ ಮಾಡುವುದು. ಆದುದರಿಂದಲೇ ಜರ್ಮನಿಯನ್ನೊಳಗೊಂಡು ಯುರೋಪಿನಲ್ಲಿಯೂ, ಸಂಯುಕ್ತ ಅಮೇರಿಕ, ಕೆನಡಾದೇಶಗಳಲ್ಲಿಯೂ, ಚೀನ ಮತ್ತು ಜಪಾನುಗಳಲ್ಲಿಯೂ ಲೇಸರ್‌ಕಿರಣದ ಬಳಕೆ ಹೆಚ್ಚಾಗುತ್ತಿದೆ. ಇನ್ನೊಂದು ಉಪಯೋಗ ವೇನೆಂದರೆ ಶಸ್ತ್ರಕ್ರಿಯೆಗಳಿಗಾಗಲಿ ಸೂಜಿ ಚುಚ್ಚುವಿಕೆಗಾಗಲಿ ಬಳಸುವ ಸಾಧನಗಳನ್ನು ಕುದಿಯುವ ನೀರಿಲ್ಲಿ ಮುಳುಗಿಸಿ ಅದು ರೋಗಾಣುರಹಿತವನ್ನಾಗಿ ಮಾಡಿಯೇ ವೈದ್ಯರು ಉಪಯೋಗಿಸಬೇಕಾಗುತ್ತದೆ. ಲೇಸರ್ ಕಿರಣದ ಉಪಯೋಗದಲ್ಲಿ ಕಿರಣವು ಮಾತ್ರ ದೇಹದ ಭಾಗಕ್ಕೆ ಸ್ಪರ್ಶವಾಗುವುದರಿಂದ ಅದನ್ನು ರೋಗಾಣು ಮುಕ್ತಮಾಡುವ ಅವಶ್ಯಕತೆಯೇ ಇರದು. ಲೇಸರ್ ಕಿರಣದಲ್ಲಿ ವಿದ್ಯುತ್ತು ಇಲ್ಲದಿರುವುದರಿಂದ ದೇಹದ ಮೇಲೆ ವಿರೋಧ ಪರಿಣಾಮವೂ ಉಂಟಾಗಲಾರದು. ಕೆಲವೊಮ್ಮೆ ಆಕ್ಯುಪಂಕ್ಚರಿನಲ್ಲಿ ಸೂಜಿ ಚುಚ್ಚುವಾಗ ವೈದ್ಯನು ವಿಶೇಷ ಕಾಳಜಿ ವಹಿಸದಿದ್ದಲ್ಲಿ ಮುಖ್ಯ ಇಂದ್ರಿಯಕ್ಕೂ ಚುಚ್ಚಿಹೋಗಿ ಹಾನಿಯಾಗುವ ಸಾಧ್ಯತೆ ಇದೆ. ಲೇಸರ್ ಕಿರಣದ ಬಳಕೆಯಲ್ಲಿ ಇಂತಹ ಭಯವೇ ಇರಲಾರದು. ರೋಗಾಣು ಸೋಂಕಿನ ಭಯವೂ ಇರಲಾರದು.

ಲೇಸರ್ ಕಿರಣವನ್ನು ಲೇಸರ್ ನಳಿಗೆಯ ಮೂಲಕ ಹಾದು ಹೋಗುವಂತೆ ಮಾಡಿ ಕಿರಣಗಳನ್ನು ಪಸರಿಸುವ ಯವ(defocusing lens)ದ ಮೂಲಕ ಹಾದು ಹೋಗುವಂತೆ ಮಾಡಬಹುದು. ಲೇಸರ್ ಕಿರಣದ ಶಕ್ತಿಯನ್ನು ಕ್ರಮೀಕರಿಸುವ ಲೇಸರ್ ಯಂತ್ರಗಳ ವ್ಯವಸ್ಥೆಯೂ ಇದೆ. ಲೇಸರ್ ಕಿರಣವನ್ನು ಮುಖದ ಮೇಲೆ ಹಾಯಿಸುವಾಗ ಕಣ್ಣಿಗೆ ಬೀಳದಂತೆ ಬಹಳ ಜಾಗ್ರತೆ ವಹಿಸಬೇಕು. ಇದಕ್ಕಾಗಿ ರೋಗಿಯೂ ವೈದ್ಯನೂ ಕಪ್ಪಾದ ಕನ್ನಡಕಗಳನ್ನು ರಕ್ಷಣೆಗಾಗಿ ಉಪಯೋಗಿಸುತ್ತಾರೆ. ಅಂತೂ ಲೇಸರ್ ಕಿರಣದ ಚಿಕಿತ್ಸಾಕ್ರಮವು ಹೆಚ್ಚು ಸರಳ, ಸುರಕ್ಷಿತ, ಲಾಭದಾಯಕ, ಗುಣದಾಯಕ ಹಾಗೂ ಔಷಧಿರಹಿತ ಕ್ರಮವಾಗಿದೆ. ಸಾಮಾನ್ಯವಾಗಿ ಸಾಂಪ್ರದಾಯಕ ವೈದ್ಯಕೀಯ ಚಿಕಿತ್ಸಾಕ್ರಮವು ಫಲದಾಯಕವೆನಿಸದಿದ್ದಾಗ ಈ ಕ್ರಮವನ್ನು ಉಪಯೋಗಿಸುವುದು ಸೂಕ್ತವೆಂದು ತಿಳಿದಿರುತ್ತಾರೆ.

ಈ ಯುಗದ ಅದ್ಭುತ ಲೇಸರ್ ಕಿರಣವನ್ನು ವರ್ತಮಾನ ಪತ್ರಿಕೆಗಳ ಮುದ್ರಣ, ಆಹಾರ ಜಿನಸುಗಳ ಧಾರಣೆ ನಿರ್ಧಾರ, ದೂರವಾಣಿಯಲ್ಲಿ ಮಾತುಗಳ ರವಾನೆ, ಕಾರುಗಳ ಭಾಗಗಳ ಬೆಸೆಯುವಿಕೆ, ಸಂಗೀತದ ರಿಕಾರ್ಡುಗಳ ತಯಾರಿ, ಶಿಶುಗಳು ಹಾಲು ಚೀಪುವ ರಬ್ಬರಿನ ಕೃತಕ ಮೊಲೆತೊಟ್ಟುಗಳ ರಂಧ್ರ ಕೊರೆಯುವಿಕೆ ಮೊದಲಾದ ಕಾರ್ಯಗಳಲ್ಲಿಯೂ ಉಪಯುಕ್ತವಾಗಿ ಬಳಸಬಹುದೆನ್ನುತ್ತಾರೆ. ಸಂಯುಕ್ತ ಅಮೇರಿದಂತಹ ಮುಂದರಿದ ರಾಷ್ಟ್ರಗಳು ಲೇಸರ್ ಕಿರಣಗಳನ್ನು ಬಾಹ್ಯಾಕಾಶ ಯುದ್ಧಗಳಲ್ಲಿಯೂ ಯಶಸ್ವಿಯಾಗಿ ಉಪಯೋಗಿಸಲಾಗುವಂತೆ ಸಂಶೋಧನೆಗಳನ್ನು ನಡೆಸುತ್ತಿವೆ. ವೈರಿಗಳ ಹೊಡೆತಗಳಿಂದ ಮುಖ್ಯವಾಗಿ ಬಾಂಬು ಇನ್ನಿತರ ವಸ್ತುಗಳಿಂದ ರಕ್ಷಿಸಲು ದೇಶ ರಕ್ಷಣಾಕಾರ್ಯಗಳಲ್ಲಿಯೂ (anti missile defence system) ಲೇಸರ್ ಕಿರಣಗಳ ಸಹಾಯ ಪಡೆಯಲು ಯತ್ನಿಸುತ್ತಿವೆ. ಕೆಲವು ತಜ್ಞರ ಅಭಿಪ್ರಾಯದಂತೆ ಬಾಹ್ಯಾಕಾಶದಂತಹ ಪ್ರದೇಶಗಳಲ್ಲಿ ರಕ್ಷಣಾ ವ್ಯವಸ್ಥೆ ನಿರ್ಮಿಸಲು ಲೇಸರ್ ಕಿರಣದ ಉಪಯೋಗವು ಅಪ್ರಾಯೋಗಿಕವಾಗಿದೆ. ಆದರೆ ಭವಿಷ್ಯದ ಗರ್ಭದಲ್ಲಿ ಏನು ಅಡಗಿರುವುದೋ ಯಾರಿಗೆ ಗೊತ್ತು? ✡


DAVANGERE
ಸೀರೆಗಳು, ಸೂಟಿಂಗ್‌ಗಳು,
ದಾವಣಗೆರೆ
ಶರ್ಟಿಂಗ್‌ಗಳು, ಡ್ರೆಸ್ ಮಟೀರಿಯಲ್‌ಗಳು.
ಶೋರೂಮ್‌ಗಳು: ಕಾವೇರಿ ಭವನ್, ಬೆಂಗಳೂರು 560 009 ದಾಜಿಬನ್‌ಪೇಟ್, ಹುಬ್ಬಳ್ಳಿ 580 020
ಚಿತ್ರದುರ್ಗ ರೋಡ್, ದಾವಣಗೆರೆ 577 002

ಭಾರತವನ್ನು ಮತಾಂತರಿಸಲು
ಒಂದು ಅಮೇರಿಕನ್ ಯೋಜನೆ

# ದಾರಿ ಮೀರಿದ ಮಹತ್ವಾಕಾಂಕ್ಷೆ

ಮೂಲ ಇಂಗ್ಲಿಷ್ : **ಸ್ವಾಮಿ ಜ್ಯೋತಿರ್ಮಯಾನಂದ**
ಕನ್ನಡಕ್ಕೆ : **ಮ. ನಾಗೇಶಭಟ್ಟ**

ಅಮೇರಿಕದ ಈಸಾಯಿ ಮತಪ್ರಸಾರಕ ಸಂಸ್ಥೆಯು ಇತ್ತೀಚೆ ಮನ್‌ಹಟನ್ನಿನ ಕೇಬಲ್ ಟೆಲಿವಿಜನ್ ಜಾಲ 'ಡೇ ಸ್ಪ್ರಿಂಗ್ ಇಂಟರ್ ನ್ಯಾಶನಲ್' ಮೂಲಕ ಎರಡು ಗಂಟೆಗಳ ವಿಶೇಷ ಕಾರ್ಯಕ್ರಮದಲ್ಲಿ ಹಿಂದುತ್ವದ ಮೇಲೆ ತಿರಸ್ಕಾರ ಕಾರುವ, ಭಾರತವನ್ನು ಕುರೂಪಗೊಳಿಸುವ ಚಿತ್ರವನ್ನು ಪ್ರದರ್ಶಿಸಿ "ಎಲ್ಲ ಧರ್ಮಗಳಿಗಿಂತಲೂ ಈಸಾಯಿ ಧರ್ಮವು ಪರಮತಸಹಿಷ್ಣುತೆಯನ್ನು ಬೋಧಿಸುವದಾಗಿದ್ದರೂ ಇಲ್ಲಿಯುವರೆಗೂ ಈಸಾಯಿಗಳು ಎಲ್ಲರಿಗಿಂತ ಅಸಹಿಷ್ಣುಗಳಾಗಿದ್ದಾರೆ" ಎಂಬ ವಾಲ್ಟೈರ್‌ನ ವಿವೇಕಯುಕ್ತ ಸಮೀಕ್ಷೆಯನ್ನೇ ದೃಢೀಕರಿಸಿತು.

ಕ್ರಿಶ್ಚಿಯನ್ ಧರ್ಮದ ಗಗನೋನ್ನತ ಗುಣಗಳನ್ನು ಪ್ರಶಂಸಿಸುವ ಭರದಲ್ಲಿ ಅಮೇರಿಕದ ಈ ಕ್ರಿಶ್ಚಿಯನ್ ಧರ್ಮಪ್ರಸಾರಕ ಸಂಸ್ಥೆಯು ಹಿಂದು ಧರ್ಮವನ್ನು "ಹಿಂದುಗಳಲ್ಲಿ ಅತೀವ ತಪ್ಪು ಗ್ರಹಿಕೆ ಹಾಗೂ ಸ್ವಮತಾಂಧತೆಯನ್ನು ಬಿತ್ತಿದ ಅಪರಾಧಿ ಧರ್ಮ"ವೆಂದು ಜರೆದಿದೆ. ಭಾರತವು ವಿಭಜಿತ, ನೈರಾಶ್ಯಪೂರ್ಣ ಹಾಗೂ ನಿರ್ಜೀವ ದೇಶವಾಗಿದ್ದು ಅದಕ್ಕೆ ಮಾನವತೆಯ 'ಏಕಮಾತ್ರ ರಕ್ಷಕ'ನಾದ ಜೀಸಸ್ ಕ್ರಿಸ್ತನ ಸಂದೇಶದ ಅವಶ್ಯಕತೆ ಇದೆಯೆಂದೂ ಕ್ರಿಶ್ಚಿಯನ್ ಧರ್ಮವನ್ನು ಸ್ವೀಕರಿಸುವುದಕ್ಕೂ 'ಜೀವನದ ನಿಜವಾದ ತತ್ತ್ವ'ವನ್ನು ಪಡೆಯುವುದಕ್ಕೂ ಆತುರರಾದವರಿಗೆ ಅಂಥ ಆಧ್ಯಾತ್ಮಿಕ ಆಶಾದೂರರಾಗಿರುವ ದುರಾದೃಷ್ಟ ಹಿಂದುಗಳಿಗೆ ಕ್ರಿಸ್ತನ ಸಂದೇಶ ಒಂದೇ ಆಶಾಕೇಂದ್ರ ಎಂಬುದು ಅದರ ತಿರುಳು.

"ಭಾರತದಲ್ಲಿ ೬೬.೪ ಕೋಟಿ ಹಿಂದುಗಳಿದ್ದಾರೆ; ಅವರಿಗೆ ಲಕ್ಷಾಂತರ ದೇವರಗಳು. ನಿಶ್ಚಿತವಾದ ಪೂಜಾ ಪದ್ಧತಿಯಿಲ್ಲ. ಕೆಲವರು ಪ್ರಾರ್ಥಿಸುತ್ತಾರೆ, ಕೆಲವರು ಧ್ಯಾನಿಸುತ್ತಾರೆ, ಮತ್ತೆ ಕೆಲವರು ದೈವ ಒಲಿಯುವ ವರೆಗೆ ರಕ್ತ ಬಲಿಯನ್ನು ಕೊಡುತ್ತಾರೆ" ಎಂಬುದಾಗಿ ಹಿಂದು ಧಾರ್ಮಿಕ ಉಪಾಸನೆಗಳ ರೀತಿ ನೀತಿಗಳನ್ನು ಹಳಿಯುವ ವರದಿಯನ್ನು ದೂರದರ್ಶಕ ವಿವರಣಕಾರರು ಬಿತ್ತರಿಸಿದ್ದಾರೆ.

'ಡೇ ಸ್ಪ್ರಿಂಗ್ ಇಂಟರ್‌ನ್ಯಾಶನಲ್' ಸಂಸ್ಥೆಯು ಎರಡು ಸಾವಿರ ವರ್ಷಗಳವರೆಗೂ ಭಾರತದಲ್ಲಿ ಕ್ರಿಶ್ಚಿಯನ್ ಧರ್ಮವು ಇದ್ದರೂ

ಅಲ್ಲಿಯ ಜನಸಂಖ್ಯೆಯು ಶೇಕಡಾ ೩ ಕ್ಕೂ ಕಡಿಮೆ ಜನರನ್ನಷ್ಟೇ ಮತಾಂತರಿಸಲು ಸಾಧ್ಯವಾಯಿತು' ಎಂದು ಗೋಳಿಟ್ಟಿದೆ. ಶೇಕಡಾ ೯೭ರಷ್ಟು ಜನರನ್ನು ಇನ್ನೂ ಮುಟ್ಟಬೇಕಾಗಿದೆ. ಅವರನ್ನು ಮುಟ್ಟುವುದಕ್ಕೆ ಮಾಡಿದ ಯೋಜನೆ ('ಮುಟ್ಟುವುದು' ಎನ್ನುವುದು ಮತಾಂತರಗೊಳಿಸು ಎನ್ನುವ ಶಬ್ದಕ್ಕೆ ಬದಲಾಗಿ ಉಪಯೋಗಿಸುವ ಪರ್ಯಾಯ ಶಬ್ದ) ಎಂದರೆ ಇಡೀ ಭಾರತವನ್ನು ಬರುವ ಹತ್ತು ವರ್ಷಗಳಲ್ಲಿ ಮತಾಂತರಗೊಳಿಸುವ ಯೋಜನೆಯನ್ನು ಬಯಲುಗೊಳಿಸಿದ್ದಾರೆ.

ಅಮೇರಿಕ ಸಂಯುಕ್ತ ಸಂಸ್ಥಾನ ದೂರದರ್ಶನ ಕಾರ್ಯಕ್ರಮದೊಂದಿಗೆ ಭಾರತೀಯರನ್ನು 'ಅವರ ದುಃಖ ಹಾಗೂ ದೈನ್ಯ'ದಿಂದ ಮುಕ್ತಗೊಳಿಸುವ ಡೇ ಸ್ಪ್ರಿಂಗ್ ಇಂಟರ್‌ನ್ಯಾಶನಲ್‌ರವರ ಈ ಸ್ವಯಂಸ್ವೀಕೃತ ಮಹಾಕಾರ್ಯಕ್ಕೆ ಧನಸಹಾಯವನ್ನು ಕೇಳುವ ಮನವಿಯೊಂದನ್ನು ಜೋಡಿಸಲಾಗಿದೆ.

ಈ ದೂರದರ್ಶನ ಕಾರ್ಯಕ್ರಮದ ಸಂದರ್ಭದಲ್ಲಿ ಡೇ ಸ್ಪ್ರಿಂಗ್ ಇಂಟರ್‌ನ್ಯಾಶನಲ್ ಸಂಸ್ಥೆಯು "ಭಾರತೀಯರ ಸಮಸ್ಯೆಯನ್ನು ಪರಿಹರಿಸಲು ಕ್ರಿಸ್ತನ ಸಂದೇಶದ ಹೊರತು ಬೇರೆ ಪರಿಹಾರವೇ ಇಲ್ಲ" ಎಂಬ ಮದರ್ ಥೆರೇಸಾರವರ ಮಾತನ್ನೇ ಉಲ್ಲೇಖಿಸುತ್ತದೆ. ಎಂದರೆ ಭಾರತದ ಈ ನೊಬೆಲ್ ಶಾಂತಿ ಪಾರಿತೋಷಕ ವಿಜೇತೆಯ ಮಾನವಸೇವಾ ಚಟುವಟಿಕೆಗಳ ಹಿಂದೆ ಇರುವ ನಿಜವಾದ ಉದ್ದೇಶ ಮತಾಂತರ ಮಾತ್ರ ಎಂದು ಹೇಳಿದಂತಾಗಿದೆ.

ನಿಯೋಗಿ ಸಮಿತಿಯವರು ಸ್ಪಷ್ಟಪಡಿಸಿದ ಪ್ರಕಾರ ಮಿಶನರಿಗಳ ಎಲ್ಲ ಮಾನವೀಯ ಸೇವೆಗಳು ಮುಗ್ಧ ಜನರನ್ನು ಕೆಲವು ಸಾರಿ ಬೆದರಿಸಿ, ಕೆಲವು ಸಾರಿ ಪ್ರಲೋಭನೆಯ ಪ್ರಭಾವಕ್ಕೆ ಒಳಪಡಿಸಿ ತಮ್ಮ ಮತಾಂತರ ಕಾರ್ಯಗಳನ್ನು ಅವ್ಯಾಹತವಾಗಿ ನಡೆಯಿಸಿಕೊಂಡು ಹೋಗಲಿಕ್ಕೆ ಮಾಡಿಕೊಂಡ ಮುಖವಾಡಗಳು ಮಾತ್ರ. ಈ ಎಲ್ಲ ಚಟುವಟಿಕೆಗಳ ಮೂಲದಲ್ಲಿ ತಮ್ಮ ಸಂಖ್ಯೆಯ ಆಧಾರದ ಮೇಲೆ ಕ್ರಿಶ್ಚಿಯನ್ ರಾಜ್ಯವನ್ನು ಕೊರೆದು ತೆಗೆಯುವ ಮಹತ್ವಾಕಾಂಕ್ಷೆ ಇದೆ. ಈ ಏಕಮಾತ್ರ ಸಾಧನೆಗೆ ಅವರು ಅಸಂಖ್ಯ ಕೋಟಿ ಹಣವನ್ನು ಖರ್ಚು ಮಾಡುತ್ತಿದ್ದಾರೆ.

ಮಹಾತ್ಮಾ ಗಾಂಧೀಯವರ ಹೇಳಿಕೆಗಳ ಆಧಾರವನ್ನು ಭಾರತದಲ್ಲಿಯ ಮತಪ್ರಸಾರಕ ಧರ್ಮಯುದ್ಧಕ್ಕೆ ಅನುಕೂಲಕರವಾಗಿ ಬಳಸಿಕೊಂಡ ಈ ಮತಪ್ರಸಾರಕ ಸಂಸ್ಥೆಯು ಮಹಾತ್ಮರು ಹೇಳಿದ ಈ ಕೆಳಗಿನ ಶಬ್ದಗಳನ್ನು ಕೂಲಂಕಷವಾಗಿ ಪರಾಮರ್ಶಿಸಬೇಕು: "ಅನೇಕ ದೋಷಗಳಿದ್ದರೂ ತನ್ನ ಮೇಲೆ ಒಳಗಿನಿಂದ ಹಾಗೂ ಹೊರಗಿನಿಂದ ಕಾಲಕಾಲಕ್ಕೆ ನಡೆದ ದಾಳಿಯನ್ನು ಎದುರಿಸಿಯೂ ನಿಂತಿರುವ ಹಿಂದು ಸಮಾಜದ ಸೌಧವನ್ನು ಉಧ್ವಸ್ಥಗೊಳಿಸುವ ಹಾಗೂ ಭಾರತೀಯರನ್ನು ಮತಾಂತರಗೊಳಿಸುವ ಆಂತರಿಕ ಹೇತುವನ್ನು ಹೊಂದಿರದೆ ಮಾನವಸೇವೆಗೆ ಮಾತ್ರ ತಮ್ಮ ಪ್ರಯತ್ನವನ್ನು ಸೀಮಿತಗೊಳಿಸಿದರೆ ಕ್ರಿಶ್ಚಿಯನ್ ಮಿಶನರಿಗಳು ಭಾರತಕ್ಕೆ ತಮ್ಮ ನಿಜವಾದ ಸೇವೆಯನ್ನು ಸಲ್ಲಿಸಿದಂತಾಗುತ್ತದೆಂಬ ಭಾವನೆಯು ನನ್ನಲ್ಲಿ ದಿನದಿನವೂ ಬೆಳೆಯುತ್ತಿದೆ. ಭಾವನೆಯಿಲ್ಲದ ಮತಾಂತರವು ಕೇವಲ ನಾಮ ಮಾತ್ರ ಧರ್ಮ ಬದಲಾವಣೆಯೇ ಹೊರತು ಜೀವನದಲ್ಲಿ ಪರಿವರ್ತನೆ ತರಬಲ್ಲ ಧರ್ಮಾಂತರವಾಗಲಾರದು. ನನ್ನ ಮತದಲ್ಲಿರುವ ನನ್ನ ವಿಶ್ವಾಸವು ನನ್ನ ಮಕ್ಕಳು ಭಾವನೆಯಿಲ್ಲದೆಯೇ ತಮ್ಮ ಮಾತೃಧರ್ಮವನ್ನು ತ್ಯಜಿಸದಂತೆ ತಡೆಯಲು ನನಗಿರುವ ಅನಾಸಕ್ತಿಯನ್ನು ಕಿತ್ತು ಹಾಕುತ್ತದೆ. ನೀವು ನನ್ನ ಮಕ್ಕಳನ್ನು ಆತ್ಮ ನಿಷ್ಠವಲ್ಲದ ಪ್ರಾಪಂಚಿಕ ಪ್ರಲೋಭನೆಗಳನ್ನು ಒಡ್ಡಿ ತಪ್ಪು ದಾರಿಗೆ ಎಳೆದರೆ ನಿಮ್ಮ ಬಗ್ಗೆ ನನಗೆ ಏನೂ ಗೌರವ ಉಳಿಯಲಾರದು."

ಗಾಂಧೀಜಿ ಒಮ್ಮೆ "ತಮಗೇನಾದರೂ ಕಾಯಿದೆ ಮಾಡುವ ಅಧಿಕಾರವಿದ್ದದ್ದೇ ಆಗಿದ್ದಲ್ಲಿ ಮೊಟ್ಟ ಮೊದಲು ಭಾರತದಲ್ಲಿ ನಡೆಸುತ್ತಿರುವ ಮತಾಂತರ ಚಟುವಟಿಕೆಗಳನ್ನು ನಿಷೇಧಿಸುವ ಕಾಯಿದೆಯನ್ನು ಮಾಡುತ್ತಿದ್ದೆ" ಎಂಬುದಾಗಿಯೂ ಹೇಳಿದ್ದಾರೆ.

ಒಟ್ಟಿನಲ್ಲಿ "ಅಮೆರಿಕದ ಒಂದು ಶಕ್ತಿಯುತವಾದ ಸಂಸ್ಥೆಯು ಅಲ್ಲಿ ಹಣವನ್ನು ಸಂಗ್ರಹಿಸುತ್ತಿರುವಂತೆಯೇ ಅದನ್ನು ಭಾರತದಲ್ಲಿ ಮತಾಂತರಿ

ಗಳನ್ನು ಕೊಳ್ಳಲು ಉಪಯೋಗಿಸುತ್ತಿದೆ. ಇನ್ನು ಹತ್ತು ವರ್ಷಗಳಲ್ಲಿ ಇಡೀ ದೇಶವನ್ನು ಬುಡ ಮೇಲು ಮಾಡುವ ವಿಶ್ವಾಸ ತಳೆದಿದೆ. ಭಾರತದ ಕ್ರಿಶ್ಚಿಯನ್ ಸಂಸ್ಥೆಗಳು ರಹಸ್ಯವಾಗಿ ಇದರೊಂ-ದಿಗೆ ಕೂಡಿಕೊಳ್ಳುತ್ತವೆ. ಅವುಗಳಿಗೆ ಎರಡು ಮುಖಗಳಿವೆ: ಒಂದು ಭಾರತದಲ್ಲಿ, ಇನ್ನೊಂದು ಅಮೇರಿಕದಲ್ಲಿ" ಎಂಬ ಅಂಶಗಳನ್ನು ಹೊರಗೆಡ ಹಿದ ಪ್ರಸ್ತುತ ದೂರದರ್ಶನ ಕಾರ್ಯಕ್ರಮ ಯೋಜಕರಿಗೆ ಧನ್ಯವಾದಗಳು.

ಅಮೆರಿಕದ ಕ್ರಿಶ್ಚಿಯನ್ ಮಿಶನರಿಗಳು ತಮ್ಮ ನಾಡಿನಲ್ಲಿ ಭಾರತದ ಬಗ್ಗೆ ಅಪಪ್ರಚಾರ ಮಾಡುತ್ತಿರುವ ಜಿಗುಟುತನ ಹೊಸದೇನೂ ಅಲ್ಲ. ೧೯ನೇ ಶತಮಾನದ ಕೊನೆಯ ದಶಕದ ಸುದೂರ ಕಾಲಾವಧಿಯಲ್ಲಿ, ಹಿಂದು ಸಂನ್ಯಾಸಿ ಸ್ವಾಮಿ ವಿವೇಕಾನಂದರು ಅಮೇರಿಕದಲ್ಲಿ ಆಧ್ಯಾತ್ಮಿಕ ಪ್ರಚಾರ ಸೇವೆಯಲ್ಲಿ ತೊಡಗಿ ಸ್ಫೂರ್ತಿಯುತ ಧಾರ್ಮಿಕ ಪ್ರವಚನಗಳಿಂದ ಅಪಾರ ಜನಪ್ರಿಯತೆ ಪಡೆದಾಗ ಕರುಬಿದ ಕ್ರಿಶ್ಚಿಯನ್ ಮಿಶನರಿಗಳು ಸ್ವಾಮೀಜಿಯ ವಿರುದ್ಧ ಕೀಳು ಮಟ್ಟದ ನಿಂದೆಯಲ್ಲಿ ತೊಡಗಿದರಲ್ಲದೆ ಅವರ ದೇಶ ಮತ್ತು ಧರ್ಮದ ವಿರುದ್ಧ ಎಲ್ಲ ರೀತಿಯ ಅಪಪ್ರಚಾರಕ್ಕೂ ಇಳಿದರು.

ಅಮೆರಿಕದ ಕ್ರಿಶ್ಚಿಯನ್ ಮಿಶನರಿಗಳು ಶಾಲೆಗೆ ಹೋಗುವ ಎಳೆ ಮಕ್ಕಳ ಮನಸ್ಸಿನಲ್ಲಿ ಹಿಂದುಗಳ ಬಗ್ಗೆ ಆಳವಾದ ದ್ವೇಷ ನಿರ್ಮಾಣವಾಗುವಂತೆ ಮಾಡುವ ಅವರ ಶೈಕ್ಷಣಿಕ ಪದ್ಧತಿಗಳ ಮೇಲೆ ಬೆಳಕು ಚೆಲ್ಲಿದ್ದಾರೆ ಸ್ವಾಮಿ ವಿವೇಕಾನಂದರು. ಅಮೇರಿಕದ ಮಕ್ಕಳು ಓದುವ ಕೆಲವು ಶಾಲೆಯ ಪುಸ್ತಕಗಳಲ್ಲಿ ಹಿಂದು ಧರ್ಮವನ್ನು ಕ್ರಿಶ್ಚಿಯನ್ ತತ್ವಕ್ಕೆ ವಿರುದ್ಧವಾದ, ಸಂಕು ಚಿತ ಭಾವನೆಯಿಂದ ಪ್ರೇರಿತವಾದ ಧರ್ಮ ವೆಂದು ಬರೆಯಲಾಗಿದೆ. ಭಾರತದಲ್ಲಿ ಮಕ್ಕ ಳನ್ನು ಗಂಗಾನದಿಯಲ್ಲಿ ಎಸೆಯಲಾಗುತ್ತದೆ, ಜಗನ್ನಾಥ ಸ್ವಾಮಿಯ ರಥದ ಗಾಲಿಯ ಬುಡಕ್ಕೆ ಮಲಗಿಸಲಾಗುತ್ತದೆ ಎನ್ನುವ ರೀತಿಯ ಸುದ್ದಿಗಳನ್ನೂ ಹಬ್ಬಿಸುತ್ತಿದ್ದಾರೆ. ಇದು ಹಿಂದು ಗಳ ಮೇಲೆ ಅಸಭ್ಯ, ಮೂಢ ಹಾಗೂ ದುಷ್ಟ ರೀತಿಯಲ್ಲಿ ಸೇಡು ತೀರಿಸಿಕೊಳ್ಳುವ ಪೈಶಾಚಿಕ ಪದ್ಧತಿ. ಈ ರೀತಿಯಿಂದ ಅಮೇರಿಕದ ನಿವಾಸಿಗ ಳಲ್ಲಿ ಹಿಂದುಗಳ ಬಗ್ಗೆ ದ್ವೇಷವನ್ನು ಕಲ್ಪಿಸಲಾಗು ತ್ತಿದೆ. ಮಾನವರ ನಡುವಣ ಸಮಾನತೆಯನ್ನೂ ವಂಶ, ಬಣ್ಣ, ಜಾತಿ ಎಂಬ ವ್ಯತ್ಯಾಸಗಳನ್ನೂ ಮಾನ್ಯ ಮಾಡಬಾರದೆಂಬ ತತ್ವವನ್ನು ಬೋಧಿಸ ಲಾಗುತ್ತಿದ್ದ ಅಮೇರಿಕದಲ್ಲೇ ಇದೆಲ್ಲ ನಡೆಯಿತು. ಶತಮಾನಗಳ ಹಿಂದೆ ಕಪಟಿಯಾಗಿದ್ದ 'ಅಂಕಲ್ ಸ್ಯಾಮ್' ಈಗಲೂ ಹಾಗೇ ಮುಂದುವರೆದ್ದಾನೆ.

ಅವರ 'ದೇವದೂತ'ನು ಅವರಿಗೆ ವಿಶ್ವಪ್ರೇಮ ವನ್ನು ಕಲಿಸಿದ್ದಾನೆ, "ನಿನ್ನ ಪಕ್ಕದವನನ್ನು ನಿನ್ನವನೆಂದೇ ಪ್ರೀತಿಸು" ಎಂದು ಹೇಳಿದ್ದಾನೆ. ಆದರೆ ಎಂಥ ವಿಪರ್ಯಾಸ! ಅವನ ಅನುಯಾಯಿ ಗಳು ದ್ವೇಷದ ಬೀಜವನ್ನು ಬಿತ್ತುತ್ತಿದ್ದಾರೆ! ಉಳಿದವರು ಅದೇ ಗುರಿ ತಲಪಲು ಬೇರೆ ದಾರಿ ತುಳಿಯುವುದನ್ನು ಕೂಡಾ ಸಹಿಸಲಾರರು! ಅನ್ಯಧರ್ಮದ ಅನುಯಾಯಿಗಳನ್ನು ನಿಂದಿ-ಸುವುದರಲ್ಲೇ ಆನಂದಪಡುತ್ತಿರುವಂತೆ ಕಾಣು ತ್ತದೆ. ಅವರು ತಮ್ಮ ಧರ್ಮವೇ ಏಕಮಾತ್ರ ನಿಜವಾದ ಧರ್ಮ ಎಂದೂ, ಉಳಿದ ಧರ್ಮ-ಗಳೆಲ್ಲ ಸುಳ್ಳು ಎಂದೂ ಯಾರು ಆ ಧರ್ಮದಲ್ಲಿ ನಂಬಿಕೆ ಇಡುವದಿಲ್ಲವೋ, ಆ ಒಬ್ಬನೇ 'ದೇವ ದೂತನ' ಆ 'ಒಂದೇ ಪವಿತ್ರಗ್ರಂಥ'ದಲ್ಲಿ ಭಕ್ತಿ ಇರಿಸುವುದಿಲ್ಲವೋ ಅಂಥವರು ಎಂದೆಂದಿಗೂ ನಾಶವಾದಂತೆಯೇ ಎಂಬ ಭಾವನೆಯನ್ನು ಬೆಳೆಸು ತ್ತಾರೆ. ಧರ್ಮಗಳೆಂದರೆ ಒಂದೇ ಗುರಿಯನ್ನು ಮುಟ್ಟುವುದಕ್ಕೆ ಇರುವ ಬೇರೆ ಬೇರೆ ದಾರಿಗಳು ಎಂಬ ವಿಚಾರ ಅವರಿಗೆ ಅಪಥ್ಯ. ಕ್ರೈಸ್ತ ಧರ್ಮ ಉಳಿದ ಧರ್ಮಗಳಿಗೆ ಸಮಾನವೆಂದು ತಿಳಿಯು ವುದು ಕೂಡಾ ತಮ್ಮ ಧರ್ಮಕ್ಕೇ ಅಪಮಾನ ವೆಂದು ಪರಿಗಣಿಸುವಷ್ಟು ಮಟ್ಟಿಗೆ ಅದು ಶ್ರೇಷ್ಠವೆಂದು ಅವರು ತಿಳಿಯುತ್ತಾರೆ. ಹೀಗೆ ಸಂಕೀರ್ಣತೆ ಅಸಹಿಷ್ಣುತೆಯು ದೇಶ ದೇಶಗಳ ಅಸಂಖ್ಯ ಕ್ರಿಶ್ಚಿಯನ್ನರಲ್ಲಿ ಸ್ವಾಭಾವಿಕವಾಗಿದೆ. ಭಾರತದಲ್ಲಂತೂ ಈ ಭಾವನೆಯು ಗರಿಷ್ಠ ಪ್ರಮಾಣದಲ್ಲಿರುವುದನ್ನೂ ಕಾಣುತ್ತೇವೆ.

ಮತಾಂತರ ಚಟುವಟಿಕೆಗಳ ಬಗ್ಗೆ ಹೇಳು-ವುದಾದರೆ ಅವರು "ಹೋಗಿ, ಎಲ್ಲೆಡೆ ಇರುವ ಆ ಎಲ್ಲರನ್ನೂ ನನ್ನ ಅನುಯಾಯಿಗಳನ್ನಾಗಿ

ಮಾಡಿರಿ" ಎನ್ನುವ ಜೀಸಸ್ ಕ್ರಿಸ್ತನ ಆದೇಶ ವನ್ನು ಪಾಲಿಸಬೇಕೆಂಬುದನ್ನು ಮಾತ್ರ ಮಾನ್ಯ ಮಾಡುತ್ತಾರೆ. "ನೀನು ನನ್ನ ಯೋಗ್ಯತೆಯನ್ನು ತೂಗಲು ಇಚ್ಛೆ ಪಡುವುದಿಲ್ಲವಾದರೆ ಇನ್ನೊಬ್ಬರ ಯೋಗ್ಯತಾಮಾಪನ ಮಾಡಬೇಡ. ಏಕೆಂದರೆ ನೀನು ಯಾವ ನಿಕಷದಿಂದ ಇನ್ನೊಬ್ಬರ ಯೋಗ್ಯತೆ ಯನ್ನಳೆಯುತ್ತೀಯೋ ಅದರಿಂದಲೇ ನೀನೂ ಅಳೆಯಲ್ಪಡುತ್ತೀ" ಎಂಬ ಕ್ರಿಸ್ತನ ವಿವೇಕ ಯುತ ಬೋಧನೆಯನ್ನು ಮರೆತಂತೆ ಕಾಣುತ್ತದೆ.

ವಿಶ್ವಪ್ರೇಮ ಮತ್ತು ಶಾಂತಿಗೆ ಬದ್ಧವಾಗಿ ರುವ ಕ್ರಿಶ್ಚಿಯನ್ ಧರ್ಮಕ್ಕೆ, ಮಾನವತೆಯ (ಜಪಾನ್) ಮೇಲೆ ಆಟಂ ಬಾಂಬ್ ಹಾಕಿದ ಶ್ರೇಯಸ್ಸು ಹೋಗುತ್ತದೆ ಎಂಬುದು ಸರ್ವ ವಿದಿತ.

ಈ ರಕ್ತರಂಜಿತವಾದ ಎರಡು ಜಾಗತಿಕ ಮಹಾಯುದ್ಧಗಳನ್ನು ನಡೆಸಿದ್ದು, ಕ್ರಿಶ್ಚಿಯನ್ ರಾಷ್ಟ್ರಗಳೇ. ಮೊದಲನೆಯ ಜಾಗತಿಕ ಮಹಾಯುದ್ಧದಲ್ಲಿ ಚರಿತ್ರೆಯು ಕಂಡರಿಯ ದಂಥ ರೀತಿಯಲ್ಲಿ ಪಾಶ್ಚಿಮಾತ್ಯನು ತನ್ನ ಸೋದರನಾದ ಮಾನವನನ್ನೇ ಕೊಲೆಗೈದ. ಯುದ್ಧಾನಂತರದ ನಿರಂತರ ದ್ವೇಷ ಮತ್ತಷ್ಟು ವಿನಾಶಕರವಾಗಿ ಪರಿಣಮಿಸಿ ದ್ವಿತೀಯ ಮಹಾ ಯುದ್ಧದಲ್ಲಿ ಪರ್ಯವಸಾನವಾಗಿ ನಾಜಿಗಳ ಕ್ರೂರತನ ಹಾಗೂ ಲಕ್ಷಾಂತರ ಯೆಹೂದ್ಯರ ಕಗ್ಗೊಲೆಗಳ ಮುಂದುವರಿದವು. ಇಂದಿಗೂ ಇದೇ ಕ್ರಿಶ್ಚಿಯನ್ ರಾಷ್ಟ್ರಗಳೇ ಈ ಗ್ರಹದ ಮೇಲಿರುವ ಜೀವರುಗಳಿಗೆ ಜೀವಭಯ ವನ್ನುಂಟುಮಾಡುವ ಪ್ರಾಣಹಾರಕ ಅಣ್ವಸ್ತ್ರ ಗಳನ್ನು ಸಂಗ್ರಹಿಸುತ್ತಿವೆ. ಜರ್ಮನಿಯಲ್ಲಿ ಪ್ರಾಟೆಸ್ಟೆಂಟರು–ಕ್ಯಾಥೊಲಿಕ್ಕರ ನಡುವೆ ನಡೆದ ಮೂವತ್ತು ವರ್ಷಗಳ ಹಿಂಸಾತ್ಮಕ ಯುದ್ಧದಲ್ಲಿ ಜರ್ಮನಿಯ ಜನಸಂಖ್ಯೆಯನ್ನು ಎರಡೂವರೆ ಕೋಟಿಯಿಂದ ಅರ್ಧಕೋಟಿಗೆ ಇಳಿಸುವಷ್ಟು ಪ್ರಮಾಣದಲ್ಲಿ ಅದೂ ಸಮಾನ ಧರ್ಮ ಮತ್ತು ಸಮಾನ ದೇವರ ಹೆಸರಿನಲ್ಲಿ ಮಾರಣ ಹೋಮ ನಡೆಯಿತು. ಎಲ್ಲ ಪ್ರಾಮಾಣಿಕ ಚಿಂತನಶೀಲ ಯುರೋಪಿಯನ್ನರಿಗೆ ಇದು ಅಸಹನೀಯ ವೇದನೆಯ ಅನುಭವವನ್ನು ತಂದಿದೆ. ಅವರು ಕ್ರಿಶ್ಚಿಯನ್ ದೇವನ ಹಾಗೂ ಜಾತಿಯ ಬಗ್ಗೆ ನಂಬಿಕೆ ಇರಿಸಿದ್ದಾರೆ. ಆದರೂ ಬಹು ದೂರ ದಲ್ಲಿರುವ, ಸ್ವರ್ಗದಲ್ಲಿ ಕುಳಿತಿರುವ 'ಒಬ್ಬನೇ ಒಬ್ಬನಾದ' ಆ ದೇವನ ಹೆಸರಿನಲ್ಲಿ ಪರಸ್ಪರ ಬಂಧುಗಳಲ್ಲಿ ಸರ್ವನಾಶಕಾರಿ ಯುದ್ಧವು ಹೇಗೆ ನಡೆಯಿತು?

ಅಲ್ಲದೆ, ಪೋಪ್‌ನ ಆಜ್ಞಾಂಕಿತರಾಗಿ ಪೋರ್ಚುಗೀಸರು ತಮ್ಮ ಮತಪ್ರಸಾರದ ಉತ್ಸಾಹದಲ್ಲಿ ಗೋವೆಯ ಹಿಂದುಗಳ ಶರೀರ ಗಳ ಮೇಲೆ ಮೊಳೆ ಬಡಿಯುವ ಮೂಲಕ ತೀವ್ರ ವೇದನೆಯನ್ನುಂಟುಮಾಡಿ, ಅಮಾನುಷ ಚಿತ್ರ ಹಿಂಸೆ ಕೊಟ್ಟು ಹಿಂದುಗಳನ್ನು ದೇಶ ಬಿಟ್ಟು ಓಡುವಂತೆ ಒತ್ತಡ ತಂದ ವಿಷಯ ಗೊತ್ತಿದ್ದದ್ದೆ.

ಈ ಸಂದರ್ಭದಲ್ಲಿ ಮತಾಂತರಿತ ಕ್ರಿಶ್ಚಿಯನ ನೊಬ್ಬ ಹಿಂದು ಧರ್ಮಕ್ಕೆ ಮರಳಿ ಬಂದ ನಂತರ ಹೊರಗೆಡಹಿದ ಅಂಶಗಳು ಹೀಗಿವೆ. "ಭಗವಂತನ ದಯೆ, ನಾವು ನಿಶ್ಚಿತವಾದ ಒಂದು ಮತವನ್ನು ಒಪ್ಪಲಿಲ್ಲವೆಂಬ ಕಾರಣ ಮಾತ್ರದಿಂದ ಸಾವಿರಾರು ಸ್ತ್ರೀಪುರುಷರನ್ನು ಚಿತ್ರ ಹಿಂಸೆಗೆ ಗುರಿಪಡಿಸುವಂಥ 'ವಿಚಾರಣೆ'ಯ (Inqiusition) ಕಾಲದಲ್ಲಿ ಜೀವಿಸುತ್ತಿಲ್ಲ. ಆದರೆ, ಅದರ ಹಾಗೆಯೇ ಈ ಧಾರ್ಮಿಕ ಅನುಕಂಪ ಮತ್ತು ಸಹಿಷ್ಣುತೆಯ ಈ ಪಾಠವನ್ನು ಮನಸಾ ಒಪ್ಪಬಹುದು. ಪೌರ ಸ್ತ್ಯರ ಪ್ರಭಾವದಿಂದಾಗಿ ಪಾಶ್ಚಿಮಾತ್ಯರು ಈ ಪಾಠವನ್ನು ಕಲಿಯತೊಡಗಿದ್ದಾರೆ. ಈ ಮುಂಚಿನ ದಿನಗಳಲ್ಲಿ ತೊಡಗಿಸಿದ್ದ ಭಯಂಕರ ಬರ್ಬರ ರೀತಿಗಳೆಡೆ ಹೊರಳಿ ನೋಡುವಂಥ ಕ್ರಿಶ್ಚಿಯನ್ನರು ಬಹುಶಃ ಈಗ ಯಾರೂ ಇರ ಲಾರರು. ಇಂದು ಅದನ್ನು ನಿಜವೆಂದೂ ನಾವು ನಂಬಲಾರೆವು. ಆದರೆ ಸ್ಪೇನ್ ಒಂದರಲ್ಲೇ 'ವಿಚಾರಣೆ'ಯಲ್ಲಿ ಮೂವತ್ತು ಸಾವಿರಕ್ಕೂ ಹೆಚ್ಚು ಜನರನ್ನು ಜೀವ ಸಹಿತ ಸುಟ್ಟು ಹಾಕ ಲಾಗಿದೆ ಎಂದು ದಾಖಲೆಗಳೇ ಹೇಳುತ್ತವೆ! ಸ್ವಲ್ಪ ಯೋಚಿಸಿ! ಇದು ನಡೆದದ್ದು. ರಾಣಿ ಇಸಾಬೆಲ್ಲಾ ಹೇಳಿದಂತೆ "ಇದೆಲ್ಲಾ ಕ್ರಿಸ್ತನ ಮೇಲೆ ಅವನ ತಾಯಿ ವರ್ಜಿನ್ ಮೇರಿಗಿದ್ದ ಪ್ರೇಮಕ್ಕಾಗಿ. ಕ್ರಿಶ್ಚಿಯನ್ ಚರ್ಚುಗಳು

ಹಾಗೂ ಕ್ರಿಶ್ಚಿಯನ್ ಹುತಾತ್ಮರದು ಒಂದು ದುಃಖದಾಯಕ ಕಥೆ. ಇದು ಹಿಂದಿನ ಕಥೆ. ನಾವು ಅದರ ಬಗ್ಗೆ ಹೆಚ್ಚು ವಿಚಾರ ಮಾಡಬೇಕಿಲ್ಲ. ಯಾರು ಕ್ರಿಸ್ತನ ಅನುಯಾಯಿಗಳೆಂದು ಕರೆಯಿಸಿಕೊಳ್ಳುತ್ತಾರೋ ಅವರು ಮಾಡಿದ ಅಪರಾಧಗಳಿಗೆ ಕ್ರಿಸ್ತ ಹಾಗೂ ಅವನ ಉಪದೇಶಗಳನ್ನು ದೂಷಿಸುವುದು ಉಚಿತವಲ್ಲ. ಕ್ರಿಶ್ಚಿಯನ್ ಸ್ನೇಹಿತರು ನಮ್ಮನ್ನು ನಂಬಿಸಲು ಮಾಡಿದ ಪ್ರಯತ್ನದ ಪ್ರಮಾಣಕ್ಕನುಗುಣವಾಗಿ ಕ್ರಿಶ್ಚಿಯನ್ ನಾಗರಿಕತೆ ಹಾಗೂ ತತ್ವಗಳು ಪರಿಪೂರ್ಣವಾಗಿ ಯಶಸ್ವಿಯಾಗಿವೆಯೇ? ವರ್ಗಗಳ ಅಂತರ, ವಿಗ್ರಹಾರಾಧನೆಯ ದಮನ, ಸ್ಪರ್ಧೆ– ಈ ಎಲ್ಲಾ ದೂಷಣೆಗಳು ಪಾಶ್ಚಿಮಾತ್ಯ ರಾಷ್ಟ್ರಗಳನ್ನು ಮೌನಗೊಳಿಸಲು ಉಪಯೋಗ ಬೀಳಬಹುದು. ಈ ಸ್ಥಿತಿಗೆ ನಾವು ಚರ್ಚುಗಳನ್ನು ನಿಂದಿಸುವುದಿಲ್ಲ. ಆದರೆ ಯಾವ ಚರ್ಚುಗಳು ಉನ್ನತ ನಾಗರಿಕತೆಯನ್ನು ಕಲಿಸುವುದಕ್ಕೆ ಬೇರೆ ಬೇರೆ ರಾಷ್ಟ್ರಗಳಿಗೆ ಪಾದ್ರಿಗಳನ್ನು ಕಳುಹಿಸುವವೋ ಆ ಚರ್ಚುಗಳಿಗೇ ತಮ್ಮ ರಾಷ್ಟ್ರವನ್ನು ಶುದ್ಧ, ಸ್ವಚ್ಛ ಹಾಗೂ ಪ್ರಾಮಾಣಿಕವಾಗಿ ಇಡಲು ಸಾಧ್ಯವಾಗಿಲ್ಲ. ಆದ್ದರಿಂದ ಪಶ್ಚಿಮದ ಅನೇಕ ಜನರು ಚರ್ಚಿನಲ್ಲಿದ್ದ ತಮ್ಮ ವಿಶ್ವಾಸವನ್ನು ಕಳೆದುಕೊಂಡಿದ್ದಾರೆ. ನಿಜವಾದ ಶಾಂತಿ ಸಮಾಧಾನಕ್ಕೆ ಹಾಗೂ ಕ್ರಿಸ್ತನ ನಿಜವಾದ ಬೋಧನೆಯ ವಿಶಾಲವಾದ ಹಾಗೂ ಯಥಾರ್ಥವಾದ ಕ್ರೋಢೀಕರಣಕ್ಕೆ ಮತ್ತೂ ಅವನ ಆದೇಶಗಳನ್ನು ಕಾರ್ಯಗತಗೊಳಿಸುವುದಕ್ಕೆ ಮತ್ತೆ ಬೇರೆಡೆ ನೋಡುತ್ತಿದ್ದಾರೆ.

ಈ ಜನರಿಗೆ ಕೊಡಲಿಕ್ಕೆ ಭಾರತದ ಬಳಿ ತನ್ನದೇ ಆದ ಒಂದು ಸಂದೇಶವಿದೆ ಎಂಬುದನ್ನು ನಾವು ಆತ್ಮವಿಶ್ವಾಸದಿಂದ ಹೇಳಲಾರೆವೇ? ಧಾರ್ಮಿಕ ವಿಚಾರದಲ್ಲಿ ಭಾರತಕ್ಕೆ ಪಶ್ಚಿಮ ರಾಷ್ಟ್ರಗಳಿಂದ ಕಲಿಯಬೇಕಾದದ್ದು ಏನೂ ಇರುವುದಿಲ್ಲ. ಹಿಂದು ಧರ್ಮವನ್ನು ಒಡೆಯುವ ಹಾಗೂ ಅದರ ಜಾಗದಲ್ಲಿ ತಮ್ಮ ಧರ್ಮವನ್ನು ತರುವ ಪ್ರಯತ್ನ ಮಾಡುವ ಪೂರ್ವದಲ್ಲಿ ಕ್ರಿಶ್ಚಿಯನ್ ಮಿಶನರಿಗಳು ಈ ವಿಷಯವನ್ನು ಮೊದಲು ಪರಿಗಣಿಸಬೇಕು. ಪಶ್ಚಿಮಕ್ಕೆ ಪೂರ್ವದ ಸಂದೇಶದ ಅವಶ್ಯಕತೆ ಇದೆ. ಸ್ವಾಮಿ ವಿವೇಕಾನಂದರು ಹಾಗೂ ಅವರ ಪಥದಲ್ಲೇ ಮುನ್ನಡೆದ ಅನೇಕ ಮಹನೀಯರಿಂದ ಈ ಸಂದೇಶವು ಆಗಲೇ ಅಲ್ಲಿಗೆ ಹೋಗಿದೆ; ಹೋಗುತ್ತಲಿದೆ ಕೂಡ. ಸ್ವಾಮಿ ವಿವೇಕಾನಂದರ ಈ ಕಾಲದ ಸಂದೇಶವನ್ನು ನಾವು ಒಪ್ಪುವೆವಾದರೆ ಇದೇ ಕಾರಣದಿಂದ ಮಾತ್ರ. ಏಕೆಂದರೆ, ಅವರ ಸಂದೇಶದಲ್ಲಿ ಸಾರ್ವಕಾಲಿಕ ವಿಚಾರಶ್ರೇಷ್ಠತೆ, ಎಲ್ಲ ಧರ್ಮಗಳ ಅಡಿಪಾಯವೆನಿಸಿದ ಆ ಮೂಲ ಸಿದ್ಧಾಂತವನ್ನು ಕಾಣುತ್ತೇವೆ. ಯಾವ ಸಿದ್ಧಾತವನ್ನು ಅವರ ಗುರುಗಳು ಭಾರತದಲ್ಲಿ ಪುನರುಜ್ಜೀವಿಸಿದರೋ, ಆ ಶಾಶ್ವತವಾದ, ಸನಾತನ ಧರ್ಮ, ಹಿಂದು ಧರ್ಮದ ಸಂದೇಶವನ್ನೇ ಅವರು ಪಶ್ಚಿಮಕ್ಕೆ ಒಯ್ದಿದ್ದರು.

ವಾಸ್ತವವಾಗಿ, ಸೆಮೆಟಿಕ್ ಧರ್ಮಗಳ ಹಾಗೆ ಹಿಂದು ಧರ್ಮವು 'ಏಮ್ಮುಖ ಸಂಚಾರ'ವಲ್ಲ. ಇದು 'ರವಿವಾರದ ಧರ್ಮ'ವಲ್ಲ. ಇದು ಒಂದೇ ಧರ್ಮ ಗ್ರಂಥ, ಹಾಗೂ "ಯಾರ ಆದೇಶಗಳನ್ನು ಪ್ರತಿ ಮಾತನಾಡದೇ ಪಾಲಿಸದಿದ್ದರೆ ಅಂಥವ ಶಾಶ್ವತ ನರಕಕ್ಕೆ ಅಟ್ಟಬಲ್ಲನೋ ಅಂಥ ಒಬ್ಬನೇ ಧರ್ಮಗುರುವನ್ನು ಆಧರಿಸಿಲ್ಲ. ದೃಷ್ಟಾರರಾದ ಋಷಿಗಳ ಹಾಗೂ ಸಂತರ ದಿವ್ಯ ದೃಷ್ಟಿಗೆ ಹೊಳೆದ ಶಾಶ್ವತ ತತ್ವಗಳ ಮೇಲೆ ಇದು ನಿಂತಿದೆ; ಮಾನವನು ತನ್ನ ಆಂತರಿಕ ದೇವತ್ವವನ್ನು ಪರಿಕಿಸಿ, ನಿರುಕಿಸಿ, ದೊರಕಿಸಿಕೊಳ್ಳಲು ಸಹಾಯಮಾಡುತ್ತದೆ. ಪಶು–ಮಾನವನನ್ನು ದೇವ–ಮಾನವನನ್ನಾಗಿ ಉನ್ನತೀಕರಿಸಲು ಅನುವು ಮಾಡುತ್ತದೆ. 



# ನಿಮ್ಮ ಮಗುವನ್ನು ರೋಗಗಳಿಂದ ರಕ್ಷಿಸಿ

ಹುಟ್ಟಿದ ದಿನದಿಂದಲೇ ನಿಮ್ಮ ಮಗುವು ಅನೇಕ ಆರೋಗ್ಯದ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

ಅಲ್ಲದೆ ಮಗುವು ಹಲವಾರು ಸಾಂಕ್ರಾಮಿಕ ರೋಗಗಳಿಗೆ ತುತ್ತಾಗುವ ಸಾಧ್ಯತೆ ಇರುತ್ತದೆ.

ಮಗುವಿನಲ್ಲಿ ರೋಗ ನಿರೋಧಕ ಶಕ್ತಿ ಸ್ವಾಭಾವಿಕವಾಗಿ ಕಡಿಮೆ ಇರುತ್ತದೆ.

ಎಂತಲೇ, ನಿಮ್ಮ ಮಗುವನ್ನು ರೋಗಗಳಿಗೆ ತುತ್ತಾಗದಂತೆ ಕಾಪಾಡುವುದು ಅತ್ಯಂತ ಆವಶ್ಯಕ.

ನಿಮ್ಮ ಮಗುವಿಗೆ ರೋಗನಿರೋಧಕ ಚುಚ್ಚು ಮದ್ದುಗಳನ್ನು ಕೊಡಿಸಿ.

ಕ್ಷಯ, ಗಂಟಲುಬೇನೆ, ನಾಯಿಕೆಮ್ಮು ಹಾಗೂ ಮೀಸಲ್ಸ್ (ಗೊಬ್ಬರ) ಈ ರೋಗಗಳನ್ನು ತಡೆಗಟ್ಟಲು ನಿಮ್ಮ ಮಗುವಿಗೆ ಒಂದು ವರ್ಷದೊಳಗೆ ಚುಚ್ಚುಮದ್ದುಗಳನ್ನು ಹಾಕಿಸಿ ಹಾಗೂ ಪೋಲಿಯೋ ತಡೆಯಲು 'ತೊಟ್ಟು' ಔಷಧಿಯನ್ನು ಕೊಡಿಸಿ.

| ಮಗುವಿನ ವಯಸ್ಸು | ಕೊಡಬೇಕಾದ ಲಸಿಕೆ | ಪ್ರಮಾಣ |
|---|---|---|
| ೩ ರಿಂದ ೯ ತಿಂಗಳು | ಅ) ತ್ರಿರೋಗ–ಅಂದರೆ ಧನುರ್ವಾಯು, ನಾಯಿಕೆಮ್ಮು, ಗಂಟಲು ಬೇನೆಗಳ ವಿರುದ್ಧ | ೩ ಬಾರಿ ೧ರಿಂದ ೨ ತಿಂಗಳ ಅಂತರದಲ್ಲಿ |
| | ಆ) ಪೋಲಿಯೋ (ಅಂಗವಿಕಲತೆ) | ೩ ಬಾರಿ ೧ರಿಂದ ೨ ತಿಂಗಳ ಅಂತರದಲ್ಲಿ |
| | ಇ) ಕ್ಷಯರೋಗ ವಿರುದ್ಧ–ಬಿಸಿಜಿ | ಒಂದು ಬಾರಿ |
| ೯ರಿಂದ ೧೨ ತಿಂಗಳು | ಮೀಸಲ್ಸ್ | ಒಂದು ಬಾರಿ |

ಹೆಚ್ಚಿನ ವಿವರಗಳಿಗೆ :

**ನಿರ್ದೇಶಕರು**

**ಸಮಾಜ ಕಲ್ಯಾಣ ಇಲಾಖೆ ಕರ್ನಾಟಕ ಸರಕಾರ**

**ಬೆಂಗಳೂರು** ಇವರನ್ನು ಸಂಪರ್ಕಿಸಿರಿ.

ಕರ್ನಾಟಕ ವಾರ್ತೆ

ಡಿಐಪಿ ೫೮೮/೮೫

● ಸೀತಾರಾಮ ಪಾಟೀಲ

# ಜ್ಯೋತಿಷ್ಯವೊಂದು ಶಾಸ್ತ್ರವೊ? ಕಲೆಯೊ?

ಮನುಕುಲದ ಇತಿಹಾಸದಲ್ಲಿ ಜ್ಯೋತಿಷ್ಯ ಕೆಣಕುತ್ತಿರುವಷ್ಟು ಆಸಕ್ತಿಯನ್ನು ಬೇರಾವ ಶಾಸ್ತ್ರವಾಗಲಿ ಕಲೆಯಾಗಲಿ ಕೆದಕಿದ ದಾಖಲೆಯಿಲ್ಲ. ಜ್ಯೋತಿಷ್ಯವನ್ನು ಶುದ್ಧ ವಿಜ್ಞಾನವೆಂದು ಕೆಲವರು ಹೇಳಿದರೆ ಅದು ಮೌಢ್ಯದ ಪರಾಕಾಷ್ಠೆಯೆಂದು ಮತ್ತೆ ಹಲವರು ಹೇಳುತ್ತಾರೆ. ಈ ವಿವಾದ ಹಿಂದೂ ಇತ್ತು, ಇಂದೂ ಇದೆ, ಎಂದೆಂದಿಗೂ ಉಳಿಯುವಂಥದೆ. ಸುಮಾರು ೧೫ ವರ್ಷಗಳ ಹಿಂದೆ 'ಸಂಯುಕ್ತ ಕರ್ನಾಟಕ'ದಲ್ಲಿ ಬಂದ ಈ ಲೇಖನವನ್ನು ಸೂಕ್ತ ಬದಲಾವಣೆಗಳೊಂದಿಗೆ ಇಲ್ಲಿ ಪುನರುದ್ಧರಿಸಲಾಗಿದ್ದು, ಇದನ್ನು ಈ ನಿರಂತರ ವಾದದ ಹಿನ್ನೆಲೆಯಲ್ಲಿ ನೋಡಬೇಕು.

ಜ್ಯೋತಿಷ್ಯಶಾಸ್ತ್ರವು ಶಾಸ್ತ್ರವೆ? ಅಥವಾ ಒಂದು ಕಲೆಯೆ? ಇದು ಶಾಸ್ತ್ರವೆಂದೇ ಗಣಿಸಲ್ಪಡಲಿ ಅಥವಾ ಕಲೆಯೆಂತೇ ಗಣಿಸಲ್ಪಡಲಿ ಈ ವಿಷಯದ ಆರಾಧಕರು ಮತ್ತು ವ್ಯಾಮೋಹಿಗಳು ಬಹಳ ಜನ. ದ್ವೇಷಿಗಳು ಕಡಿಮೆ ಮತ್ತು ಚಿಕಿತ್ಸಕ ಬುದ್ಧಿಯಿಂದ ಇದನ್ನು ಪರಾಮರ್ಶಿಸಿ ನೋಡುವವರು ಇನ್ನೂ ಕಡಿಮೆ. ಆದರೆ ಸರ್ವರಿಗೆ ಇದು ಬೇಕಾದ ವಿಷಯ. ಜಾತಕವು ಪ್ರತಿಯೊಬ್ಬನ ಜೀವನದ ಅವಿಭಾಜ್ಯ ಅಂಗವಾಗಿದೆ. ಜೀವನದ ಪ್ರತಿಯೊಂದು ನಾಡಿಯನ್ನು ಸ್ಪರ್ಶಿಸುವದು ಜಾತಕ ಒಂದೇ. ಎಲ್ಲರ ಸಮಸ್ಯೆಗಳಿಗೆ ಯೋಗ್ಯ ಪರಿಹಾರವನ್ನು ನೀಡತಕ್ಕ ಶಕ್ತಿಯುಳ್ಳಂಥದ್ದು ಜಾತಕ ಒಂದೇ. ಜ್ಯೋತಿಷ್ಯಶಾಸ್ತ್ರದ ಪ್ರಮುಖ ಕಾರ್ಯವೆಂದರೆ ಗ್ರಹಗಳ ಪರಿಸ್ಥಿತಿಯನ್ನು ಅನುಸರಿಸಿ ಭವಿಷ್ಯವನ್ನು ಹೇಳುವುದೇ ಆಗಿದೆ. ಗ್ರಹಗಳ ಯೋಗಗಳನ್ನು ಆಧರಿಸಿ ಆ ಗ್ರಹಗಳ ಪರಿಣಾಮ ಮಾನವನ ಜೀವನದ ಮೇಲೆ ಮತ್ತು ವಿಶ್ವದಲ್ಲಿಯ ರಾಷ್ಟ್ರಗಳ ಮೇಲೆ ಹೇಗೆ ಆಗಬಹುದು, ಇವುಗಳನ್ನು ಒಂದಕ್ಕೊಂದನ್ನು ಜೋಡಿಸಿ ವಿಶ್ಲೇಷಿಸಿ ಉಲ್ಲೇಖಿಸುವುದೇ ಆಗಿದೆ. ಗ್ರಹಗಳ ಪರಿಣಾಮ ಮನುಷ್ಯನ ಮೇಲೆ ಏಕೆ

ಆಗಬೇಕು? ಮತ್ತು ವೈಯಕ್ತಿಕ ಜೀವನದ ಮೇಲೆ ಪರಿಣಾಮವನ್ನು ಬೀರಬೇಕಾದರೆ ಇದಕ್ಕೆ ತಳಹದಿಯಾಗಿರುವ ತತ್ವಗಳೇನು? ಇವೇ ಮೊದಲಾದ ಪ್ರಶ್ನೆಗಳು ತತ್ಕಾಲಕ್ಕೆ ಉದ್ಭವಿಸುತ್ತವೆ. ಇವುಗಳಿಗೆ ಶಾಸ್ತ್ರೀಯ ರೀತಿಯಿಂದಾಗಲಿ ಬೇರೆ ಇನ್ನಿತರ ವಿಚಾರಪ್ರಣಾಲಿಯಿಂದಾಗಲಿ ಸರಿಯಾದ ಉತ್ತರವನ್ನು ಕೊಡಬೇಕಾದ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ಹಿರಿಮೆ ಎಲ್ಲಿದೆ?

ಮಾನವ ಜೀವನದ ಇತಿಹಾಸದಲ್ಲಿ ಜ್ಯೋತಿಷ್ಯ ಶಾಸ್ತ್ರವು ಬಹುದಿನಗಳಿಂದ ಹಾಸು ಹೊಕ್ಕಾಗಿ ಬಂದಿದೆ. ವೇದಕಾಲದಿಂದ ಈ ಶಾಸ್ತ್ರಕ್ಕೆ ನಮ್ಮಲ್ಲಿ ಅವಿಚ್ಛಿನ್ನ ಪರಂಪರೆ ಇದೆ. ಪಾಶ್ಚಾತ್ಯ ಶಾಸ್ತ್ರಜ್ಞರಲ್ಲಿ ಕೆಪ್ಲರ್, ಸರ್ ಐಸ್ಯಾಕ್ ನ್ಯೂಟನ್, ಕೋಪರ್ನಿಕಸ್, ಟಾಯ್‌ಕೋ ಬ್ರಾಹೇ ಮತ್ತು ಫ್ರಾನ್ಸಿಸ್ ಬೇಕನ್ನರನ್ನು ಜ್ಯೋತಿಷ್ಯಶಾಸ್ತ್ರವನ್ನು ಬಲ್ಲವರೆಂದು ಮತ್ತು ಶಾಸ್ತ್ರದ ಬಗ್ಗೆ ವಿಶೇಷ ಗೌರವವನ್ನು ಇಲ್ಲಿ ತಳೆದವರೆಂದು ಉಲ್ಲೇಖಿಸಲೇಬೇಕು.

ಪಾಶ್ಚಾತ್ಯ ಖಂಡದಲ್ಲಿ ಜ್ಯೋತಿಷ್ಯಶಾಸ್ತ್ರದ ಸತ್ಯಾಸತ್ಯತೆಯ ಬಗ್ಗೆ ಸಂಖ್ಯಾಶಾಸ್ತ್ರವನ್ನು ಆಧರಿಸಿ ಪ್ರಯೋಗಗಳನ್ನು ನಡೆಸಿದ್ದಾರೆ. ಸಂಖ್ಯಾಶಾಸ್ತ್ರದಲ್ಲಿಯ ಪ್ರಾಯೋಗಿಕ ಪರೀಕ್ಷೆಯಲ್ಲಿ ಯಶಸ್ವಿಯಾಗಿ ಹೊರಹೊಮ್ಮಿದೆ ಈ ನಮ್ಮ ಶಾಸ್ತ್ರ. ಪ್ರಸಿದ್ಧ ಮನಃಶಾಸ್ತ್ರಜ್ಞರಾದ ಡಾ. ಸಿ. ಜಿ. ಯೂಂಗರು ಪ್ರಯೋಗಗಳನ್ನು ನಡೆಯಿಸಿ ವೈದ್ಯಶಾಸ್ತ್ರಕ್ಕೆ ಜ್ಯೋತಿಷ್ಯಶಾಸ್ತ್ರವು ಯಾವ ರೀತಿಯಾಗಿ ಸಹಾಯ ಮಾಡಬಲ್ಲದೆಂಬುದನ್ನು ತೋರಿಸಿ ಕೊಟ್ಟಿದ್ದಾರೆ. ಅಮೇರಿಕದಲ್ಲಿ ವೈರ್ನಾನ್ ಕ್ಲಾರ್ಕರು ನಡೆಯಿಸಿದ ಪ್ರಯೋಗಗಳ ಮೇಲಿಂದ ವ್ಯಕ್ತಿಯ ಜನ್ಮ ಕಾಲಕ್ಕೆ ಮತ್ತು ವ್ಯಕ್ತಿಯ ವ್ಯಾವಹಾರಿಕ ಜೀವನಕ್ಕೆ ಏನೋ ಒಂದು ತರಹದ ಸಂಬಂಧವಿದೆ ಎಂಬುದು ಸ್ಪಷ್ಟವಾಗಿ ಕಂಡುಬಂದಿದೆ. ಈ ಸಂಬಂಧವನ್ನು ಸಂಖ್ಯಾಶಾಸ್ತ್ರದ ಸಹಾಯದಿಂದ ಸಿದ್ಧ ಮಾಡಿದ್ದಾರೆ. ಜ್ಯೋತಿಷ್ಯಶಾಸ್ತ್ರದ ಬಗ್ಗೆ ಇತ್ತೀಚೆಗೆ ಒಲವು ಹೆಚ್ಚುತ್ತಿದ್ದು ಈಗ ಬಹಿರಂಗವಾಗಿ ಅನೇಕರು ತಮ್ಮ ಹೇಳಿಕೆಗಳನ್ನು ಇತ್ತಿದ್ದಾರೆ. ಮ್ಯೂನಿಕ್ ವಿಶ್ವವಿದ್ಯಾಲಯದಲ್ಲಿ ಭೌತಶಾಸ್ತ್ರದ ಪ್ರಾಧ್ಯಾಪಕರಾದ ರೂಡಾಲ್ಫ್ ತೋಮಾಶ್ಚರು ಒಂದು ಮಹತ್ವದ ಲೇಖನವನ್ನು ಬರೆದು ಸದ್ಯಕಾಲೀನ ಬುದ್ಧಿಜೀವಿಗಳ ವಿಚಾರಧಾರೆಯನ್ನು ಮಂಡಿಸಿದ್ದಾರೆ. ಇದೇ ರೀತಿಯಾಗಿ ಇನ್ನಿತರ ದೇಶಗಳಲ್ಲಿ ಕೂಡ ಅನೇಕ ಪ್ರಮುಖ ಬುದ್ಧಿಜೀವಿಗಳು ಪ್ರಾಯೋಗಿಕ ಪರಿಣಾಮಗಳನ್ನು ಪರಿಪೂರ್ಣವಾಗಿ ಪ್ರಕಟಿಸಿದ್ದಾರೆ.

## ಏಕ ಜೀವ ವಿಶ್ವ

ಸಮಸ್ತ ವಿಶ್ವವು ಒಂದೇ ಜೀವ. ವ್ಯಕ್ತಿಯ ಜೀವನವು ಸಮಸ್ತ ವಿಶ್ವ ಜೀವನದ ಒಂದು ಅವಿಭಾಜ್ಯ ಅಂಗ. ವ್ಯಕ್ತಿಯ ಜನ್ಮಕಾಲವು ಕಾಲಚಕ್ರದಲ್ಲಿ ಒಂದು ಅಪೂರ್ವ ಘಟನೆ. ಸಮಸ್ತ ವಿಶ್ವವು ಪರಸ್ಪರ ಸಂಬಂಧಗಳ ಒಂದು ರಾಶಿ. ವ್ಯಕ್ತಿಯ ವಿಚಾರ ಮತ್ತು ಶಕ್ತಿಗಳ ಪರಿಣಾಮವು ಎಲ್ಲಿಯಾದರೂ ಒಂದು ಕಡೆ ಕಂಡು ಬಂದೇಬರುವುದು ಶರೀರದಲ್ಲಿಯ ಜೀವಾಣು ಸಮಸ್ತತೆಯ ಅಂಗವಾಗಿದೆ. ವ್ಯಕ್ತಿಯ ಯಾವ ಜೀವವು ವಿಶ್ವದ ಒಂದು ಭಾಗವಾಗಿ ಜನ್ಮಕಾಲಕ್ಕೆ ಜನ್ಮಜಾಗ್ರತವಾಗಿ ಬಂದ ಗುಣಗಳಿಗೆ ಪ್ರತಿಶಕ್ತಿಯನ್ನು ವ್ಯಕ್ತಪಡಿಸುತ್ತ ಸದ್ಯ ಜೀವನದಲ್ಲಿ ವಿಧಿಯನ್ನು ಶಕ್ತವಾದಷ್ಟು ಪರಿಮಿತಿಯಲ್ಲಿ ಬದಲಿಸಲು ಯತ್ನಿಸುತ್ತ ಜೀವನವನ್ನು ನಡೆಸುತ್ತಾನೆ.

ಆಕಾಶದಲ್ಲಿಯ ಗ್ರಹಗಳು ಪೃಥ್ವೀಸ್ಥಿತ ವಸ್ತುಗಳ ಮೇಲೆ ಪರಿಣಾಮವನ್ನು ಮಾಡುತ್ತವೆ. ಮತ್ತು ಈ ಪರಿಣಾಮವನ್ನು ಪೂರ್ವಭಾವಿಯಾಗಿ ಕಲ್ಪಿಸಬಹುದು. ಈ ಸಿದ್ಧಾಂತವನ್ನು ಸಂಖ್ಯಾಶಾಸ್ತ್ರದ ಕಠಿಣ ಪ್ರಯೋಗದಿಂದಲ್ಲ, ತರ್ಕಬದ್ಧ ವಿಚಾರಣೆಯಿಂದ ಕೂಡ

ಮಂಡಿಸಬಹುದು.

ಯಾವುದೇ ಒಂದು ಸ್ಥಳದಲ್ಲಿ ವಿದ್ಯುತ್ತಿನ ಕಿರಣಗಳು ಯಾವಾಗಲೂ ಪ್ರವಹಿಸುತ್ತಲಿರುತ್ತವೆ. ಆದರೆ ಕಿರಣಗಳ ಆವಿರ್ಭಾವವಾಗ ಬೇಕಾದರೆ ರೇಡಿಯೋ ಬೇಕು. ರೇಡಿಯೋದ ಸಹಾಯದಿಂದ ಜಗತ್ತಿನಲ್ಲಿಯ ವಿವಿಧ ಕೇಂದ್ರುಗಳ ಧ್ವನಿಗಳನ್ನು ಕೇಳುವುದು ಶಕ್ಯವಾಗುವುದು. ಗುರು ಮತ್ತು ಇನ್ನಿತರ ಗ್ರಹಗಳ ಮೇಲಿನ ಸೂಕ್ಷ್ಮ ಧ್ವನಿಯನ್ನು ಸಹ ಕೇಳಲು ಸದ್ಯಕ್ಕೆ ಇದ್ದ ಸಾಧನಗಳ ಮೂಲಕ ಸಾಧ್ಯವಾಗುತ್ತದೆ. ಭೌತ ಶಾಸ್ತ್ರದ ಸದ್ಯದ ಬೆಳವಣಿಗೆಯಿಂದ ಕಂಪನ ಶಕ್ತಿಯು ಯಾವ ರೀತಿಯಾಗಿ ಪರಿಣಾಮಗಳನ್ನು ಬೀರುತ್ತದೆನ್ನುವ ವಿಷಯದ ಪೂರ್ಣ ವಿಶ್ಲೇಷಣೆ ಆಗಿಲ್ಲ.

## ವಿಶ್ವವೊಂದು ಗಡಿಯಾರ

ಗ್ರಹಗಳ ಗತಿ ಮತ್ತು ಮಾನವನ ಮೇಲಿನ ಪರಿಣಾಮಗಳು ಎರಡೂ ಏಕಕಾಲಕ್ಕೆ ಆಗುತ್ತವೆ. ಸಮಸ್ತ ವಿಶ್ವವನ್ನು ಒಂದು ದೊಡ್ಡ ಗಡಿಯಾರವೆಂದು ಕಲ್ಪಿಸಿದರೆ ಭೂಮಿಯ ಮೇಲೆ ಆಗುವ ಘಟನೆಗಳನ್ನು ಅದರ ಮುಳ್ಳುಗಳಿಗೆ ಹೋಲಿಸಬಹುದು. ಜ್ಯೋತಿಷ್ಯಶಾಸ್ತ್ರದಲ್ಲಿ ಗ್ರಹಗಳ ಗತಿಯನ್ನು ಲೆಕ್ಕ ಮಾಡಲು ಅನೇಕ ನಿಯಮಗಳು ಈಗಾಗಲೇ ಬಂದಿವೆ. ಜೋಡನ ನಿಯಮ ಮತ್ತು ಕೆಪ್ಲರನ ನಿಯಮಗಳ ಸಾಧನದಿಂದ ಇದನ್ನು ಪೂರ್ವದಲ್ಲಿಯೆ ಗುರುತಿಸುವುದು ಸುಲಭಸಾಧ್ಯವಾದ ಮಾತು.

ಈ ಬಗೆಯಾದ ಹಾದಿಯಲ್ಲಿ ಕೂಡ ಅಸಂಶೋಧಿತ ಭಾಗವೆಂದರೆ ಕಾಲದ ಗುಣ ಧರ್ಮವನ್ನು ನಿಶ್ಚಿತವಾಗಿ ಗುರುತಿಸಿ ಅದನ್ನು ಘಟನೆಯೊಂದಿಗೆ ಜೋಡಿಸುವುದು ಕಠಿಣ ಕೆಲಸ. ಗತಿಸಿದ ಕಾಲವು ತಿರುಗುವುದಿಲ್ಲ. ಆದರೂ ಸಂಶೋಧನೆಗೆ ಸಾಕಷ್ಟು ಅವಕಾಶ ಇಲ್ಲಿ ಇದೆ.

ಈ ರೀತಿಯ ವಿಚಾರಸರಣಿಯಲ್ಲಿ ಸಮಸ್ತ ವಿಶ್ವವು ಒಂದು ಆಧಿಭೌತಿಕ ಸಂಬಂಧದಿಂದ ಕೂಡಿರುತ್ತದೆ. ಮತ್ತು ಭೂಮಿಯು ಜಾಗೃತ ವಾಗಿರುತ್ತದೆ. ಈ ಎರಡು ತತ್ವಗಳನ್ನು ಅವಲಂಬಿಸಿ ಈ ವಿಚಾರಸರಣಿಯನ್ನು ಮಂಡಿಸ ಬಹುದು. ಭೌತಶಾಸ್ತ್ರಜ್ಞನಿಗೆ ಸ್ವೀಕೃತ ವಾಗಬಹುದಾದ ತತ್ವವೆಂದರೆ ಇದೊಂದೇ. ಭೂಮಿಯು ಅಣು ಪರಮಾಣು ಮತ್ತು ಸೂಕ್ಷ್ಮಾಣುಗಳ ವ್ಯಾಪಕ ಸ್ಥಳ. ಬಾಹ್ಯವಾಗಿ ವ್ಯಕ್ತವಾಗುವ ಯಾವುದೇ ಒಂದು ತತ್ವವು ಆಂತರಿಕ ಕಾರಣಗಳ ಬಲವಾದ ತತ್ವಗಳ ಮೇಲೆ ನಿಂತಿರುತ್ತದೆ. ತಾಂತ್ರಿಕವಾಗಿ ವಿಚಾರಿಸಿದರೆ ಪ್ರತಿಯೊಂದು ಸೂಕ್ಷ್ಮಾಣು ಸಹ ಸ್ವತಂತ್ರ ಜೀವಿ. ಈ ಸೂಕ್ಷ್ಮಾಣುವನ್ನು ಸಹ ಗುರುತಿಸಿ ಅದಕ್ಕೆ ತಕ್ಕ ನಿಯಮವನ್ನು ಹೊಂದಿಸುವದು ಸಹ ಅಷ್ಟೇ ಗಡುಸಾದ ವಿಷಯ. ಯಾವುದೇ ಒಂದು ವಸ್ತು ಪೂರ್ಣ ಬೆಳವಣಿಗೆ ಆದ ನಂತರ ಅದರ ಆಂತರಿಕ ತತ್ವವನ್ನು ನಿರ್ಣಯಿಸಲು ಸಾಧ್ಯವಾಗಬಲ್ಲದು. ಆಧ್ಯಾತ್ಮಿಕ ಪರಿಪೂರ್ಣತೆ ಯಾದಾಗ ಜೀವನದ ಈ ತಾಂತ್ರಿಕ ಸಮಸ್ಯೆಯ ಪರಿಣಾಮವು ಸಾಧ್ಯವಾಗುವದು. ಬೇರೆ ಗ್ರಹಗಳಲ್ಲಿ ಉದಾ: ಗುರು ಮಂಗಳ ಅಥವಾ ಸೂರ್ಯ ಗ್ರಹಗಳಲ್ಲಿ ಇದ್ದ ಜಾಗೃತಾವಸ್ಥೆಯ ಪರಿಚಯವು ಇನ್ನೂ ದೊರೆತಿಲ್ಲ.

## ಸಂಕೇತಗಳು

ಈಗ ತಾತ್ವಿಕವಾಗಿ ವಿಚಾರಿಸಿದರೆ ಮಾನವನು ಅಣು ಮತ್ತು ಗ್ರಹಗಳಲ್ಲಿ ಉತ್ಕ್ರಾಂತಿಯ ಮೆಟ್ಟಲು ಇದ್ದರೂ ಕೂಡ ಮಾನವನು ಅದೇ ಉತ್ಕ್ರಾಂತಿಯ ರೇಷೆಯಲ್ಲಿ ಇದ್ದ. ಆದರೆ ಆಕಾಶಸ್ಥಿತ ಗ್ರಹವು ಮಾತ್ರ ಮಾನವನ ಜೀವನದ ಪೂರ್ವಭಾವಿಯಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ವಿಚಾರಗಳನ್ನು ಮಂಡಿಸುವುದಾದರೆ ಭೂಮಿಯ ಮೇಲಿನ ಜೀವಿಗಳಿಗೂ ಗ್ರಹಗಳಿಗೂ ಇರುವ ತತ್ವಸಾಮ್ಯ ಮತ್ತು ಆಕರ್ಷಣ ತತ್ವಗಳ ಆಧಾರವನ್ನು ಇಲ್ಲಿ ಯೋಚಿಸಬಹುದು. ಮಂಗಳ ಗ್ರಹವನ್ನು

ನೋಡಿದಾಗ ಅದರ ಮೇಲಿನ ಕಿಂಚಿತ್ ಕೆಂಪು ಛಾಯೆಯನ್ನು ಭೂಸ್ಥಿತಿ ಯುದ್ಧ ಇತ್ಯಾದಿ ಕೆಡಕುಗಳ ನೆನಪು ಆಗುವದು. ಅಥವಾ ರವಿಯು ಕಡೆಗೆ ಲಕ್ಷ್ಯ ವಹಿಸಿದಾಗ ರವಿಯ ಜಾಜ್ವಲ್ಯಮಾನ ತೇಜಸ್ಸನ್ನು ಆತ್ಮಕ್ಕೆ ಹೋಲಿಸಬಹುದು. ಶುಕ್ರ ಗ್ರಹದ ಕಡೆಗೆ ದೃಷ್ಟಿ ಬೀರಿದಾಗ ಅದಾರಿಗೆ ಪ್ರೇಮದ ಸುಕೋಮಲ ಭಾವನೆಯು ಬಾರದೇ ಇರಬಹುದು? ಚಂದ್ರನ ವೃದ್ಧಿ ಕ್ಷಯಗಳನ್ನು ಮಾನವನ ಮನಸ್ಸಿನೊಂದಿಗೆ ಜೋಡಿಸಿದರೆ ಸರಿಹೋಗಲಿಕ್ಕಿಲ್ಲವೆ? ಗುರು ಅತ್ಯಂತ ದೊಡ್ಡ ಗ್ರಹ. ಜ್ಞಾನ ಮತ್ತು ರಾಜಕಾರಣಗಳ ಸಾರಕತ್ವವನ್ನು ಕಲ್ಪಿಸಿದರೆ ಯೋಗ್ಯವಾಗಲಿಕ್ಕಿಲ್ಲವೇ?

ಜೀವನದ ಸುಖದುಃಖಗಳ ಚಕ್ರಕ್ಕೆ ಸೃಷ್ಟಿಕರ್ತನಿಂದ ಸೂಚಿಸಲ್ಪಟ್ಟ ಸಂಕೇತ ಎಲ್ಲಿಯಾದರೂ ಇರಲೇಬೇಕಲ್ಲ. ಗೂಢ ಶಾಸ್ತ್ರಗಳು ಈ ಸಂಕೇತವನ್ನು ಅರಿಯುವಲ್ಲಿ ಸಾಧನಗಳಾಗುತ್ತವೆ. ಗ್ರಹಗಳ ಯೋಗವು ಇಂಥ ಒಂದು ಸಾಧನೆ. ಸೃಷ್ಟಿಕರ್ತನು ಸೃಷ್ಟಿಸಿದ ಜಗತ್ತಿನಲ್ಲಿ ಈ ಜಗತ್ತಿನ ಆಗು-ಹೋಗುಗಳನ್ನು ತೋರಿಸುವ ದಾರಿಯನ್ನು ಇಟ್ಟಿರದೇ ಇರುವ ಸಂಭವವಿಲ್ಲ. ಜಾತಕಶಾಸ್ತ್ರದಲ್ಲಿ ರವಿ ಆತ್ಮಕಾರಕ ಮತ್ತು ಮಂಗಳನು ಕರ್ತೃತ್ವ ಶಕ್ತಿಯ ದ್ಯೋತಕ, ರವಿ ಮತ್ತು ಮಂಗಳರು ಪ್ರಬಲ ಇದ್ದ ವ್ಯಕ್ತಿಗಳ. ರಾಜಕೀಯದಲ್ಲಿ ತಮ್ಮ ಕರ್ತೃತ್ವ ಶಕ್ತಿಯಿಂದ ಇತಿಹಾಸದ ಪುಟಗಳ ಮೇಲೆ ಅಚ್ಚಳಿಯದಂತೆ ಹೆಜ್ಜೆಯನ್ನು ಇಡುತ್ತಾರೆಂದು ಕಲ್ಪಿಸಿದರೆ ಸಮಂಜಸವಾಗಲಿಕ್ಕಿಲ್ಲವೇ? ಈ ತತ್ವವನ್ನು ಕಲ್ಪಿಸಿದ ನಂತರ ಸಾವಿರಾರು ಜಾತಕಗಳನ್ನು ಸಂಶೋಧಿಸಿದಾಗ ಮಹತ್ವದ ವ್ಯಕ್ತಿಗಳ ಜಾತಕಗಳಲ್ಲಿ ಈ ಯೋಗದ ಪ್ರಾಬಲ್ಯವು ಕಂಡುಬಂದರೆ ಇದನ್ನೇ ನಿಯಮವೆಂದು ಮಾಡುವುದು ತಾರ್ಕಿಕವಾಗಲಾರದೇ?

ಭಾರತದಲ್ಲಿ ಜ್ಯೋತಿಷ್ಯಶಾಸ್ತ್ರವು ಹುಟ್ಟಿತೆಂದು ಹೇಳಲು ಸಾಕಷ್ಟು ಆಧಾರಗಳಿಲ್ಲದಿದ್ದರೂ ಕಳೆದ ೫೦೦೦ ವರ್ಷಗಳಿಂದ ಇಲ್ಲಿ ಅದರ ಒಂದಿಲ್ಲೊಂದು ಪ್ರಕಾರದ ಅಸ್ತಿತ್ವವನ್ನು ಒಪ್ಪಲೇಬೇಕು. ಈ ಶಾಸ್ತ್ರವನ್ನು ಸಿದ್ಧಾಂತ, ಸಂಹಿತಾ ಮತ್ತು ಹೋರಾಗಳಲ್ಲಿ ವಿಂಗಡಿಸಬಹುದು. ಸಿದ್ಧಾಂತ ಭಾಗವು. ಗಣಿತ ಭಾಗವು ಸಂಹಿತೆಯಲ್ಲಿ ಮಳೆ, ಕ್ಷಾಮ ಇತ್ಯಾದಿಗಳ ಬಗ್ಗೆ ಚರ್ಚಿಸಲಾಗಿದೆ. ಹೋರಾಶಾಸ್ತ್ರವನ್ನು ಪುನಃ ಭಾವ, ಕಾಲ ನಿರ್ಣಯ ಪ್ರಶ್ನಶಾಸ್ತ್ರ ಮತ್ತು ಮುಹೂರ್ತಗಳಲ್ಲಿ ಭಾಗಿಸಬಹುದು. ಭಾವಗಳಿಂದ ಜಾತಕವು ನಿಂತಿದೆ. ಯಾವುದೇ ಒಂದು ಘಟನೆಯು ಘಟಿಸುವದನ್ನು ನಿರ್ಣಯಿಸುವದು ಎಷ್ಟು ಸುಲಭವೋ ಅಷ್ಟೇ ಅದು ಘಟಿಸುವ ಕಾಲವನ್ನು ನಿರ್ಣಯಿಸುವುದು ಸುಲಭ. ಪ್ರಶ್ನಶಾಸ್ತ್ರದಿಂದ ತಾತ್ಕಾಲಿಕ ಗ್ರಹಗಳ ಮೇಲಿಂದ ಕೆಲವೊಂದು ಪ್ರಶ್ನೆಗಳನ್ನು ಸಮರ್ಪಕವಾಗಿ ಉತ್ತರಿಸಬಹುದು. ಶುಭ ಕಾರ್ಯವನ್ನು ಮಾಡಲು ಮುಹೂರ್ತ ಶಾಸ್ತ್ರ ಬೇಕೇಬೇಕು. ಕಾಲ ನಿರ್ಣಯಿಸಲು ಸದ್ಯಕ್ಕೆ ಪ್ರಚಲಿತವಿದ್ದವುಗಳು ದಶಾ ಪದ್ಧತಿ, ತಾಜಿಕ ಗೋಚರಿ ಮತ್ತು ದಿನವರ್ಷ ಪದ್ಧತಿಗಳು ಉಪಯೋಗದಲ್ಲಿ ಇವೆ. ಸನಾತನಿಗಳು ದಶಾ ಪದ್ಧತಿಯನ್ನು ಹೆಚ್ಚಾಗಿ ಅವಲಂಬಿಸುತ್ತಾರೆ. ಇವುಗಳ ಬಗ್ಗೆ ಸ್ಪಷ್ಟೀಕರಣವು ಜಾತಕಶಾಸ್ತ್ರದ ಸೂಕ್ಷ್ಮ ತತ್ವವನ್ನು ಆಧರಿಸಿರುತ್ತದೆ.

## ಮೇದಿನೀಯ ಜ್ಯೋತಿಷ್ಯ

ಗ್ರಹಗಳ ಪರಿಣಾಮವು ಯಾವ ಪ್ರಕಾರ ವ್ಯಕ್ತಿಯ ಜೀವನದ ಮೇಲೆ ಆಗುತ್ತದೆಯೋ ಅದೇ ಪ್ರಕಾರ ರಾಷ್ಟ್ರಗಳ ಮೇಲೆ ಕೂಡ ಆಗುತ್ತದೆ. ಇದರ ಬಗ್ಗೆ ಕೂಡ ಕೆಲವೊಂದು ನಿಯಮಗಳಿದ್ದು ಇದು ಪಾಶ್ಚಾತ್ಯ ಜೋತಿಷಿಗಳನ್ನೂ ಆಕರ್ಷಿಸಿದೆ. ಟಾಲೆಮಿಯ ಕಾಲದಿಂದ ಬಂದ ನಿಯಮವೊಂದರ ಪ್ರಕಾರ ದಶಮ ಸ್ಥಾನದಲ್ಲಿ ಶನಿಯ ಪರಿಭ್ರಮಣವಿದ್ದಾಗ ರಾಜನ ಅಥವಾ ಆಳುವವರ ಕೊನೆಯು ಆಗುತ್ತದೆನ್ನುವುದು ಇದರಲ್ಲೊಂದು. ವ್ಯಕ್ತಿಗಳು

ಹೇಗೆ ಕೆಲವೊಂದು ರಾಶಿಯ ಪ್ರಭಾವ ವಲಯ-ದಲ್ಲಿ ಬರುತ್ತಾರೋ ಹಾಗೆಯೇ ಅನುಭವದ ಮೂಲಕ ರಾಷ್ಟ್ರಗಳ ರಾಶಿಗಳ ಪ್ರಭಾವ ವಲಯುವನ್ನು ಕೂಡ ಕಂಡುಹಿಡಿಯಬಹುದು. ಭಾರತವು ಮಕರ ರಾಶಿಯ ಪ್ರಭಾವ ವಲಯು-ದಲ್ಲಿ ಬರುತ್ತದೆನ್ನುವುದು ವಿದಿತ ಮಾತಾಗಿದೆ. ಶನಿಯ ಪರಿಭ್ರಮಣವು ತುಲಾ ರಾಶಿಯಲ್ಲಿ-ದ್ದಾಗಲೇ ಪ್ರಧಾನ ಮಂತ್ರಿಯವರ ಹತ್ಯೆ-ಯಾದದ್ದು. ದಿಲ್ಲಿಯು ಕರ್ಕ ರಾಶಿಯ ಪ್ರಭಾವ ದಲ್ಲಿ ಹಾಗೂ ಮುಂಬಯಿ ಸಿಂಹ ರಾಶಿಯ ಪ್ರಭಾವ ವಲಯದಲ್ಲಿ ಬರುತ್ತದೆ. ಕರ್ಕ ರಾಶಿಯಲ್ಲಿ ಶನಿ-ಮಂಗಳ ಯುತಿಯು ಇದ್ದ ಕಾಲದಲ್ಲೇ ದಿಲ್ಲಿಯಲ್ಲಿ ಟರ್ಕಮನ್ ಗೇಟಿನ ಬಳಿ ಜನಜಂಗುಳಿಯ ಮೇಲೆ ಗೋಳಿಬಾರು ಆಯಿತು. ಹಿಂದೆ ಕೂಡ ಇದೇ ಯುತಿಯ ಕಾಲಕ್ಕೆ ದಿಲ್ಲಿಯಲ್ಲಿ ರಕ್ತದ ಹೊಳೆಯು ಹರಿಯಿತು. ಕರ್ನಾಟಕವು ವೃಷಭ ರಾಶಿಯ ಪ್ರಭಾವದಲ್ಲಿ ಬರುತ್ತದೆ. ಯಾವಾಗ ಈ ರಾಶಿಯು ಅನಿಷ್ಟ ಗ್ರಹಗಳಿಂದ ಕೂಡುತ್ತದೆಯೋ ಕರ್ನಾಟಕಕ್ಕೆ ಆಗ ಅನಿಷ್ಟ ತಪ್ಪಿದ್ದಲ್ಲ. ವೃಶ್ಚಿಕ ರಾಶಿಯಲ್ಲಿ ಶನಿ-ಮಂಗಳ ಯುತಿಯೇ ಶ್ರೀ ರಾಮಕೃಷ್ಣ ಹೆಗಡೆಯವರ ರಾಜೀನಾಮೆಯನ್ನು ತಂದದ್ದು.

೧೬೬೬ರಲ್ಲಿ ಲಂಡನ್ ನಗರಕ್ಕೆ ಬೆಂಕಿ ಹತ್ತಿದ್ದನ್ನು ತತ್ಕಾಲೀನ ಜ್ಯೋತಿಷಿಗಳು ತತ್ಪೂರ್ವವಾಗಿಯೇ ಹೇಳಿದ್ದರು. ಅಗ್ನಿ ಪ್ರಕೋಪಕ್ಕೆ ಬಲಿಯಾದ ನಂತರ ಆ ಜ್ಯೋತಿಷಿಯನ್ನು ಕರೆಯಿಸಿ ಹೀಗೆ ಭವಿಷ್ಯ ಹೇಳಿದ್ದರ ಬಗ್ಗೆ ಆತನನ್ನು ಸುದೀರ್ಘವಾಗಿ ಪ್ರಶ್ನಿಸಲಾಯಿತಂತೆ. ಶನಿ-ಮಂಗಳ ಹರ್ಶಲರ ಯುತಿಯ ಮೂಲಕವಾಗಿಯೇ ಈಗ ನಡೆದ ಪಂಜಾಬದ ಅಶಾಂತಿಗೆ ಕಾರಣವೆಂದು ಹೇಳಬಹುದು. ಹರ್ಶ-ಲನು ಮುಂದಿನ ರಾಶಿಗೆ ಹೋಗುವತನಕ ಈ ಅಶಾಂತಿಯು ಇರತಕ್ಕದ್ದೇ. ಗುಪ್ತ ಅಪರಾಧಗಳು ಹೆಚ್ಚಾಗುವುದೇ ಈ ರಾಶಿಯ ದ್ಯೋತಕವಾಗಿದೆ.

**ಅರ್ಥಾರ್ಜನೆ ಸಹಾಯಃ**

**ಪುರುಷಾಣಾಮಾಪದರ್ಣವೇ ಪೋತಃ**

**ಯಾತ್ರಾಸಮಯೆ ಮಂತ್ರಿ**

**ಜಾತಕಮುಪಹಾಯ ನಾಸ್ತ್ಯಪರಃ**

**—ಕಲ್ಯಾಣವರ್ಮ "ಸಾರಾವಲಿ"**

(ಅದು) ಜನಕ್ಕೆ ಸಂಪತ್ತು ಗಳಿಸಲು ನೆರವಾಗುತ್ತದೆ. ಸಂಕಟಕಾಲದಲ್ಲಿ ಅದರ ನಿವಾರಣೆಗೆ ಸಹಾಯವಾಗುತ್ತದೆ, ಯಾತ್ರೆಯಲ್ಲಿ ಮಂತ್ರಿಯಂತೆ ಸಹಾಯುಮಾಡುತ್ತದೆ ಈ ಜಾತಕ; ಇದನ್ನು ಬಿಟ್ಟು ಇನ್ನೊಂದಿಲ್ಲ.

ವರಾಹಮಿಹಿರನ ಮಾತುಗಳನ್ನೂ ನೋಡಬಹುದು:

**ಜ್ಯೋತಿಷಮಾಗಮಶಾಸ್ತ್ರಂ ವಿಪ್ರತಿಪತ್ತೌ**

**ನ ಯೋಗ್ಯಮಸ್ಮಾಕಮ್**

**ಸ್ವಯಮೇವ ವಿಕಲ್ಪಯಿತುಂ ಕಿಂತು ಬಹೂನಾಂ**

**ಮತಂ ವಕ್ಷ್ಯೆ**

ಜ್ಯೋತಿಷ್ಯವು ವೇದಾಂಗಶಾಸ್ತ್ರ. ಇದರ ಬಗ್ಗೆ ಸಂದೇಹ-ಶಂಕೆ ವ್ಯಕ್ತಪಡಿಸುವುದು ಯೋಗ್ಯವಲ್ಲ. ನಾನು ಅದನ್ನು ಮಾಡಲಾರೆ. ಆದರೆ ನನಗಿಂತ ಪೂರ್ವದಲ್ಲಿ ಆಗಿಹೋದ ಆಚಾರ್ಯರ ಮತದ ವಿವೇಚನೆಯನ್ನು (ನಾನು) ಮಾಡುತ್ತಿದ್ದೇನೆ.

**ವನಂ ಸಮಾಶ್ರಿತ್ಯ ಯೇಽಪಿ ನಿರ್ಮಮಾ**

**ನಿಷ್ಪರಿಗ್ರಹಾಃ**

**ಅಪಿ ತೇ ಪರಿಪೃಚ್ಛಂತಿ ಜ್ಯೋತಿಷಾಂ**

**ಗತಿಕೋವಿದಮ್**

ಸರ್ವಸಂಗ ಪರಿತ್ಯಾಗ ಮಾಡಿದ ಮತ್ತು ಅರಣ್ಯಾವಾಸಿಗಳಾದಂಥ ಮುನಿ ಜನರು ಕೂಡ ಜ್ಯೋತಿಷಿಯನ್ನು ವಿಚಾರಿಸಲು ಉತ್ಸುಕರಿರುತ್ತಾರೆ.

ಪ್ರಖ್ಯಾತ ಜ್ಯೋತಿಶ್ಶಾಸ್ತ್ರಜ್ಞ ವರಾಹಮಿಹಿರನ ಈ ಎರಡು ಶ್ಲೋಕಗಳನ್ನು ನೋಡಿದರೆ ಈ ಶಾಸ್ತ್ರದ ಬಗ್ಗೆ ಎಂದಿನಿಂದಲೂ ಬೌದ್ಧಿಕರಲ್ಲಿ ಅಭಿಪ್ರಾಯಭಿನ್ನತೆ ಇದ್ದೇ ಇತ್ತೆನ್ನುವುದು ತಿಳಿಯುತ್ತದೆ. 



# ಶತಮಾನದ ಕೃತಿಸ್ಮರಣ

## ಅಳಿದ ಮೇಲೆ, ನಮ್ಮ ಊರಿನ ರಸಿಕರು/ ಗಂಗವ್ವ ಗಂಗಾಮಾಯಿ

**ದೇಶಪಾಂಡೆ ಸುಬ್ಬರಾಯ**

### ಶಿವರಾಮ ಕಾರಂತ – ಅಳಿದ ಮೇಲೆ

### ೩

ಬದುಕಿನ ವಿವಿಧ ಘಟ್ಟಗಳಲ್ಲಿ, ವಿವಿಧ ಅನುಭವ, ವಿವಿಧ ವ್ಯಕ್ತಿಗಳೆದುರು ನಿಂತ ಮನುಷ್ಯನನ್ನು ವಿಭಿನ್ನ ಕೋನಗಳಿಂದ ಅಳೆದು ಆತನನ್ನು ಕುರಿತು ಒಂದು ಚಿತ್ರಣ ನೀಡುವುದೇ ಬೇರೆ; ಅಂತಹದೇ ವಿವಿಧ ಘಟ್ಟಗಳಲ್ಲಿ, ವಿವಿಧ ಅನುಭವಗಳೆದುರು ಮನುಷ್ಯನೊಬ್ಬನನ್ನು ನಿಲ್ಲಿಸಿದ ಇಡಿಯ ಬದುಕನ್ನೇ ವಿವಿಧ ಕೋನಗಳಿಂದ ಅಳೆದು, ಬದುಕನ್ನೇ ಕುರಿತು ಒಂದು ಆಳವಾದ ಚಿಂತನೆಗೈಯುವುದೇ ಬೇರೆ. ಒಂದು, ಸಾಮೂಹಿಕ ಸಲಕರಣೆಗಳ ಮಧ್ಯದಿಂದ ಕಡೆದು ನಿಲ್ಲಿಸುವ ವೈಯಕ್ತಿಕ ಶಿಲ್ಪವಾದರೆ ಇನ್ನೊಂದು, ವೈಯಕ್ತಿಕ ಪರಿಕರಗಳ ನಡುವಿನಿಂದಲೇ ಕಡೆದು ನಿಲ್ಲಿಸುವ ವಿಶಾಲ ಪರ್ವತ ಶ್ರೇಣಿಯಾಗುತ್ತದೆ. ಮೊದಲ ಕಾರ್ಯಕ್ಕೆ ಬೇಕಾಗುವ ಪ್ರತಿಭೆ ಮತ್ತು ಅನುಭವಗಳಿಗೆ, ಪಕ್ವತೆ ಮತ್ತು ನಿಸ್ಪೃಹತೆಗಳ ನೆರವು ಸಿಕ್ಕಾಗಲೇ ಎರಡನೆಯ ಕಾರ್ಯ ಸಾಧ್ಯ. ಇವೆರಡನ್ನೂ ಮೇಳೈಸಿ ಎರಡನ್ನೂ ಒಟ್ಟೊಟ್ಟಿಗೆ ಸಾಧಿಸಿದ ಅಪರೂಪ ಪ್ರಯತ್ನವನ್ನು ನಾವು ಕಾಣುವುದು ಶಿವರಾಮ ಕಾರಂತರ 'ಅಳಿದ ಮೇಲೆ' ಕಾದಂಬರಿಯಲ್ಲಿ.

ತೀರ ಅಲ್ಪ ಪರಿಚಯವಿದ್ದರೂ, ಕೇವಲ ವಿಶ್ವಾಸ ಮಾತ್ರದಿಂದ, ಕಾರಂತರ – ನಿರೀಕ್ಷಕನ ಪಾತ್ರವಾಗಿ ಬಂದ ಕಾರಂತರ – ಮೇಲೆ ಒಂದು ದೊಡ್ಡದಾದ ನೈತಿಕ ಹೊಣೆಯನ್ನು ಹೊರಿಸಿ ಸತ್ತು ಹೋಗುತ್ತಾರೆ, ಯಶವಂತರಾಯರು. ಯಶವಂತರಾಯರ ಬದುಕಿನ ಯಾವ ಎಳೆಯ ಪರಿಚಯವೂ ಇಲ್ಲದ ಕಾರಂತರು, ತಮ್ಮ ಹೊಣೆಯ ಸರಿಯಾದ ನಿರ್ವಹಣೆಗಾಗಿ ಸತ್ತು ಹೋದ ಯಶವಂತರಾಯರ ಬದುಕಿನ ವಿವಿಧ ಜಾಡುಗಳನ್ನು ಹುಡುಕುತ್ತ, ಬೆದಕುತ್ತ ಸಾಗುತ್ತಾರೆ. ಈ ಅನ್ವೇಷಣೆ ಸಾಗಿದಂತೆ, ಅವರಿಗೆ ಸಂಬಂಧಿಸಿದ ಒಂದೊಂದೇ ಎಳೆಗಳು ಒಟ್ಟು ನೆಯ್ಗೆಯಲ್ಲಿ ಕೂಡಿಕೊಳ್ಳುತ್ತ ಹೋದಂತೆ, ಯಶವಂತರಾಯರ ಬದುಕಿನ ಮಜಲುಗಳು ಬಿಚ್ಚಿಕೊಳ್ಳುತ್ತ ಹೋಗುತ್ತವೆ. ಪರ್ಯಾಯವಾಗಿ, ಅವರ ವ್ಯಕ್ತಿತ್ವವೂ ಸ್ಫುಟವಾಗುತ್ತ ಮತ್ತು ಅಷ್ಟೇ ಸಂಕೀರ್ಣವೂ ಆಗುತ್ತ ಹೋಗುತ್ತದೆ. ಅವರ ವ್ಯಕ್ತಿತ್ವ ಕುರಿತು, ಬದುಕನ್ನು ಕುರಿತು, ಪರಿಸರ ಕುರಿತು, ಆಪ್ತರನ್ನು ಕುರಿತು, ಆಧರಿಸಿದವರನ್ನು, ಅಂಟಿಕೊಂಡವರನ್ನು, ಅನುರಾಗಪಟ್ಟವರನ್ನು, ಅಸಹ್ಯಪಟ್ಟವರನ್ನು ಕುರಿತು ಹತ್ತು ಹಲವು ಮುಖಗಳು ಸ್ಪಷ್ಟವಾಗುತ್ತ ಹೋಗುತ್ತವೆ. ಕೆಲವಷ್ಟು ಅಸ್ಪಷ್ಟವಾಗಿಯೂ ಉಳಿಯುತ್ತವೆ. ಒಟ್ಟಾರೆ, ಪ್ರಾಯಶಃ

ಯಶವಂತರಾಯರೆಂದರೆ, ಅವರ ಬದುಕೆಂದರೆ, ಅವರ ವ್ಯಕ್ತಿತ್ವವೆಂದರೆ, ಬದುಕಿನಲ್ಲಿಯ ಅವರ ಒಟ್ಟಾರೆ ಕೊಡುಕೊಳ್ಳುವಿಕೆ ಎಂದರೆ ಇಷ್ಟು ಎಂದು ಕಾರಂತರು, ಒಂದು ಸಮಾಧಾನಕರವಾದ ಬಿಂದುವಿಗೆ ಬಂದು ನಿಲ್ಲುವಲ್ಲಿ ಕಾದಂಬರಿ ಕೊನೆಗೊಳ್ಳುತ್ತದೆ.

ಮನುಷ್ಯನೊಬ್ಬನ ಜೀವಿತದಲ್ಲಿಯ ನೂರೆಂಟು ಕ್ಷೇತ್ರಗಳಲ್ಲಿ, ನೂರೆಂಟು ಸಂಬಂಧಗಳಲ್ಲಿ, ಸಂಬಂಧಿಸಿದ ವ್ಯಕ್ತಿಗಳಲ್ಲಿ, ವ್ಯಕ್ತಿಗಳ ಆಶೆಗಳಲ್ಲಿ ಪರ್ಯಾಯವಾಗಿ ಇಡಿಯ ಆತನ ಬದುಕಿನೋತ್ತರದಲ್ಲಿ ಕೊನೆಗೂ ಉಳಿಯುವದೇನು? ಎಷ್ಟು? ಎಂಬ ಮೂಲಭೂತ ಜಿಜ್ಞಾಸೆಯೇ ಈ ಕಾದಂಬರಿಯ ಮುಖ್ಯ ತಳಪಾಯವಾಗಿದೆ.

ಒಂದು ದೃಷ್ಟಿಯಿಂದ, ಯಶವಂತರಾಯರದು, ಒಂದು ಬಗೆಯ ಸಂಕೀರ್ಣ ವ್ಯಕ್ತಿತ್ವವಾಗಿದೆ. ಬದುಕಿನ ಒಂದು ಹಂತದಲ್ಲಿ ತುಂಬ ನೋವನುಂಡು ಜಿಗುಪ್ಸೆ ತಾಳಿದ ಹಂತದಲ್ಲಿ ತೀರ ನಿಕಟ ಸಂಬಂಧವುಳ್ಳ ಹೆಂಡತಿ, ಮಕ್ಕಳು, ಪಾರೋತಿ, ಸರಸಿ ಮುಂತಾದ ಎಲ್ಲರನ್ನು, ಎಲ್ಲ ಬಗೆಯಲ್ಲೂ ತೊರೆದು, ಈ ಮುಂಚೆ ಈ ಯಾರೊಂದಿಗೂ ಯಾವ ಸಂಪರ್ಕವೂ ಇರಲಿಲ್ಲವೆಂಬಂತೆ ಒಂದು 'ವಿಚಿತ್ರ ವಾನಪ್ರಸ್ಥ'ದಲ್ಲಿ ಇದ್ದು ಬಿಟ್ಟವರು. ಜನಾರಣ್ಯವಾದ ಮುಂಬಯಿ ಮಧ್ಯದಲ್ಲಿದ್ದೂ ಒಬ್ಬೊಂಟಿಯಾಗಿದ್ದವರು. ಹಾಗಿದ್ದೂ, ಒಂದು ತೀವ್ರವಾದ ಮಾನವೀಯ ನಿಲುವಿನ ಹಿನ್ನೆಲೆಯಲ್ಲಿ, ಕೃತಘ್ನರೆನ್ನಬಹುದಾದ ದಾದಾ ಮತ್ತು ಮೇರಿಯಂಥವರನ್ನು ಸಲುಹಿದವರು, ಸಹಿಸಿದವರು. 'ಹದಗೆಟ್ಟ ವಾತ್ಸಲ್ಯ ಹುಳಿತು ವಿಷವಾಗುವುದನ್ನು' ನೋಡುನೋಡುತ್ತಲೇ, ಜಗತ್ತಿನ ಎಲ್ಲ ಮಕ್ಕಳನ್ನು ಅಷ್ಟೇ ನಿಸ್ಪೃಹತೆಯಿಂದ ಪ್ರೀತಿಸುವ ಹೃದಯ ವೈಶಾಲ್ಯವನ್ನುಳಿಸಿಕೊಂಡವರು. ಹಣಕಾಸಿನ ಹಿನ್ನೆಲೆಗಳಿಂದಾಗಿಯೇ ಮನುಷ್ಯ ಸಂಪರ್ಕದಿಂದ ವಿಮುಖರಾಗಿ 'ವಾನಪ್ರಸ್ಥ'ರಾಗಿದ್ದರೂ, ಅಸಹಾಯಕ ಕೆಲವರಿಗೆ ಅಗತ್ಯವಾದ ನೆರವನ್ನು ಆಗಾಗ ನೀಡುತ್ತಲೆ ಇದ್ದವರು. ಅವಿಶ್ವಾಸಕ ಜಗತ್ತಿನ ಆಚೆಗೆ ಆಮೆಯಂತೆ ಒಳಸರಿದು ಕೂತಿದ್ದರೂ, ಕೊನೆಯ ಗಳಿಗೆಯಲ್ಲಿ, ಅಲ್ಪ ಪರಿಚಿತನೊಬ್ಬನಲ್ಲಿ. ಅಮಿತ ವಿಶ್ವಾಸವಿರಿಸಿ, ಎಲ್ಲವನ್ನೂ ಇತ್ತು ನೆಮ್ಮದಿಯಿಂದ ಹೊರಟು ಹೋದವರು.

ಇಂಥ ಯಶವಂತರಾಯರ, ಒಂದು ಬದುಕಿನ ಮೇಲೆ ಬೆಳಕು ಚೆಲ್ಲುವುದೆಂದರೆ ಅನೇಕ ವ್ಯಕ್ತಿಗಳ ಮೇಲೆ, ಅವರ ವ್ಯಕ್ತಿತ್ವಗಳ ಮೇಲೆ ಬೆಳಕು ಚೆಲ್ಲುವದೂ ಆಗಿದೆ. ಎಂತಲೇ ಯಶವಂತರಾಯರ ಬದುಕಿನ ಬೆಡಕಿನವಧಿಯಲ್ಲಿ ಅನೇಕ ವಿಭಿನ್ನ ವ್ಯಕ್ತಿಗಳ, ವಿಭಿನ್ನ ವ್ಯಕ್ತಿತ್ವಗಳ ಅಭ್ಯಾಸ ಗೈಯುತ್ತಾರೆ ಕಾರಂತರು.

ಯಶವಂತರಾಯರ ಬಗ್ಗೆ, ಅವರ ವ್ಯಕ್ತಿತ್ವದ ಬಗ್ಗೆ, ಬದುಕಿನ ಬಗ್ಗೆ ಪರವಿರೋಧ ಅಭಿಪ್ರಾಯಗಳೆರಡೂ ಇವೆ. ವಿರೋಧಾಭಿಪ್ರಾಯಗಳ ಹೆಚ್ಚು. ಚೋದ್ಯವೆಂದರೆ, ಈ ಎಡ ಗುಂಪಿನ ಮುಖ್ಯ ವಕ್ತಾರರು ಸ್ವತಃ ಅವರ ಹೆಂಡತಿ ಮತ್ತು ಮಗನೇ; 'ವ್ಯಾವಹಾರಿಕವಾಗಿ,' ಹೆಚ್ಚು 'ನಿಕಟ' ಸಂಬಂಧಗಳನ್ನು ಉಳ್ಳವರು ಹಾಗಿದ್ದೂ, ಕೊನೆಯಲ್ಲಿ ಪರಡಿ 'ಪರಾಭಿಪ್ರಾಯ' ಧೋರಣೆಯತ್ತ ಇಳಿಯುವದು, ಆ ನಿಲುವುಗಳ ಹಿಂದಿನ ನಿಸ್ಪೃಹ ಪ್ರೇಮದಿಂದಾಗಿ, ಅಳತೆಗೆ ಮಿಕ್ಕದ ಆರ್ದ್ರತೆಯಿಂದಾಗಿ.

ಎಂತಲೇ, ಈ ಕಾದಂಬರಿ ಪ್ರತಿಪಾದಿಸುವ ಇನ್ನೊಂದು ಮುಖ್ಯ ಅಂಶವೂ ಇಲ್ಲಿ ವ್ಯಕ್ತವಾಗುತ್ತದೆ: ಒಬ್ಬ ವ್ಯಕ್ತಿ ಎಷ್ಟೇ ದೊಡ್ಡ ವ್ಯಕ್ತಿತ್ವ ಉಳ್ಳವನಾಗಿದ್ದರೂ ಆತನಲ್ಲಿಯ ಚಿಕ್ಕತನವನ್ನು ಮಾತ್ರವೇ ನಾವು ಎತ್ತಿಕೊಳ್ಳುವುದು ನಮ್ಮ ಕುಬ್ಜತನದಿಂದಾಗಿಯೇ, ನಿಮ್ಮ ಕಿರಿದಾದ ತೆಕ್ಕೆಗಳಿಂದಾಗಿಯೇ ಎಂಬುದೇ ಆ ಅಂಶ. ಸೀತಾರಾಮ, ಕಮಲ, ದಾದಾ, ಮೇರಿ ಮುಂತಾದವರು, ಯಶವಂತರಾಯರ ಅನೇಕ ಒಳ್ಳೆಯ ಗುಣಗಳಿಂದ, ಅವುಗಳ ಸ್ಪರ್ಶಗಳಿಂದ ವಂಚಿತರಾಗುವುದು ಈ ಅಂಶದಿಂದಾಗಿಯೇ.

ಇದಕ್ಕೆ ವ್ಯತಿರಿಕ್ತವಾಗಿ, ಪಾರೋತಿ, ಸರಸಿ, ಹೊನ್ನಗದ್ದೆ ಮಂಜಯ್ಯ ಮುಂತಾದವರ ಆರೋಗ್ಯಪೂರ್ಣ ನಿಲುವುಗಳಿಗೆ ಕಾರಣಗಳು, ಅವರ ವ್ಯಕ್ತಿತ್ವದ ಬೇರುಗಳಲ್ಲಿಯೇ ಇವೆ. ಹಿಂದಿನ ಬದುಕಿನ ಯಾವ ಕಹಿಯೂ ಸೋಂಕ

ದಂತೆ, ಪ್ರಸ್ತುತ ಬದುಕು ನೀಡುವ ಆಹ್ವಾನ-ಗಳನ್ನೂ ಯಾವತ್ತೂ ಮಾನವಿಯ ಹಿನ್ನೆಲೆ-ಯಲ್ಲಿಯೇ ಸ್ವೀಕರಿಸುವ ಯಶವಂತರಾಯು-ರಂತೆ, ಯಾರನ್ನೂ ಯಾವತ್ತೂ, ಯಾವ ಕಾರಣಕ್ಕೂ ದೂರದೆ, ದೂಷಿಸದೆ ತನ್ನ ಅಚಲ ವಾದ ನಂಬಿಕೆಗಳ ಮಧ್ಯದಲ್ಲೇ ಬದುಕನ್ನೂ ದಾಟುತ್ತಾಳೆ ಪಾರೋತಿ. ಅಚಲವಾದ, ನಿಷ್ಠೆ ಮತ್ತು ತಾತ್ವಿಕತೆಗಳೇ ಸರಸಿ ಮತ್ತು ಮಂಜಯ್ಯ ನವರಿಗೆ ಬೆನ್ನು ಕೋಲುಗಳಾಗಿವೆ.

ತಮ್ಮ ವಾನಪ್ರಸ್ತದ 'ಚಿತ್ರಣ'ಗಳಲ್ಲಿ ಮತ್ತು ಬರಹಗಳಲ್ಲಿ ಯಶವಂತ ರಾಯರು ಅನು ಸರಿಸಿದ ವಿಧಾನ ಕೂಡ ಅವರ ಸ್ವಭಾವಕ್ಕೆ ಹಿಡಿದ ಕನ್ನಡಿಯಾಗಿದೆ. ಅವರೊಬ್ಬ ಉತ್ತಮ ಚಿತ್ರ ಕಾರರೇ. ಅವರು ಬಿಡಿಸಿದ ಸರಸಿಯ ಒಂದು ಚಿತ್ರವನ್ನು ನೋಡಿ ಕಾರಂತರು ಕೂಡ ಹಾಗೇ ಅಂದುಕೊಳ್ಳುತ್ತಾರೆ. ಹಾಗಿದ್ದು ಅವರು, ಆತ್ಮ-ಚರಿತ್ರಾತ್ಮಕ ಚಿತ್ರಗಳನ್ನು ಬೇಕೆಂದೇ ಅಸಂಬದ್ಧ ವೆನಿಸಿದಂತೆ ಬರೆಯುತ್ತಾರೆ, ಅದಕ್ಕೆ ಕಾರಣ–ವಿಷ್ಟೇ: ಪೂರ್ವಾಪರಗಳನ್ನು ಸ್ಪಷ್ಟವಾಗಿ ತಿಳಿ ಯದ, ಕಲ್ಪಿಸಿಕೊಳ್ಳಲಾಗದ ಯಾರೇ ಆಗಲಿ, ಈ ಚಿತ್ರಗಳನ್ನು ನೋಡಿದರೂ, ಅದಕ್ಕೆ ಸಂಬಂಧಿಸಿರುವದನ್ನು ಕುರಿತು ಅವರು ತಪ್ಪಿ ತಸ್ಥರೇ ಆಗಿದ್ದರೂ ತಪ್ಪು ತಿಳಿಯಬಾರದು ಎಂಬ ಮಾನವೀಯ ಕಾರಣಕ್ಕಾಗಿ, ತಾವು ಅಷ್ಟೆಲ್ಲವನ್ನೂ ನಂಬಿದ ಕಾರಂತರಿಗೆ ಕೂಡ ತಮ್ಮ ಬರಹಗಳನ್ನು ಕಳುಹಿಸುವುದು ತಮ್ಮ ಕೊನೆ–ಗಾಲದಲ್ಲಿ ಮಾತ್ರ ಎಂಬುದನ್ನು ಗಮನಿಸಬೇಕು. ಬರಹಗಳಲ್ಲೂ ಎಷ್ಟು ಅಸ್ಪಷ್ಟ ಹೆಸರುಗಳು: ರೀಮಾ, ಸೀಲೂ, ಶಿರಶಿ, ಜಲಜ ಇತ್ಯಾದಿ. '

ಅಷ್ಟೇ ಏಕೆ, ಯಾರನ್ನೆ ಕುರಿತು ತಾನೇ ಚಿತ್ರಿಸಿದ್ದರೂ ಬರೆದಿದ್ದರೂ ತಾವು ಒಬ್ಬ ಪರಿಪೂರ್ಣ ಮನುಷ್ಯ ಎಂದು ಅವರು ಯಾವತ್ತೂ ಅಂದುಕೊಂಡಿರಲಿಲ್ಲ. ಕಾಡುಮ್ಮೈನಾ ಅಥವಾ ಆರ್ಕಿಡ್ಸ್ ಹಾಗೆ ಮೇರಿಯನ್ನು ಚಿತ್ರಿಸಿದ್ದರೂ, ಆಕೆಯ ಕೊನೆಯ ಪತ್ರ ಬಂದಾಗ, ತಮ್ಮದೂ ದೋಷವಿರಬಹುದೇ, ತಾವೂ ವಂಚಕನೇ ಆಗಿರ ಬಹುದೇ ಎಂದೇ ಪ್ರಶ್ನಿಸಿಕೊಳ್ಳುತ್ತಾರೆ.

ಅಷ್ಟೆಲ್ಲ ಅವರನ್ನು ಮೆಚ್ಚಿಕೊಂಡ ಕಾರಂತ ರಾದರೂ ಅವರನ್ನು ಕುರಿತು ಹೇಳುವುದೇನು! 'ಅವರು ದೇವರಲ್ಲ...ರಾಕ್ಷಸರೂ ಅಲ್ಲ. ಒಬ್ಬ ಯೋಗ್ಯ ಮನುಷ್ಯ... ನನಗೆ ಅಷ್ಟೇ ಸಾಕು!' ಇದು ಕಾರಂತರು— ಶಿವರಾಮ ಕಾರಂತರು— ಯಶವಂತರಾಯನನ್ನು ಕುರಿತು ಮಾತ್ರವಲ್ಲ, ಯಾವುದೇ 'ಯೋಗ್ಯ' ಮನುಷ್ಯನನ್ನು ಕುರಿತು ಹೇಳಬಹುದಾದ ಅಖೇರು ಮಾತು.

ಆದರೆ ಈ ಎಲ್ಲ ಅನ್ವೇಷಣೆಗಳ ನಂತರವೂ ಯಶವಂತರಾಯರ ಪೂರ್ಣ ವ್ಯಕ್ತಿತ್ವ, ಪೂರ್ಣ ಬದುಕು, ಪೂರ್ಣ ಪರಿಸರ ಇಲ್ಲಿ ನಿರೂಪಿತ ವಾಯಿತು ಎನ್ನುವಂತಿಲ್ಲ. ಅಗೆದಷ್ಟೂ ಅಲ್ಲಲ್ಲಿ ಮುಚ್ಚಿಹೋಗುವ ಕಳ್ಳ ಉಸುಕಿನಂತಿರುತ್ತದೆ ಇಂಥ ಯಾವುದೇ ಮುಗಿದುಹೋದ ಬದುಕು. ಕತ್ತಲು ಕೋಣೆಯ ಮೂಲೆಗಳಲ್ಲಿ, ಬೀರಿದಷ್ಟು ಬೆಳಕಿನಲ್ಲಿ ಕಂಡಷ್ಟನ್ನು ಮಾತ್ರವೇ ಹೇಳುತ್ತಾನೆ ನಿರೀಕ್ಷ. ಹೇಳಿದಷ್ಟೂ ಸತ್ಯ, ನಿಜ. ಆದರೆ ಸತ್ಯವೆಲ್ಲವನ್ನು ಹೇಳಿದಂತಾಯಿತೆ? ಇಲ್ಲ. ಬಹುಶಃ ಯಾವುದೇ ಬದುಕಿನ ಎಲ್ಲ ಸತ್ಯಗಳ ಬಗ್ಗೆ ಯಾರೂ ಎಂದೂ ಹೇಳಲಾರರು. ಎಂತಲೇ ಬದುಕು ಒಡ್ಡುವ ಈ ಮಿತಿಯು, ಕೆಲವಾದರೂ ದೃಷ್ಟಿಗಳಿಂದ, ಈ ಕಾದಂಬರಿಯ ಮಿತಿಯೂ ಆಗುವುದು ಇಲ್ಲಿ ಅನಿವಾರ್ಯವೇ ಆಗಿದೆ.

ಏನಿದ್ದರೂ, ಕನ್ನಡ ಬರಹದ ಬದುಕಿನಲ್ಲಿ ಬಹಳ ದಿನ ಅಳಿಯದೇ ಉಳಿವ ಕೃತಿ, 'ಅಳಿದ ಮೇಲೆ.'

೪

## ಗೊರೂರು ರಾಮಸ್ವಾಮಿ ಅಯ್ಯಂಗಾರ್– ನಮ್ಮ ಊರಿನ ರಸಿಕರು

ಕಾಲನ ತೆಕ್ಕೆಯ ಒಂದು ಅವಧಿಯ ಒಕ್ಕ ಲಾದ ಒಂದು ಪ್ರದೇಶದ ಜನತೆಯ ಒಂದು ವಿಶಾಲ ಬದುಕೇ ಕೆನೆಗಟ್ಟಿ ದನಿಯಾದ ಒಂದು ವೈಶಿಷ್ಟ್ಯವನ್ನು, ಗೊರೂರವರ 'ನಮ್ಮ ಊರಿನ

ರಸಿಕರು' ಕೃತಿಯಲ್ಲಿ ಕಾಣಬಹುದು. ಋತು ಮಾನಗಳಿಗನುಸರಿಸಿ, ಏರಿಳಿದೋ, ಬಾಚಿ ಸೊರಗಿಯೋ ಸಾಗುವ, ಬದಿಯ ಹೊಳೆಯಂತೆ, ಒಂದು ಹಳ್ಳಿಯ ಬದುಕಲ್ಲಿ, ಅದರ ಸಮಸ್ತ ಪರಿಕರಗಳಲ್ಲಿ ಕಾಣಬಹುದಾದ ಏರಿಳಿವುಗಳ ಚಿತ್ರಣಗಳು ಇಲ್ಲಿವೆ.

ಸಾಹಿತ್ಯದ ಇಂತಹದೇ ಪ್ರಕಾರಕ್ಕೆ ಸೇರಿದ್ದು ಎಂದು ಖಚಿತವಾಗಿ ಹೇಳಲಾಗದಿದ್ದರೂ, ಅನೇಕ ಪ್ರಕಾರಗಳ ಆವಶ್ಯಕ ಗುಣಗಳನ್ನು ಅಳವಡಿಸಿ ಕೊಂಡಿರುವ ಈ ಕೃತಿಯಂತೆಯೇ ಇದೆ, ಇಲ್ಲಿ ಚಿತ್ರಿತವಾದ ಬದುಕು. ಒಂದು ಸಮಷ್ಟಿ ಬದುಕಿನ ಇಂತಹದೇ ಹಂತದ ಮೇಲೆ ಇದು ಒತ್ತು ಕೊಡುತ್ತದೆಂದು ಹೇಳಲಾಗದಿದ್ದರೂ, ಆಯ್ದ ಪ್ರಕರಣಗಳ, ಅನೇಕ ಒಳ-ಹೊರಗುಗಳತ್ತ ಇದು ಬೆಳಕು ಹಿಡಿಯುತ್ತದೆಂದು ಹೇಳಬಹುದೇನೋ. ಆದರೆ, ಹೀಗೆ, ಬೆಳಕು ಹಿಡಿಯಲಾದ ಬದುಕಿನ ವಿಭಿನ್ನ ಪಾರ್ಶ್ವಗಳ ದರ್ಶನ ಸಾಧ್ಯವಾಗುವುದು, ಕೆಲವು ವಿಶಿಷ್ಟ ವ್ಯಕ್ತಿಗಳ, ವೈಯಕ್ತಿಕವೆನ್ನಬಹುದಾದ, ವಿಭಿನ್ನ ಬಗೆಯ ತೊಡಗುವಿಕೆಗಳಿಂದ ಹಾಸ್ಯಮಯವೆನ್ನಬಹುದಾದ ಕೆಲವು ಚಟುವಟಿಕೆಗಳಿಂದ.

ನಿಜ, ಗುರುಪೀಠದಲ್ಲಿ ಕೂತು ಪಾಠ ಮಾಡುವುದರೊಂದಿಗೆ ಸುಗ್ಗಿಯಲ್ಲಿ ಬಗ್ಗಿ ಕಟಾವು ಮಾಡುವ ಮೇಸ್ಟ್ರು, ಅತಿಥಿ ಆದರದ ಔದಾರ್ಯದಲ್ಲಿ ಅವಾಂತರಕ್ಕೂ ಈಡಾಗುವ ಮತ್ತು ಈಡು ಮಾಡುವ ಜೋಡಿದಾರರು, ಪ್ರಾಸಕ್ಕೆ ಪ್ರಾಸ ಹೊಂದಿಸಿದಷ್ಟೇ ಸುಲಭವಾಗಿ ಊರೆಲ್ಲವನ್ನೂ ಆವರಿಸಿ ನಿಂತ ನಾಣಿ, ನಾಲೆ ನೀರು ಮನೆ ನುಗ್ಗುತ್ತಿರುವಾಗಲೂ ಭಾಷೆಯ ನಿಖರತೆಗಾಗಿ ತಡಕಾಡಿದ 'ಪಾಣಿನಿ' ರಂಗ, ಎಂಜಲೆಲೆ ಎತ್ತಿದಷ್ಟೇ ನಿರ್ವಿಕಾರವಾಗಿ ಸತ್ತ ಎಮ್ಮೆಯನ್ನೂ ಹೊತ್ತ ಶೀನಪ್ಪ ಮೊದಲಾದವರು ತಮ್ಮ ವೈಶಿಷ್ಟಗಳೊಂದಿಗೆ ಸಾಕಷ್ಟು ಹಾಸ್ಯ ಒದಗಿಸುತ್ತಲೇ ಇಲ್ಲಿ ಬದುಕನ್ನು ತೊಡಗುತ್ತಾರೆ.

ಅಷ್ಟೇ ಏಕೆ, ಇಲ್ಲಿಯ ಅನೇಕ ಸಂದರ್ಭಗಳ ವಿವರಣೆಗಳಲ್ಲಿ— ಸಾತಾನಿ ನಾರಾಣಯ್ಯ ಮತ್ತು ಭಕ್ತರು ದೇವರನ್ನು ಮಾತನಾಡಿಸುವ ವಿವರಣೆಯಲ್ಲಿ, ಬ್ರಾಹ್ಮಣರ ಶವಸಂಸ್ಕಾರ, ಅವರ ಕರ್ಮಾದಿ ವಿವರಣೆಗಳ ಸಂದರ್ಭದಲ್ಲಿ ಸ್ವತಃ ಗೊರೂರವರೇ ನಮ್ಮ ಗೊಡ್ಡು ಸಂಪ್ರದಾಯಗಳನ್ನು ನಗುತ್ತಾರೆ.

ಹಾಗೆಯೇ, ಹರಿಶ್ಚಂದ್ರ ಹೇಳಿದ ಛಪ್ಪನ್ನೈವತ್ತಾರು ದೇಶಗಳ ಬಗ್ಗೆ ಗುಂಡ ಕೇಳಿದಾಗ, ಶಾಲಸಾಬಿ ಹೇಳುವ ಉತ್ತರ ತಪ್ಪಿರಬಹುದು. ಅಷ್ಟೇ ಏಕೆ, ಹೊರನೋಟಕ್ಕೆ ತಮಾಷೆಯೂ ಎನಿಸಬಹುದು. ಆದರೆ, ಅದು, ಆತನ ಅಜ್ಞಾನದಿಂದ ಬಂದ ಉತ್ತರ ಎನ್ನುವುದಕ್ಕಿಂತ, ತಾವು ನಂಬಿದ ನಂಬಿಕೆಯಲ್ಲಿ ಆತ ಇಟ್ಟ ವಿಶ್ವಾಸದಿಂದ ಮೂಡಿಬಂದ ಉತ್ತರ ಎಂಬುದು ತಿಳಿದರೆ, ಇಂಥ ಪಾತ್ರಗಳನ್ನು ಮತ್ತು ಮುಖ್ಯವಾಗಿ, ಅವುಗಳ ಬದುಕುಗಳನ್ನು ಅರಿತುಕೊಳ್ಳಲು ಅನುವಾಗುತ್ತದೆ. ಕರಡಿ ಬೆಟ್ಟದ ಪೂಜಾರಿಯಾದ ಸಾತಾನಿ ನಾರಾಣಯ್ಯನು ದೇವರಿಂದ ಹೂ ಬೀಳಿಸುವವರನ್ನು ನಂಬುವ ಭಕ್ತರ ವಿಶ್ವಾಸವೂ ಅಷ್ಟೇ. ಏಕೆಂದರೆ, ಈ ಜನಗಳು ನಂಬಿದ ಬದುಕಿನಲ್ಲಿ, ಅವರು ಸ್ವೀಕರಿಸಿದ ಚೌಕಟ್ಟಿನಲ್ಲಿ, ಇಂತಹ ವಿಶ್ವಾಸಗಳೇ ದೃಢವಾದ ಭೂಮಿಕೆಗಳಾಗುತ್ತವೆ. ಒಂದು ಸಮುದಾಯವು ಪ್ರಮಾಣಿಕವಾಗಿ ನಂಬದ ನಂಬಿಕೆಯನ್ನು ನಗುವುದು, ಅನಾರೋಗ್ಯ ಮಾತ್ರವಾಗುತ್ತದೆ.

ಎಂತಲೇ ಹೊರನೋಟಕ್ಕೆ ಇದೊಂದು ಹಾಸ್ಯಮಯ ಕೃತಿಯಾಗಿ ಕಂಡರೂ, ಮತ್ತು ಎಷ್ಟೋ ಕಡೆಗೆ ಅಂತಹ ಸನ್ನಿವೇಶಗಳು ಇಲ್ಲಿ ಸಮಾವೇಶಿತವಾಗಿದ್ದರೂ, ಇಲ್ಲಿ ಒಳಗೊಳಗೆ ಗುಪ್ತಗಾಮಿಯಾಗಿ ಹರಿಯುವ ಕೆಲವಾದರೂ ನೋವು, ಚಡಪಡಿಕೆ, ವಿಷಾದಗಳು ನನಗೆ ಮುಖ್ಯವಾಗಿ ಕಾಣಿಸುತ್ತವೆ. ಇಲ್ಲಿ ಪ್ರಕಟವಾಗಿರುವ ಹಾಸ್ಯ ಇಲ್ಲಿಯ, ಒಳಗಿರುವ ಒಂದು ಗಾಢವಾದ ಸಾಮಾಜಿಕ ಕಳಕಳಿಗೆ ಹೊರಮೈಯಾಗಿ ಮಾತ್ರ ಆತು ನಿಂತಿರುವ ಕವಚ ಎಂದು ನಾನು ಭಾವಿಸುತ್ತೇನೆ.

ಇಲ್ಲಿ ವ್ಯಕ್ತವಾದ ನಗೆ ಅನೇಕಗಳ ಹಿಂದೆ ನೋವೂ ಇದೆ ಎಂಬುದು ಬಹಳ ಮುಖ್ಯ. ಲಕ್ಷ್ಮೀಪತಿ ಭಟ್ಟರ ಹೆಂಡತಿ ಮತ್ತು ಮಗಳು ಆತ್ಮಹತ್ಯೆ ಮಾಡಿಕೊಂಡ ಸುದ್ದಿಯನ್ನು ಬರೆಯುತ್ತ, ಗೊರೂರವರು ಬರೆದ, "ಹೋದರೆ

ಹೋಗಲಿ; ಬ್ರಾಹ್ಮಣ ಧರ್ಮಕ್ಕೆ ನಮ್ಮ ಊರಿನಲ್ಲಿ ಬಂದಿದ್ದ ಕಳಂಕ ನಾಶವಾಯಿತು!" ಎಂಬ ವಾಕ್ಯದಲ್ಲಿ ಇಂಥ ನೋವು ಸ್ಪಷ್ಟವಾಗುತ್ತದೆ. ತನ್ನ ಹನ್ನೊಂದನೆಯ ವಯಸ್ಸಿನಲ್ಲಿ, ಎಂದರೆ ತನ್ನ ಮದುವೆಯಾದ ಮೂರೇ ತಿಂಗಳುಗಳಲ್ಲಿ ಗಂಡನನ್ನು ಕಳೆದುಕೊಂಡು ವಿಧವೆಯ ಕುರೂಪ ಧರಿಸಿ, ಇಡಿಯ ಬದುಕು ಮತ್ತು ಪ್ರಕೃತಿಯ ತಿರಸ್ಕಾರ ಮಾತ್ರವಾಗಿ ತನ್ನ ೯೭ ನೇ ವಯಸ್ಸಿನ ವರೆಗೂ ಬದುಕಿ ಸತ್ತ ಹೆಂಗಸೊಬ್ಬಳ ಬಗ್ಗೆ ಬರೆಯುವಾಗ ಗೊರೂರರವರ ನೋವು ಇನ್ನೂ ದಟ್ಟವಾಗುತ್ತದೆ.

ಈ ನೊವು ಇನ್ನೂ ಆಳಕ್ಕಿಳಿಯುವುದು, ಕಮಲಮ್ಮನ ಚಿತ್ರಣದಲ್ಲಿ; ಬ್ರಾಹ್ಮಣರಲ್ಲಿ, ವೈಧವ್ಯ ಕಟೆದು ನಿಲ್ಲಿಸುವ ಕ್ರೂರ ಕುರೂಪದ ಇನ್ನಷ್ಟು ವಿವರಣೆಗಳನ್ನು ಕೊಡುವ ಕಮಲಮ್ಮನ ಚಿತ್ರಣದಲ್ಲಿ. ಕಮಲಮ್ಮ ಒಂದು ಸಮಾಜ ಒಂದು ಜೀವವನ್ನು ಒಂದು ಕತ್ತಲೆಯ ನಿರ್ದಿಷ್ಟದಲ್ಲಿ ಕೊಳೆ ಹಾಕಿದಾಗ ಮೂಡಿಕೊಳ್ಳುವ ಒಂದು ಪಳೆಯುಳಿಕೆ, ನಮ್ಮ ಸಾಮಾಜಿಕ ವಿಚಾರಗಳಿಗೆ ಕೊಟ್ಟ ಆಹಾರ ಮಾತ್ರವಾದ ಆಕೆ, ಚಲನೆ ಮಾತ್ರದ ಒಂದು ಜಡತೆ. "ಅವಳು ಒಂದು ದಿವಸವೂ ಅತ್ತುದನ್ನೂ ಕಾಣೆ, ನಕ್ಕುದನ್ನೂ ಕಾಣೆ, ಬೈದುದನ್ನೂ ಕಾಣೆ, ಹೊಗಳಿದುದನ್ನೂ ಕಾಣೆ, ಕೋಪಿಸಿಕೊಂಡುದನ್ನು ಕಾಣೆ... ಅವಳು ಗಡಿಯಾರದಂತೆ ಯಂತ್ರದಂತೆ ತನ್ನ ಕೆಲಸವನ್ನು ತಾನು ಮಾಡಿಕೊಂಡು ಹೋಗುತ್ತಾಳೆ. ದಿನಗಳು ತಿಂಗಳಾಗುವುದೂ, ತಿಂಗಳುಗಳು ವರ್ಷಗಳಾಗುವುದೂ ಅವಳಿಗೆ ಗೊತ್ತಾಗುವದಿಲ್ಲ." ಈ ಕೆಲವೇ ಸರಳ ಮಾತುಗಳು ಮೂಡಿಸಬಹುದಾದ ಒಂದು ಕೊಳೆಯ ಚಿತ್ರವನ್ನು ಇನ್ನಾವ ಅಭಿವ್ಯಕ್ತಿಯೂ ಕೊಡದು.

ಕೆಲವು ಸಂದರ್ಭಗಳಲ್ಲಿ, ಹೊಸ ವಿಚಾರಗಳು, ಹೊಸ ಆಚಾರಗಳು, ಎಂದರೆ, ಹೊಸ ಬದುಕು ಅರಳಿಕೊಳ್ಳುತ್ತ ಹೋಗುವ ಈ ಕೃತಿಯಲ್ಲಿ ಒಂದೆರಡು ಪರಿಕ್ರಮಗಳೂ ಗಮನಿಸಬೇಕಾದ ಅಂಶಗಳಾಗಿವೆ. ಯಾವು ಯಾವುದೋ ಕಾರಣಗಳಿಂದ ಕೆಲವು ಅರ್ಥ ಸತ್ತ ವಿಚಾರಗಳನ್ನು ಪೋಷಿಸುತ್ತ ಬಂದ ಯಾವುದೇ ಸಮಷ್ಟಿಯೂ ಒಂದಿಲ್ಲೊಂದು ಅವಧಿಯಲ್ಲಿ ತನ್ನ ಈ ಕೊಳೆತ ಅಂಗಗಳನ್ನು ಕಡಿದೊಗೆಯಲೇಬೇಕಾಗುತ್ತ ಸಮಷ್ಟಿಯ ನಾಳೆಗಳ ಉಳಿವಿಗೆ, ಬೆಳವಣಿಗೆಗೆ ಇಂಥ ಪರಿಕ್ರಮಗಳು ಅನಿವಾರ್ಯ.

ಉದಾಹರಣೆಗೆ, ಲಕ್ಷ್ಮೀಪತಿ ಭಟ್ಟರ ಮರಣದೊಂದಿಗೆ ಮೊದಲ ಸಲ ಸತ್ತು ಬಿದ್ದ ಬ್ರಾಹ್ಮಣನೊಬ್ಬನು ಸಲೀಸಾಗಿ ಸ್ಮಶಾನ ಸೇರುವ ವ್ಯವಸ್ಥೆಯಾದರೂ ಆಗುವ ನಂತರದ ಕೆಲವು ಬೆಳವಣಿಗೆಗಳನ್ನೂ ನೋಡಬೇಕು. ಈ ಶವದ ಸ್ಮಶಾನ ಸಾಗಣೆಯಿಂದ ಕುಪಿತರಾದ ವೈದಿಕ ಶಿಖಾಮಣಿಗಳು ಹಾಕಿದ ಬಹಿಷ್ಕಾರದಿಂದಾಗಿ ಭಟ್ಟರ ಮನೆಯವರು ಆತ್ಮಹತ್ಯೆ ಮಾಡಿಕೊಂಡಾಗ, ತೀರ ನೊಂದ ರಾಮಣ್ಣನವರು ಈ ಎಲ್ಲ ವೈದಿಕರನ್ನು ಎದುರು ಹಾಕಿಕೊಂಡು, ಇಂತಹ ಅಪರಕರ್ಮ ಕ್ರಿಯೆಗಳಲ್ಲಿ ಹೊಸ ಪದ್ಧತಿಗಳನ್ನೇ ಅನುಷ್ಠಾನಕ್ಕೆ ತಂದುದನ್ನು ಗಮನಿಸಬೇಕು. ಹಾಗೆಯೇ ಎಂಜಲೆಲೆ ಎತ್ತುವುದು, ಸತ್ತ ಎಮ್ಮೆ ಹೊರುವುದು ಇತ್ಯಾದಿ ಸಂದರ್ಭಗಳು ಸಹ.

ಈ ಒಂದು ಕೃತಿಯಲ್ಲಿ ಗುಂಡನದು ಒಂದು ಗುರುತಿಸಬೇಕಾದ ಪಾತ್ರ. ಲೇಖಕರಿಗೆ ಗೊತ್ತಿದ್ದೋ, ಇಲ್ಲದೆಯೋ, ಈ ಪಾತ್ರ, ಇಲ್ಲಿ ಮಂಡಿತವಾಗಿರುವ ಇಡಿಯ ಬದುಕಿನ ಎಲ್ಲ ಮಗ್ಗಲುಗಳನ್ನು, ಒಂದು 'ನಾಗರಿಕ' ನೋಟದಿಂದ ನೋಡಿ ಒರೆಗೆ ಹಚ್ಚುವ ಸಾಕ್ಷಿಪ್ರಜ್ಞೆಗೆ ಒಂದು ಸಂಕೇತವೇ ಆಗಿ ಬಂದಿದೆ. ಇಲ್ಲಿಯ ಒಟ್ಟು "ಹೃದಯವಂತಿಕೆ"ಯನ್ನೂ "ತಿಳುವಳಿಕೆ"ಯಿಂದ ನೋಡುವ ಈ ಪಾತ್ರವನ್ನೂ ಸೃಷ್ಟಿಸಿ ಗೊರೂರರವರು ಈ ಇಡಿಯ ಕೃತಿಗೆ ಒಂದು ಹೊಸ ಮಗ್ಗುಲನ್ನೇ ನೀಡಿದ್ದಾರೆ ಎನ್ನಬಹುದು.

ಕೊನೆಯಲ್ಲಿ, ನಾನು ಇನ್ನೊಂದು ಮಾತನ್ನೂ ಹೇಳಲೇಬೇಕು: ಇಲ್ಲಿಯ ಒಂದು ಲಗ್ನದ ಸಂದರ್ಭದಲ್ಲಿ ನಡೆದ ಭೋಜನದ ಆರಂಭದಲ್ಲಿ ಪಠಿಸಲಾಗುತ್ತಿರುವ 'ಮಂತ್ರ'ದ 'ಕಟ್ಟ'ನ್ನು ಮಿಕ್ಕಿ, ಆಮಿಷ ತಡೆಯದ ಮಕ್ಕಳು ಕದ್ದು ಕದ್ದು ತಿನ್ನುವಂತೆ; ತಮ್ಮ ಕೃತಿಯ 'ಚೌಕಟ್ಟ'ನ್ನು ಮಿಕ್ಕಿ, ಅದು ಇದೆಲ್ಲವನ್ನೂ ಹೇಳಿಬಿಡುವ ಆತುರವನ್ನು ಆಗೀಗ ಗೊರೂರರವರು ತೋರುವುದರಿಂದ ಈ ಕೃತಿ ಕೆಲವೆಡೆಗೆ ಅಳ್ಳಕಾಗಿ

ರುವುದನ್ನು ಅಲ್ಲಗಳೆಯುವಂತಿಲ್ಲ. ಹೀಗಾಗಿ, ವಾಚಕರು ಅನೇಕ ಸಲ, "ಗಂಧವನ್ನೂ ತೀರ್ಥವೆಂದು ಕುಡಿದ ರೈತ"ರಂತಾಗುತ್ತಾರೆ.

ಆದರೆ ಈ ಚಿಕ್ಕ ಜಾಳನ್ನೂ ಮಿಕ್ಕ ಎಷ್ಟೋ ಒಳ್ಳೆಯದನ್ನು ಕೊಟ್ಟಿರುವುದರಿಂದಲೇ, ಈ 'ನಮ್ಮ ಊರಿನ ರಸಿಕರು' ಇನ್ನೂ ಹಸಿರಾಗಿಯೇ ಇದ್ದಾರೆ.

ಔ

## ಶಂಕರ ಮೊಕಾಶಿ ಪುಣೇಕರ–ಗಂಗವ್ವ ಗಂಗಾಮಾಯಿ

ಸಾರಾಂಶದಲ್ಲಿ ಹೇಳುವುದಾದರೆ, ಆರಕ್ಕೇರದ ಮೂರಕ್ಕಿಳಿಯದ ಒಂದು ಸಾಮಾನ್ಯ ಕಥೆ ಇಲ್ಲಿದೆ.

ಒಬ್ಬ ವಿಧವೆ ಅವ್ವ, ಒಬ್ಬ ವಿಧೇಯ ಮಗ, ಪುಟ್ಟ ಸಂಸಾರ. ಹಿಂದೆ ಶ್ರೀಮಂತಿಕೆ, ಈಗ ಬಡತನ. ಕಾರಣ ಅವ್ವ ನಂಬಿದಂತೆ ಆಕೆಯ ಖಾಸಾ ತಮ್ಮ, ಈ ತಮ್ಮನ ನೆರಳೂ ಆಗದ ಅವ್ವನ ಮಾತು ಮೀರಿ, ಮಗ, ಈತನ (ಸೋದರ ಮಾವನ) ಮಗಳನ್ನೇ ಮದುವೆ ಮಾಡಿಕೊಂಡವ. ಇದರಿಂದ ಸಾಂಸಾರಿಕ ದುಸುಮುಸಿ, ರಸಕಸಿ. ಈ ಗದ್ದಲಗಳ ಮಧ್ಯೆ ಯಾರೋ ದೇಸಾಯಿ, ಯಾರೋ ವಸಂತ, ಯಾರೋ ಅರೆ ಹುಚ್ಚ, ಯಾರೋ ಜಾರ್ಜ್ ವಾಶಿಂಗ್ಟನ್ ಕಂಬಾರಗಣವಿ, ಯಾರ್ಯಾರೋ ಬರುತ್ತಾರೆ, ಹೋಗುತ್ತಾರೆ. ಒಂದು ಪತ್ರದೊಂದಿಗೆ ಕಥೆ ಮುಕ್ತಾಯ ಇಷ್ಟೇ.

ಹೌದು... ಇಷ್ಟೇ ಎಂದು ಹೇಳಬಹುದಾದ ಕಥೆ ಇಲ್ಲಿದ್ದರೂ ಈ ಸರಳ ಕಥೆಯ ಚೌಕಟ್ಟನ್ನು ಎಷ್ಟೋ ಪಟ್ಟು ಮೀರಿದ, ಬದುಕಿನ ಹರಹನ್ನೂ, ಜೀವನ ಮೌಲ್ಯಗಳ ಹಾಸನ್ನೂ ಈ ಕಥೆ ತನ್ನ ತೆಕ್ಕೆಯಲ್ಲಿ ಮುಚ್ಚಿಟ್ಟುಕೊಂಡಿದೆ ಎಂಬುದೇ ಈ ಕಾದಂಬರಿಯ ಚೋದ್ಯವಾಗಿದೆ. ಈ ಚೋದ್ಯವನ್ನರಿಯಲು ಈ ಕೃತಿಯ ಒಂದೊಂದು ಪದರನ್ನೂ ತೆರೆದು ನೋಡಬೇಕು.

ವಿಧವೆ ಗಂಗವ್ವನ ಮಗ ಕಿಟ್ಟಿ ಈ ಕಥೆಯ ನಾಯಕ. ಎಂದರೆ ನೇರವಾಗಿಯೇ ಆಗಲಿ, ನೆಪವಾಗಿಯೇ ಆಗಲಿ, ಕಥೆ ಮುಂದುವರೆಯುವುದು ಈತನ ಹೆಸರಿನಲ್ಲಿ, ಈತನ ಶ್ರೇಯಪ್ರೇಯಗಳ ಹೆಸರಿನಲ್ಲಿ. ಆದ್ದರಿಂದ ಈತನ ಅವಲೋಕನದೊಂದಿಗೇ ಅಭ್ಯಾಸವನ್ನು ಆರಂಭಿಸಬಹುದು.

'ಇಗಾ, ಈತ ಕಿಟ್ಟಿ.' ಈಗ ಈತ ಗಾಣೆ ಕೇಳಲು, ಎಂದರೆ ಸೋದರಮಾವನ ಆಮಂತ್ರಣ ಮನ್ನಿಸಲು, ಎಂದರೆ ಆ ಮೂಲಕ ಮಾಮಲೇದಾರರ ಪ್ರೀತಿ ಸಂಪಾದಿಸಲು ಬಂದಿದ್ದಾನೆ. ಗಾಣೆ ಕೇಳಲು ಬಂದಿದ್ದರೂ, ಗಾಯನ ಕಾರ್ಯಕ್ರಮದಲ್ಲಿ ಗಾಯಕರೊಬ್ಬರು ಇರುತ್ತಾರೆಂಬುದನ್ನು ಆಗೀಗ ಮರೆಯುತ್ತ ಒಳಗೆ ಬಂದಿದ್ದಾನೆ. ಕೂಡಬೇಕಾದಾಗ, ದೊಡ್ಡವರ ಮಧ್ಯದಲ್ಲೋ ಚಿಕ್ಕವರ ಮಧ್ಯದಲ್ಲೋ ಎಂಬ ದ್ವಂದ್ವದಲ್ಲಿ ಒದ್ದಾಡಿ ಅಂತೂ ಚಿಕ್ಕವರ ನಡುವೆ ಕೂಡುತ್ತಾನೆ. ಮುಂದೆ, ದೊಡ್ಡವರ ಮಧ್ಯೆ ಕೂಡುವಾಗಲೂ, ಸರಿಯಾಗಿ ಕೂಡುವ ಧೈರ್ಯವೂ ಇಲ್ಲದೆ ಒದ್ದಾಡುತ್ತಾನೆ. ಗಾಣೆ ನಡೆದಾಗಲೂ, ಇತರರಂತೆ 'ವಹವ್ವಾ' ಎನ್ನಬೇಕೆನಿಸಿದರೂ, ಇತರರಿಗೆ ಕೇಳಿಸೀತೆಂದು ತನಗೆ ಮಾತ್ರ ಕೇಳಿಸುವಂತೆ ಅಂದುಕೊಳ್ಳುತ್ತಾನೆ.

ಇದೇ ಕಿಟ್ಟಿಯ ಮುಖ್ಯ ಗುಣ: ನೈಚ್ಯಾನುಸಂಧಾನತನ, ಮುಖ ಹೇಡಿತನ. ಸದ್ಯಾದೌರ್ಬಲ್ಯ. ಹಾಗಿದ್ದೂ ಈತ ಅನಿವಾರ್ಯವಾಗಿ ಎದ್ದು ಕಾಣುವುದು, ಎರಡು ಪ್ರಬಲ ಶಕ್ತಿಗಳು ಪರಸ್ಪರ ಮಸೆಯುವ ಅಸ್ತ್ರಗಳ ಮುಖ್ಯ ಮಣಿಯೇ ಈತನಾದ್ದರಿಂದ. ಎರಡೂ ಕಡೆ ಗಿರುವ ಎರಡೂ ಪ್ರಬಲ ಶಕ್ತಿಗಳೊಡನೆ ಹೋರಾಡಬೇಕಾದ್ದರಿಂದ ಈತ ಯಾವತ್ತೂ ಸೋಲುತ್ತಾನೆ. ಮೊದಲೇ ಊಹಿಸಬಹುದಾದ ತನ್ನ ಅನಿವಾರ್ಯ ಸೋಲುಗಳಿಂದಾಗಿಯೇ ಈತ ನಮ್ಮ ಸಹಾನುಭೂತಿಯನ್ನು ಗಳಿಸುತ್ತಾನೆ. ಆದರೆ, ಯಾವ ರೀತಿಯಿಂದಲೂ ಬೆನ್ನುಹುರಿಯೇ ಇಲ್ಲದ ಈ ದುರ್ಬಲ ಮನುಷ್ಯ,

ತನ್ನ ದೌರ್ಬಲ್ಯದಿಂದಾಗಿ ಎಷ್ಟೆಲ್ಲವನ್ನು ಸೋಲುತ್ತಾನೋ ಅಷ್ಟೇ ಮೊತ್ತದಲ್ಲಿ ಗೆಲ್ಲುವುದೇ ಇಲ್ಲಿಯ ಮುಖ್ಯ ವೈಶಿಷ್ಟ್ಯವಾಗಿದೆ.

ಇದಕ್ಕೆ ಕಾರಣವೆಂದರೆ, ಸೋಲು ಗೆಲವುಗಳ ನಿಮಿತ್ತ ಮಾತ್ರ ಈತನಾದರೂ, ಇವುಗಳ ಎಲ್ಲ ಸೂತ್ರಗಳೂ ಇನ್ನು ಎಲ್ಲೆಲ್ಲಿಯೋ ಇರುವುದೇ ಆಗಿದೆ. ಒಂದು ದೃಷ್ಟಿಯಿಂದ ಈತ ಒಂದು ಸೊನ್ನೆ ಮಾತ್ರ. ಆದ್ದರಿಂದಲೇ, ಈತನ ಅಕ್ಕ ಪಕ್ಕದ ಅಂಕೆಗಳಿಗೆ ಅಪಾರ ಮಹತ್ವ ಪ್ರಾಪ್ತವಾಗುತ್ತದೆ.

ಅಕ್ಕಪಕ್ಕದ ಅಂಕೆಗಳು ಎಂದು ಹೇಳಿದರೂ, ಯಾವ ಅಂಕಿ ಎಲ್ಲಿ ಎಂದು ಹೇಳಲಾಗದ ಕಷ್ಟವೂ ಇಲ್ಲದೆ. ಉದಾಹರಣೆಗೆ: ರಾಘಪ್ಪ. ಗಂಗವ್ವನನ್ನು ಎಷ್ಟೇ ಖಟ್ಟಿಗೆ ಹಚ್ಚಿದರೂ ಕಿಟ್ಟಿಗೆ ಮಗಳನ್ನು ಕೊಡುವಲ್ಲಿ ರಾಘಪ್ಪನಿಗೆ ಕೆಲವಾದರೂ ಆರ್ದ್ರ ಭಾವನೆಗಳಿದ್ದುವಲ್ಲವೇ? ಆತನ ಹುಚ್ಚು ತಮ್ಮ ಓಡಿ ಹೋಗುವದರಲ್ಲಿ, ಸ್ವಾಮಿರಾಯನ ಬದುಕು ಹಾಳಾಗುವುದರಲ್ಲಿ ಆತನ ಕಾರಸ್ಥಾನ ಇರಲೇ ಇಲ್ಲ, ಅಲ್ಲವೇ? ಮೆಹಬೂಬಳ ಬಗೆಗಿದ್ದ ಆತನ ನಿಷ್ಠೆಯನ್ನು, ಪ್ರಾಮಾಣಿಕತೆಯನ್ನು ಯಾರು ತಾನೇ ಪ್ರಶ್ನಿಸಬಹುದು? ಆದರೆ ಹೀಗಿದ್ದೂ ರಾಘಪ್ಪ ಆತ್ಮಹತ್ಯೆ ಮಾಡಿಕೊಂಡದ್ದೇಕೆ? ಬಹುಶಃ, ಈ 'ನೀತಿಪರ' ಕಾದಂಬರಿ ಪ್ರತಿಪಾದಿಸುವ ನೈತಿಕ ನೆಲೆಗಟ್ಟಿನ ನಂಬಿಕೆಯ ತುದಿಯೇ ಇಲ್ಲಿದೆ.

ನೀತಿಯ ಪ್ರಖರತೆಯೇ ಅಂತಹದು. ಈಗಾಗಲೇ ವಿವರಿಸಿದಂತೆ, ತನ್ನ ಒಳಗೆಲ್ಲೋ ಸ್ರವಿಸುತ್ತಲೇ ಇದ್ದ ಮಾನವೀಯ ಅಂತರ್ಮುಖವನ್ನು ಎಂದೂ ಸ್ಪಂದಿಸದೆ, ಬರಿಯ ತನ್ನ 'ಭರಾರಿ'ತನದ ಅಹಮಿಕೆಯಲ್ಲೇ ಆತ ಮೆರೆಯುತ್ತಿದ್ದಾಗ, ಚಂಪಕ್ಕನ ಮರಣ ಮೊದಲ ಸಲ ಅವನನ್ನು ತೀವ್ರವಾಗಿ ಅಲ್ಲಾಡಿಸುತ್ತದೆ. ಹಾಗಿದ್ದೂ ಆತ ತನ್ನ 'ಒಳಗನ್ನು' ಪರಿಗಣಿಸದೆ ತನ್ನ ದಾರಿಯಲ್ಲೇ ಮುಂದುವರೆಯುತ್ತಾನೆ. ಎಂದರೆ ತನ್ನ ದುರಂತವನ್ನು ತಾನೇ ಇನ್ನಷ್ಟು ಆಳಕ್ಕಿಳಿಸಿಕೊಳ್ಳುತ್ತಾನೆ. ಎಂತಲೇ ತನ್ನ ಕೊನೆಯ ಕ್ಷಣ ಮಾತ್ರಗಳಲ್ಲಿ ತನ್ನನ್ನೇ ನೋಡಿಕೊಂಡಾಗ ತೀರ ಜರ್ಜರಿತನಾದ ತನ್ನನ್ನೇ ಕಾಣುತ್ತಾನೆ. ಇಂತಹ ಸಂದರ್ಭದಲ್ಲಿ ಯಾವುದೇ ಅಹಂಕಾರಿಗೂ ಆಗುವ ತೀವ್ರ ಆಘಾತ ರಾಘಪ್ಪನಿಗೂ ಆಗುತ್ತದೆ. ಎಂತಲೇ ನೀತಿಯ ಈ ಪ್ರಖರ ದರ್ಶನದೆದುರು ಬದುಕು ಅರ್ಥಹೀನವಾಗಿ ಕಾಣುತ್ತದೆ. ಆತ ಆತ್ಮ ಹತ್ಯೆ ಮಾಡಿಕೊಳ್ಳುತ್ತಾನೆ.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶ ಒಂದಿದೆ. ಮೆಹಬೂಬಳ ಮರಣಕ್ಕಿಂತ ಚಂಪಕ್ಕನ ಮರಣವೇ ಆತನನ್ನು ತೀವ್ರವಾಗಿ ಘಾಸಿಗೊಳಿಸಿತು ಎನ್ನುವುದು. ಆಕೆ ಹೆರಿಗೆಯಲ್ಲಿ ತೀರಿಕೊಂಡಳೆನ್ನುವುದೂ, ಈ ಹೆರಿಗೆಯ ಹಿಂದೆ ಎಂತಹ ನೀಚ ಲಾಲಸೆಗಳು ರಾಘಪ್ಪನಲ್ಲಿ ಕೆಲಸ ಮಾಡಿದ್ದವೆನ್ನುವುದೂ ಆತನಿಗೇ ಸ್ಪಷ್ಟವಾದ್ದರಿಂದ, ತಾನೊಬ್ಬ, ದ್ವಿವಿಧವಾದ ಕೊಲೆಗಡುಕ ಎನ್ನುವ ಭಾವವೇ ಅವನನ್ನು ಅರ್ಧ ಕೊಂದುಬಿಡುತ್ತದೆ. ಮುಕ್ತಾಯ ಇಲ್ಲದ ಯಾವುದೇ ಪಶ್ಚಾತ್ತಾಪದ ಕೊನೆಯಂತೆ, ಆತ ಬಂದ ಧನ ಕೊಂದುಕೊಳ್ಳುತ್ತಾನೆ.

ದೇಸಾಯರೊಂದಿಗಿನ ಆತನ 'ಯುದ್ಧ'ದ ಪರಿಣಾಮಗಳೂ ಇಲ್ಲಿ ಮುಖ್ಯ. ಇಲ್ಲಿ ಉದ್ದಕ್ಕೂ ದೇಸಾಯರು ರಾಘಪ್ಪನಿಗೆ ಏನು ಮಾಡಿದರು ಎನ್ನುವುದು ಮುಖ್ಯವಲ್ಲ; ಈತನನ್ನು ಎದುರಿಸುತ್ತಿದ್ದ ದೇಸಾಯರ ಬೆನ್ನ ಹಿಂದಿನ ನೈತಿಕ ನಿಲುವು ಎಷ್ಟು ಗಟ್ಟಿಯಾದದ್ದಿತ್ತು ಎನ್ನುವುದು ಮುಖ್ಯವಾಗುತ್ತದೆ. ಸ್ವಾರ್ಥರಹಿತವಾಗಿ, ಕೇವಲ ತಮ್ಮನ್ನು ನಂಬಿದವರ ಕಲ್ಯಾಣ ಮಾತ್ರವಾಗಲಿ ಎಂಬ ನಂಬಿಗೆಯಿಂದ ಅವರು ಹೊರಟಿದ್ದರಿಂದ ಕ್ರಮೇಣವಾಗಿ ರಾಘಪ್ಪನ ಅಸ್ತ್ರಗಳು ಆತನಿಗೇ ಪ್ರತ್ಯಸ್ತ್ರಗಳಾಗುತ್ತವೆ. ದೇಸಾಯರ ಮೇಲೆ 'ಛೂ' ಬಿಡಲು ಯಾವ ವಸಂತನನ್ನು ಆತ ಸಿದ್ಧ ಮಾಡುತ್ತಿದ್ದನೋ, ಆತನೇ ರಾಘಪ್ಪನ ಮಗಳನ್ನು ಕದ್ದು ಓಡುವುದು ರಾಘಪ್ಪನ ದುರಂತವೇ ಸೈ. ಈ 'ನೀತಿಪರ' ಕಾದಂಬರಿಯ ಭಾಷೆಯಲ್ಲಿ ಹೇಳುವುದಾದರೆ ರಾಘಪ್ಪನ 'ಕೈಗುಣ'ವೇ ಅಂತಹದು. ಆತನ 'ಹಸ್ತ'ವನ್ನು ಸ್ವೀಕರಿಸಿದಂಥ—ಅದೂ ವಸಂತರಾಯನಂಥ—ಜೊಳ್ಳು ನಾರಿನಿಂದ ಇದಕ್ಕೂ ಭಿನ್ನವಾದದ್ದನ್ನೇನನ್ನೂ ನಿರೀಕ್ಷಿಸಲಾಗದು. ಆದರೆ, ಇಂತಹ ದುರ್ಧರ

ಪ್ರಸಂಗದಲ್ಲಿಯೂ ದೇಸಾಯರ ಮಾನವೀಯ ಮೂಲದ ನೈತಿಕ ನಿಲುವಿನ ಗಾಢತೆ ಎದ್ದು ಕಾಣುತ್ತದೆ. ಶಾಂತಾಳನ್ನು ತಮ್ಮ ಸೊಸೆಯಾಗಿ ಅವರು ಒಪ್ಪಿಕೊಳ್ಳುತ್ತಾರೆ. ಇದು ಈ ಕಾದಂಬರಿ ಪ್ರತಿಪಾದಿಸುವ ತುಂಬ ಉದಾತ್ತ ನೈತಿಕ ನಿಲುವುಗಳಲ್ಲಿ ಒಂದು.

ಈ ಕಾದಂಬರಿ ಪ್ರಕಟವಾದ ಕಾಲವನ್ನು ಗಮನಿಸಿದರೆ ಮೊಕಾಶಿಯವರು, ವಿಶೇಷವಾಗಿ ಪಾತ್ರ ನಿರ್ಮಿತಿಯ ದೃಷ್ಟಿಯಿಂದ ಅನೇಕ ಮಹತ್ವದ ಮಜಲುಗಳನ್ನು ಮುಟ್ಟಿದ್ದಾರೆ. ಕಿಟ್ಟಿಯಿಂದ ರಾಘಪ್ಪನ ವರೆಗೆ, ದೇಸಾಯರಿಂದ ವಸಂತನ ವರೆಗೆ, ಅಚ್ಯುತನಿಂದ ವೆಂಕಾಟಿಯ ವರೆಗೆ, ಗಂಗವ್ವನಿಂದ ಚಂಪಕ್ಕನ ವರೆಗೆ, ಪಾತ್ರಗಳ ತೀರ ವಿಭಿನ್ನ ಜಗತ್ತನ್ನೇ ಸೃಷ್ಟಿಸಿದರೂ ಪ್ರತಿಯೊಂದು ಪಾತ್ರದ ಎತ್ತರವನ್ನೂ ಅದರ ಪೂರ್ತಿ ಸ್ವಾತಂತ್ರ್ಯದೊಂದಿಗೆ ಚೇತರಿಸಿದ್ದಾರೆ. ಇದು ಮೊಕಾಶಿಯವರ ದೊಡ್ಡ ಸಾಧನೆ.

ವ್ಯಕ್ತಿತ್ವ ಚಿತ್ರಣದಷ್ಟೇ ಮಹತ್ವವನ್ನು ಪ್ರಭಾವಶಾಲಿಯಾದ ಪರಿಸರ ಚಿತ್ರಣ, ಸಂಭಾಷಣೆಯ ಚತುರತೆ, ಆಡು ಮಾತಿನ ಹುನ್ನಾರುಗಳ ಅಳವಡಿಕೆಗಳಿಗೂ ಬತ್ತಿರುವದು ಈ ಕಾದಂಬರಿಯ ಯಶಸ್ಸನ್ನು ಎತ್ತಿ ಹಿಡಿಯಲು ಸಹಾಯಕವಾಗಿವೆ. ಆಫೀಸಿನ ಡ್ರಾಫ್ಟ್ ಬರಹದಲ್ಲಿ ಸ್ಪೆಲಿಂಗ್ ತಪ್ಪುವ ಕಿಟ್ಟಿಯ ಪ್ರಕರಣ. ಶೇಷಶಾಯಿ ನಾಟಕ ಕಂಪನಿಯ ಹ್ಯಾಂಡಬಿಲ್ ಭಾಷೆ, ವಸಂತನ ಪ್ರೇಮಪತ್ರದ ಮಾದರಿ. ಇಂತಹ ಚಿಕ್ಕ ಘಟನೆಗಳಲ್ಲೂ ಲೇಖಕರು ತೋರಿರುವ ಶ್ರದ್ಧೆ ಮೆಚ್ಚುವಂತಹದು.

ಏನಿದ್ದರೂ. ಸಾಂಪ್ರದಾಯಿಕ ನೈತಿಕ ನೆಲೆಗಟ್ಟುಗಳ ಮೇಲೆ, ಬದುಕಿನ ಮೌಲ್ಯಾತ್ಮಕ ಪಾಸಿನ ಮೇಲೆ, ಕಟ್ಟಲಾದ ಈ ಕಾದಂಬರಿ, ತಾನು ಸ್ವಯಂ ಘೋಷಿಸಿಕೊಂಡಿರುವಂತಹ 'ನೀತಿಪರ ಕಾದಂಬರಿ' ಎಂಬ ತಲೆಕಟ್ಟನ್ನೂ, ಯಾವ ರೀತಿಯಲ್ಲೂ ಕೇವಲ ಬೋಧನೆಯ ರೀತಿಯಲ್ಲಿ ತಾರದೆ, ಸರಳವಾದ, ರೋಚಕವಾದ ಒಂದು ಕಥೆಯ ರೂಪದಲ್ಲಿ ಮಂಡಿಸಿದೆ. ಹಾಗೆ ಮಂಡಿಸಿಯೂ ತಾನು ಅಂದುಕೊಂಡಂತಹ ಘೋಷಣೆಯ ನಿರ್ವಹಣೆಯಲ್ಲಿ ಅಷ್ಟೇ ಕಲಾತ್ಮಕ ರೀತಿಯಿಂದಲೇ ಯಶಸ್ವಿಯಾಗಿ ಬಹುಶಃ ಇದು ಈ ಕಾದಂಬರಿಯ ಬಹು ದೊಡ್ಡ ಗುಣವಾಗಿದೆ. ❁

ಸ್ವಾಮಿ ದಯಾನಂದ ಸರಸ್ವತಿಯವರು ಆರ್ಯ ಸಮಾಜವನ್ನು ಸ್ಥಾಪಿಸಿದರು. ಅವರು ಅಸ್ಪೃಶ್ಯತೆಯನ್ನು ಬಲವಾಗಿ ವಿರೋಧಿಸುತ್ತಿದ್ದರು. ಅದಕ್ಕಾಗಿ ಅನೇಕ ಸಲ ಅವರು ತಮ್ಮ ಹಿಂಬಾಲಕರ ಅಸಮಾಧಾನಕ್ಕೂ ಕಾರಣರಾಗಬೇಕಾಗುತ್ತಿತ್ತು.

ಧರ್ಮಪ್ರಚಾರಕ್ಕಾಗಿ ಸ್ವಾಮಿ ದಯಾನಂದ ಸರಸ್ವತಿಯವರು ದೇಶದಲ್ಲೆಲ್ಲ ಸುತ್ತಾಡುತ್ತಿದ್ದರು. ಒಂದು ಊರಿನಲ್ಲಿ, ಅವನಿಗೆ ಒಬ್ಬ ಬಡ ನಾಪಿತನು ತನ್ನ ಮನೆಯಲ್ಲಿ ಮಾಡಿದ ರೊಟ್ಟಿಯನ್ನು ತಂದು ಊಟ ಮಾಡುವಂತೆ ಪ್ರಾರ್ಥಿಸಿಕೊಂಡನು. ದಯಾನಂದ ಸರಸ್ವತಿಯವರು ಅತ್ಯಂತ ಸಂತೋಷದಿಂದ ಅದನ್ನು ತಿನ್ನಲು ಮುಂದಾದರು. ಇದನ್ನೆಲ್ಲ ನೋಡುತ್ತ ಅಲ್ಲಿಯೇ ಕುಳಿತಿದ್ದ ಅವರ ಭಕ್ತನೊಬ್ಬ, "ನೀವು ಹಜಾಮನ ರೊಟ್ಟಿಯನ್ನು ತಿನ್ನುತ್ತೀರಾ?" ಎಂದು ಗೊಣಗಿದ. ಅದಕ್ಕೆ ತಕ್ಷಣ ಸ್ವಾಮಿ ದಯಾನಂದರು, "ಇಲ್ಲ ಇಲ್ಲ ನಾನು ಹಜಾಮನ ರೊಟ್ಟಿಯನ್ನು ತಿನ್ನುತ್ತಿಲ್ಲ. ಇದು ಜೋಳದ ಹಿಟ್ಟಿನಿಂದ ಮಾಡಿದ ರೊಟ್ಟಿ, ಅದಕ್ಕಾಗಿ ತಿನ್ನುತ್ತಿದ್ದೇನೆ" ಎಂದರು. ಅದನ್ನು ಕೇಳಿದ ಅವರ ಭಕ್ತ ನಾಚಿ ತಲೆ ತಗ್ಗಿಸಿದನು.

–ವಿ. ಕೆ. ರೇಣುಕಾ

# ಒಂದು ಸೈನಿಕ ಕಾರ್ಯಾಚರಣೆಯ ನೆನಪು

ರೇಣುಕ

೧೯೭೮ನೆಯ ವರ್ಷದ ಬೇಸಿಗೆಯ ಒಂದು ದಿನ ಕಾರ್ಯ ನಿಮಿತ್ತ ಮದ್ರಾಸಿಗೆ ಹೋಗಿದ್ದೆ. ಸೈದಾಪುರಕ್ಕೆ ಹೋಗುವ ರೈಲು ಹಿಡಿಯುವ ಸಲುವಾಗಿ ಬೀಚ್ ಸ್ಟೇಶನ್ನಿನಲ್ಲಿ ಕಾದು ನಿಂತಿದ್ದೆ. ವಿಪರೀತ ಸೆಕೆಯಿಂದ ಏದುಸಿರು ಬಿಡುತ್ತಿದ್ದೆ. ಮೂರು ನಾಲ್ಕು ನಿಮಿಷಗಳಿಗೊಮ್ಮೆ ಸ್ಥಳೀಯ ವಿದ್ಯುಚ್ಚಾಲಿತ ರೈಲುಗಳು ಬಂದು ಹೋಗುತ್ತಿದ್ದುವು. ಅಷ್ಟರಲ್ಲಿ ನಾನು ಹೋಗಬೇಕಾದ ರೈಲೂ ಬಂತು. ಆತುರದಿಂದ ಹೋಗಿ ರೈಲಿನಲ್ಲಿ ಕುಳಿತುಕೊಂಡೆ. ಅಷ್ಟಾಗಿ ಜನಸಂದಣಿಯಿರಲಿಲ್ಲ. ರೈಲು ಎಗ್‌ಮೋರ್ ನಿಲ್ದಾಣದಲ್ಲಿ ನಿಂತಾಗ ಖಾದಿ ಸಮವಸ್ತ್ರವನ್ನು ತೊಟ್ಟಿದ್ದ ಆಸಾಮಿಯೊಬ್ಬ ಬಂದು ನನ್ನೆದುರಿನ ಸೀಟಿನಲ್ಲಿ ಕುಳಿತುಕೊಂಡ. ಆರು ಅಡಿಗಳಷ್ಟು ಎತ್ತರದ ನಿಲುವಿನ ಆತ ವಯಸ್ಸಿನ ಭಾರದಿಂದ ತುಸು ಬಾಗಿದ್ದ. ಹ್ಯಾಟನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ತಲೆ ಕೆರೆದುಕೊಂಡ. ಹಣ್ಣಾದ ತಲೆಗೂದಲು: ಮುಖ ಕ್ಷೌರ ಮಾಡಿ ಎರಡು ದಿನಗಳಾದರೂ ಆಗಿರಬೇಕು. ಮುಖದ ಮೇಲೆ ಚಿಂತೆಯ ಗೆರೆಗಳು ದಟ್ಟವಾಗಿ ಮೂಡಿದ್ದುವು.

ಆತ ನನ್ನ ಮುಖವನ್ನೇ ಒಂದೆರಡು ಸಲ ದಿಟ್ಟಿಸಿ ನೋಡಿದಾಗ ನಾನು ಅತ್ತಿತ್ತ ನೋಡತೊಡಗಿದೆ. ನನಗೂ ಆತನನ್ನು ಎಲ್ಲಿಯೋ ನೋಡಿದ ಹಾಗೆ ನೆನಪು. ಆತನನ್ನೇ ಕೇಳಲು ಏನೋ ಒಂದು ಬಗೆಯ ಸಂಕೋಚ. ಮತ್ತೆ ನನ್ನ ದೃಷ್ಟಿಯನ್ನು ಮೆಲ್ಲನೆ ಆತನತ್ತ ಹರಿಸಿದೆ. ಅವನ ನೋಟ ನನ್ನತ್ತಲೇ ಇತ್ತು.

ಚೆಟ್‌ಪಟ್ ನಿಲ್ದಾಣದಲ್ಲಿ ರೈಲು ನಿಂತಾಗ ಬೋಗಿ ಅರ್ಧದಷ್ಟು ಖಾಲಿಯಾಗಿ ನಾಲ್ಕಾರು ಮಂದಿ ಪ್ರಯಾಣಿಕರು ಮಾತ್ರ ಉಳಿದಿದ್ದರು. ಮತ್ತೊಮ್ಮೆ ಎದುರಿಗೆ ಕುಳಿತಿದ್ದ ವ್ಯಕ್ತಿಯತ್ತ ಮೆಲ್ಲನೆ ನೋಟ ಹರಿಸಿದೆ. ನನ್ನ ನೋಟದೊಂದಿಗೆ ಅವನ ನೋಟ ಬೆರೆತಾಗ ಅವನ ದಪ್ಪ ತುಟಿಗಳ ಮೇಲೆ ತೆಳುವಾದ ನಗೆ ಮೂಡಿತು. ತುಟಿಗಳನ್ನು ನಾಲಿಗೆಯಿಂದ ಸವರಿಕೊಂಡು ಸಂಕೋಚದಿಂದ, "ಎನ್ನ ಸಾಮಿ, ನೀವು ಹದಿನೆಂಟನೇ ಮದ್ರಾಸ್ ಬಟಾಲಿಯನ್ನಿನಲ್ಲಿ ನಾಯಕ್ ಆಗಿದ್ದಿರಲ್ಲವೆ?" ಅನುಮಾನದಿಂದಲೇ ತಮಿಳಿನಲ್ಲಿ ಕೇಳಿದ.

"ಹೌದು ನಿಮ್ಮ ಹೆಸರೇನು?" ಗುರುತರಿಯದ ರಾಜ್ಯದಲ್ಲಿ ಚಿರಪರಿಚಿತನೊಬ್ಬನು ದೊರೆತ ಸಂಭ್ರಮದಿಂದ ಕೇಳಿದೆ.

"ಎನ್ನ ಪೇರು (ಹೆಸರು) ಪೊನ್ನು ಪಿಳ್ಳೈ ನಾಡರ್, ಲಾನ್ಸ್ ನಾಯಕ ಆಗಿದ್ದೆ" ಎಂದು ಹೆಮ್ಮೆಯಿಂದ ಹೇಳಿದ.

ಹಿಂದಿನ ನೆನಪುಗಳು ಒಂದೊಂದಾಗಿ ಮರುಕಳಿಸತೊಡಗಿದುವು. ತಟ್ಟನೆ ಎದ್ದು ಹೋಗಿ ಆತನ ಪಕ್ಕದಲ್ಲಿ ಕುಳಿತು ಅವನನ್ನು ತಬ್ಬಿ



ಕೊಂಡು, "ಏನಂ ಪಿಳ್ಳೈ, ಗುರುತೇ ಸಿಗದಷ್ಟು ಬದಲಾಗಿದ್ದಿ. ನಿನ್ನನ್ನು ನಾನು ಕೊನೆಯ ಸಲ ನೋಡಿದ್ದು ಬಬಿನಾ ಶಿಬಿರದಲ್ಲಿ ಆಗ ಹೇಗಿದ್ದೆ, ಈಗ ಎಷ್ಟು ಬದಲಾಗಿಬಿಟ್ಟಿರುವಿ! ಗುರುತಾದರೂ ಹೇಗೆ ಸಿಗಬೇಕು?" ಎಂದೆಲ್ಲ ಆತ್ಮೀಯವಾಗಿ ವಿಚಾರಿಸತೊಡಗಿದೆ.

ಹಲವು ವರ್ಷಗಳ ಹಿಂದಿನ ನಾಡರನ ಆಜಾನುಬಾಹು ಆಕೃತಿ ಕಣ್ಣ ಮುಂದೆ ಕಟ್ಟಿತು.

"ಎನ್ನ ಸಾಮಿ, ನಾನು ಮಿಲ್ಟ್ರಿ ಬಿಟ್ಟು ಬಂದು ಇರುವತ್ತು (ಇಪ್ಪತ್ತು) ವರ್ಷ ಆಯ್ತು. ಅಂದ ಕಾಲಮೋ ಬೇರೆ (ಆ ಕಾಲವೇ ಬೇರೆ)" ಎಂದು ನಿಟ್ಟುಸಿರೊಂದನ್ನು ಬಿಟ್ಟ.

"ಈಗ ಎಲ್ಲಿ ಕೆಲಸ ಮಾಡುತ್ತಿರುವೆ ನಾಡರ್?" ನಾನು ಸಾವಧಾನವಾಗಿ ಅವನ ಬಗ್ಗೆ ವಿಚಾರಿಸಲಾರಂಭಿಸಿದೆ. ಅವನು ನಿರಾಸಕ್ತಿಯಿಂದಲೇ ತನ್ನ ಬಗ್ಗೆ ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರಿಸಲಾರಂಭಿಸಿದ. ಹಿಂದೆ ಸೇನೆಯಲ್ಲಿರುವಾಗ ತಾನು ಸಕ್ರಿಯವಾಗಿ ಭಾಗವಹಿಸಿದ್ದ ಅನೇಕ ಸೈನಿಕ ಕಾರ್ಯಾಚರಣೆಗಳ ಸಾಹಸ ಪ್ರಸಂಗಗಳನ್ನು ನೆನೆದುಕೊಳ್ಳುವುದರಲ್ಲಿಯೇ ಅವನು ಉತ್ಸಾಹಿತನಾಗುತ್ತಿದ್ದ.

ಪೊನ್ನು ಪಿಳ್ಳೈ ನಾಡರ್ ನಲವತ್ತರ ಹರೆಯದಲ್ಲೇ ಸೇನೆಯಿಂದ ನಿವೃತ್ತನಾದ. ಅಂದಿನ ದಿನಗಳಲ್ಲಿ ಸೈನಿಕರಿಗೆ ದೊರೆಯುತ್ತಿದ್ದ ಸಂಬಳ ಸಾರಿಗೆಗಳು ಬಹು ಕಮ್ಮಿ. ಮೊದಲ ದರ್ಜೆಯ ಸಿಪಾಯಿಯ ಮೂಲ ವೇತನವೇ ಆಗ ಅರವತ್ತು ರೂಪಾಯಿಗಳಷ್ಟಿತ್ತು. ಈಗ ನಾಡರನಿಗೆ ತುಟ್ಟಿ ಭತ್ಯವೂ ಸೇರಿದಂತೆ ಪ್ರತಿ ತಿಂಗಳೂ ತೊಂಬತ್ತು ರೂಪಾಯಿಗಳ ನಿವೃತ್ತಿ ವೇತನ ದೊರೆಯುತ್ತಿತ್ತು. ಸೇನೆಗೆ ಸೇರುವಾಗ ಅವನು ಆರನೆಯ ತರಗತಿಯ ವರೆಗೆ ಮಾತ್ರ ಕಲಿತಿದ್ದ. ಅದರಿಂದಾಗಿ ನಿವೃತ್ತಿಯ ನಂತರ ನಾಡರನಿಗೆ ಸೂಕ್ತವಾದ ಉದ್ಯೋಗ ದೊರಕಲಿಲ್ಲ. ಚಿಕ್ಕ ಕೆಲಸಕ್ಕೂ ಎಸ್. ಎಸ್. ಎಲ್. ಸಿ. ಯಷ್ಟು ಕನಿಷ್ಠ ವಿದ್ಯಾರ್ಹತೆಯನ್ನು ಹೊಂದಿರಬೇಕಾದ ಕಾಲವಾಗಿತ್ತು. ತನ್ನ ಯೌವನದ ಪ್ರಮುಖ ಭಾಗವನ್ನೆಲ್ಲಾ ಸೇನೆಯ ಸೇವೆಯಲ್ಲಿಯೇ ಸವೆಸಿದ್ದ ನಾಡರನಿಗೆ ನಿವೃತ್ತಿಯ ನಂತರ ಕೈತುಂಬ ವೇತನ ತರುವ ಯಾವ ಕೆಲಸವೂ ದೊರೆಯಲಿಲ್ಲ. ಕೊನೆಗೆ ಖಾಸಗಿ ಲಾರಿ ಕಂಪನಿಯೊಂದರಲ್ಲಿ ಹತ್ತು ವರ್ಷಗಳಿಂದ ಮುನ್ನೂರು ರೂಪಾಯಿಗಳ ವೇತನ ಪಡೆಯುವ ಕಾವಲುಗಾರನಾಗಿದ್ದ. ನಾಲ್ಕು ಮಕ್ಕಳನ್ನು ಹೊಂದಿದ್ದ ತನ್ನ ಸಂಸಾರವನ್ನು ಬಹು ಕಷ್ಟದಿಂದಲೇ ನಿಭಾ

ಯಿಸುತ್ತಿದ್ದ. ಎಲ್ಲಾ ಸೈನಿಕರಂತೆ ನಾಡರನೂ ತಡವಾಗಿ ವಿವಾಹವಾಗಿದ್ದ ಕಾರಣ ಆತನ ಇಳಿ ವಯಸ್ಸಿನಲ್ಲಿ ಮಕ್ಕಳಾರೂ ಕೈಗೆ ಬಂದಿರಲಿಲ್ಲ.

ನಂಗಂಬಾಕಂ ನಿಲ್ದಾಣದಲ್ಲಿ ರೈಲು ನಿಂತಾಗ ಪೊನ್ನು ಪಿಳ್ಳೈ ನಾಡರನನ್ನು ಭಾರವಾದ ಹೃದಯದಿಂದ ಬೀಳ್ಕೊಂಡೆ. ಅವನು ಕಾವಲುಗಾರನಾಗಿದ್ದುದು ನಂಗಂಬಾಕಂ ಬಳಿಯಿದ್ದ ಲಾರಿ ಕಂಪನಿಯಲ್ಲಿಯೇ. ರೈಲು ಓಡುತ್ತಲೇ ಇತ್ತು. ಇಪ್ಪತ್ತು ವರ್ಷಗಳ ಹಿಂದೆ ಭಾರತದ ಈಶಾನ್ಯ ಮೂಲೆಯಲ್ಲಿನ ನಾಗಾಲ್ಯಾಂಡಿನಲ್ಲಿ ನಡೆದ ಸೈನಿಕ ಕಾರ್ಯಾಚರಣೆಯ ನೆನಪೊಂದು ಮನಸ್ಸಿನ ಪರದೆಯ ಮೇಲೆ ಮೂಡಿತು.

ನಮ್ಮ ಬಟಾಲಿಯನ್ನಿನ ಎರಡು ಕಂಪನಿಗಳು ಇಂಫಾಲಾದಿಂದ ಉಕ್ರೂಲಿಗೆ ಬಂದು ಒಂದು ವಾರ ಕಳೆದಿತ್ತು. ಉಕ್ರೂಲ್ ಸಬ್‌ಡಿವಿಜನ್ ಕೇಂದ್ರವಾಗಿತ್ತು. ಆ ಪ್ರದೇಶದಲ್ಲಿ ಬಂಡುಖೋರ ನಾಗಾಗಳ ಚಟುವಟಿಕೆಗಳು ಹೆಚ್ಚಾಗಿದ್ದುವು. ಮಣಿಪುರಿಗಳೇ ಹೆಚ್ಚಾಗಿದ್ದ ಅನೇಕ ಗ್ರಾಮಗಳನ್ನವರು ಕೊಳ್ಳೆ ಹೊಡೆದು ಸುಟ್ಟಿದ್ದರು. ಈ ಬಂಡುಖೋರರ ಬಗ್ಗೆ ಸುಳಿವು ಸಿಗುವುದೇ ದುರ್ಲಭವಾಗಿತ್ತು. ಆ ಸಮಯದಲ್ಲಿ ಚೀನದಲ್ಲಿ ಗೆರಿಲ್ಲಾ ಸಮರ ಶಿಕ್ಷಣವನ್ನು ಪಡೆದುಕೊಂಡು ಕೇಟೀ ಸೇಮಾನ ನಾಯಕತ್ವದಲ್ಲಿ ವಿದ್ರೋಹಿಗಳ ದೊಡ್ಡ ತಂಡವೊಂದು ಬರ್ಮ ಮೂಲಕ ಗಡಿದಾಟಿ ತೆನಸುಂಗ್ ಪ್ರದೇಶವನ್ನು ಪ್ರವೇಶಿಸುವುದಾಗಿ ಸುದ್ದಿ ದೊರಕಿತು. ನಮ್ಮ ಎರಡು ಕಂಪನಿಗಳನ್ನು ವಿದ್ರೋಹಿಗಳ ದಮನಕ್ಕಾಗಿ ತೆನಸುಂಗ್ ಪ್ರದೇಶಕ್ಕೆ ರವಾನಿಸಲಾಯಿತು.

ಒಂದು ಕಂಪನಿ 'ದಿಹೋಮ' ಅಭಿಮುಖವಾಗಿ ಸಾಗಿತು. ಡೆಲ್ಟಾ ಕಂಪನಿ 'ಚಕಭಾಮ' ದತ್ತ ತೆರಳಿತು. ನಾನು ಮತ್ತು ನಾಡರ್ ಇದ್ದ ಈ ಕಂಪನಿಯ ನಾಯಕತ್ವವನ್ನು ಸುಬೇದಾರ್ ರಾಮದಾಸ ವಹಿಸಿದ್ದರು. ನಮ್ಮ ಕಾರ್ಯಾಚರಣೆಯ ಅವಧಿ ಮೂರು ದಿನಗಳಿಗೆ ಸೀಮಿತವಾಗಿತ್ತು.

ಮೊದಲ ದಿನ ಹತ್ತಾರು ಮೈಲುಗಳು ನಿತ್ಯ ಹರಿದ್ವರ್ಣದ ದಟ್ಟಡವಿಗಳನ್ನು ಶೋಧಿಸುತ್ತಾ ಸಾಗಿದವು. ನಾಗಾ ಗುಡ್ಡಗಾಡಿನ ಕಾಡುಗಳಲ್ಲಿ ವಿದ್ರೋಹಿಗಳನ್ನು ಹುಡುಕಿಕೊಂಡು ಹೋಗುವುದೆಂದರೆ ಕೈಗೆ ಸಿಗದ ಕಣ್ಣಿಗೆ ಕಾಣದ ಗಾಳಿಯನ್ನು ಬೆಂಬತ್ತಿದಂತೆಯೇ ಸರಿ. ಎರಡನೆಯ ದಿನ ನಮಗೆ ಕಾಡಿನಲ್ಲಿ ದಾರಿ ತಪ್ಪಿ ಬರ್ಮಾ ಗಡಿ ಕಾವಲು ಠಾಣೆಯೊಂದರ ಬಳಿ ಬಂದೆವು. ಠಾಣೆಯ ಗಡಿ ಪೋಲೀಸರು ಹಿಂದಿರುಗಲು ನಮಗೆ ಮಾರ್ಗದರ್ಶನ ಮಾಡಿದರು. ಸುಮಾರು ಇಪ್ಪತ್ತು ಮೈಲುಗಳಷ್ಟು ದೂರವನ್ನು ಕಾಡಿನಿಂದಾವೃತವಾದ ದುರ್ಗಮವಾದ ಬೆಟ್ಟಗಳ ಹಾದಿಯಲ್ಲಿ ನಡೆದು ಉಕ್ರೂಲನ್ನು ತಲಪಬೇಕಿತ್ತು. ನಾವು ತಂದಿದ್ದ ಆಹಾರ ಸಾಮಗ್ರಿಯೆಲ್ಲಾ ಮುಗಿದಿತ್ತು. ಹಸಿವಿನಿಂದ, ಪ್ರಯಾಣದ ಬಳಲಿಕೆಯಿಂದ ಬಸವಳಿದು ಒಬ್ಬರ ಹಿಂದೆ ಒಬ್ಬರಂತೆ ನಿಧಾನವಾಗಿ ನಡೆಯುತ್ತಿದ್ದೆವು. ನಾಡರನು ನಮ್ಮ ತಂಡಕ್ಕೆ 'ಸ್ಕೌಟ್' ಆಗಿದ್ದ ಕಾರಣ ನನ್ನನ್ನು ಹೆಗಲ ಮೇಲೆ ಹೊತ್ತು ಎಲ್ಲರಿಗೂ ಮುಂದೆ ನಡೆಯುತ್ತಿದ್ದ. ಇದ್ದಕ್ಕಿದ್ದಂತೆ ಎಲ್ಲರಿಗೂ ಹಿಂದೆ ಕಾಲೆಳೆಯುತ್ತಾ ಬರುತ್ತಿದ್ದ ಸಿಪಾಯಿ ನಾರಾಯಣರಾವ್ ಭಯದಿಂದ ಕಿರುಚಿಕೊಂಡ. ನಾವೆಲ್ಲ ಗಾಬರಿಯಿಂದ ಅವನ ಬಳಿ ಧಾವಿಸಿದೆವು.

ಅಲ್ಲಿ ನಾವು ಕಂಡ ದೃಶ್ಯದಿಂದ ತಲ್ಲಣಗೊಂಡೆವು. ಇನ್ನೊಂದು ಕ್ಷಣ ತಡವಾಗಿದ್ದರೆ ರಾವ್ ಗತಿ ಕೊನೆಯಾಗುತ್ತಿತ್ತು. ಸುಮಾರು ಹತ್ತು ಅಡಿಗಳಿಗೂ ಮೀರಿದ ದೈತ್ಯಾಕಾರದ ಕಾಳಿಂಗ ಸರ್ಪವೊಂದು ಬಾಲದ ಆಧಾರದ ಮೇಲೆ ನಿಂತು ಅತ್ತಿತ್ತ ತೊನೆಯುತ್ತಾ ಮತ್ತೆ ಅಪ್ಪಳಿಸಲು ಹೆಡೆ ಬಿಚ್ಚಿ ನಿಂತಿದೆ. ಅದರ ಮೊರದಗಲದ ಹೆಡೆಯಲ್ಲಿ ಹೊಳಪಿನ ಸಣ್ಣ ಕಣ್ಣುಗಳು ಮಿನುಗುತ್ತಿವೆ. ಆ ಮಹಾ ಉರಗದ ಗಮನ ನಮ್ಮತ್ತ ಹರಿಯಿತು. ಅದು

ಒಂದು ಸಲ ರೋಷದಿಂದ ನಮ್ಮತ್ತ ನೋಡಿ ಫೂತ್ಕರಿಸಿದಾಗ ಮರದ ಮೇಲಿದ್ದ ಪಕ್ಷಿಗಳೆಲ್ಲಾ ಚಿಲಿಪಿಲಿಗುಟ್ಟುತ್ತಾ ಹಾರಿ ಹೋದವು. ನಾವೂ ಹೆದರಿಕೆಯಿಂದ ದಿಕ್ಕಾಪಾಲಾಗಿ ಓಡಿದೆವು. ಆಗ ಪೊನ್ನು ಪಿಳ್ಳೈ ನಾಡರ್ ಏಕಾಂಗಿಯಾಗಿ ನಿಂತಲ್ಲಿಂದ ಕದಲದೆ ದೈತ್ಯ ಸರ್ಪದ ಹೆಡೆಗೆ ಗುರಿಯಿಟ್ಟು ಗನ್ನಿನಿಂದ ಗುಂಡು ಹಾರಿಸಿದಾಗ ಬುಡ ಕಡಿದ ಬಾಳೆಯ ದಿಂಡಿನಂತೆ ಆ ಮಹಾ ಉರಗ ನೆಲಕ್ಕುರುಳಿತು.

ಇಂಥ ರಾಕ್ಷಸಾಕಾರದ ಸರ್ಪವನ್ನು ನಾವು ಯಾರೂ ನಮ್ಮ ಜೀವಿತದಲ್ಲಿಯೇ ಕಂಡಿರಲಿಲ್ಲ. ಅದು ಮರದ ಪಕ್ಕದಲ್ಲಿಯೋ, ಪೊದೆಗಳ ಮರೆಯಲ್ಲಿಯೋ ಅಡಗಿದ್ದು ಯಾರಾದರೂ ತನ್ನ ಬಳಿ ಹಾದು ಹೋಗುವಾಗ ತಟ್ಟನೆ ಬಾಲದ ಮೇಲೆ ನಿಂತು ಬಳಿಸಾರಿದವರ ತಲೆಯ ಮೇಲೆ ಹೆಡೆಯಿಂದ ಎಷ್ಟು ಬಲವಾಗಿ ಅಪ್ಪಳಿಸುತ್ತಿತ್ತೆಂದರೆ, ಹೊಡೆಸಿಕೊಂಡ ವ್ಯಕ್ತಿ ತಕ್ಷಣ ತಲೆ ಬಿರಿದು ಸಾಯುತ್ತಿದ್ದ. ನಮ್ಮ ಸಿಪಾಯಿ ನಾರಾಯಣರಾವ್ ತಲೆಗೆ ಉಕ್ಕಿನ ಶಿರಸ್ತ್ರಾಣವನ್ನು ತೊಟ್ಟಿದ್ದುದರಿಂದ ಸರ್ಪದ ಮೊದಲ ಹೊಡೆತದಿಂದ ಪಾರಾಗಿದ್ದ. ಅಲ್ಲಿಯ ಗ್ರಾಮವಾಸಿಗಳು ಕಾಡಿನಲ್ಲಿ ಸಂಚರಿಸುವಾಗ ತಲೆಯ ಮೇಲೆ ತೆಳುವಾದ ಚಿಕ್ಕ ಕಲ್ಲು ಚಪ್ಪಡಿಯ ತುಂಡನ್ನು ಹೊತ್ತು ನಡೆದಾಡುವ ವಿಷಯ ಅನಂತರ ನಮಗೆ ತಿಳಿಯಿತು.

ನಾವು ಜೊತೆಯಲ್ಲಿ ತಂದಿದ್ದ ಆಹಾರವೆಲ್ಲಾ ಹಿಂದಿನ ದಿನದ ಸಂಜೆಗೇ ಮುಗಿದಿತ್ತು. ಹಸಿವಿನಿಂದ ಕಂಗಾಲಾಗಿದ್ದೆವು. ಈ ಕಾಡಿನಿಂದ ಹೊರಬಿದ್ದು ಬೇಗ ಶಿಬಿರವನ್ನು ಸೇರುವ ಆಸೆಯಿಂದ ನಾವೆಲ್ಲಾ ಕಾಲೆಳೆದುಕೊಂಡು ನಡೆಯುತ್ತಿದ್ದೆವು. ನಮ್ಮ ಸಹನೆಯನ್ನು ಪರೀಕ್ಷಿಸಲೆಂಬಂತೆ ಕಡಿದಾದ ಬೆಟ್ಟವೊಂದು ನಮಗೆದುರಾಯಿತು. ಅಕ್ಕಪಕ್ಕದಲ್ಲಿ ಹಳ್ಳಿಗಳ ಸುಳಿವೇ ಕಂಡುಬರಲಿಲ್ಲ. ಬೆಟ್ಟದ ಮೇಲೆ ಜನರು ನಡೆದಾಡಿದ ಸವೆದ ಸೀಳು ದಾರಿಯ ಗುರುತಿತ್ತು.



ಮೂರು ದಿನಗಳ ಕಾಡಿನ ಹಾದಿಯಲ್ಲಿ ಒಬ್ಬ ಗ್ರಾಮ ನಿವಾಸಿಯೂ ನಮಗೆ ಎದುರಾಗಲಿಲ್ಲ. ಬೆಟ್ಟದ ಕಿಬ್ಬಿಯಲ್ಲಿ ಸ್ವಲ್ಪ ಹೊತ್ತು ಕುಳಿತು ವಿಶ್ರಮಿಸಿಕೊಂಡು ಮತ್ತೆ ಬೆಟ್ಟವನ್ನೇರಲು ಅಣಿಯಾದೆವು.

ಸಿಪಾಯಿ ಅಬ್ದುಲ್ಲಾ ತನ್ನಿಂದ ನಡೆಯಲ್ಲಿಕ್ಕಾಗುವುದಿಲ್ಲವೆಂದು ಹೇಳಿ ರೈಫಲನ್ನು ಕೆಳಗಿಟ್ಟು ಕುಳಿತುಕೊಂಡ. ಅವನ ಕಾಲಿನಲ್ಲಿ ಬೊಬ್ಬೆಗಳೆದ್ದಿದ್ದವು. ಇತರರ ಕಷ್ಟಗಳನ್ನು ಕಂಡರೆ ನಾಡರನು ಬಹುಬೇಗ ಮರುಕದಿಂದ ಕರಗಿ ಬಿಡುತ್ತಿದ್ದ. ಅಬ್ದುಲ್ಲಾನ ರೈಫಲನ್ನು ನಾಡರನು ತನ್ನ ಹೆಗಲಿಗೆ ನೇತುಹಾಕಿಕೊಂಡು ತನ್ನ ಭಾರವಾದ ಮಷಿನ್ ಗನ್ನನ್ನು ಹೆಗಲಮೇಲೆ ಹೊತ್ತು ಎಲ್ಲರಿಗಿಂತಲೂ ಮುಂದಾಗಿ ಬೆಟ್ಟವನ್ನು ಹತ್ತಲಾರಂಭಿಸಿದ.

ಉಳಿದ ಸೈನಿಕರೆಲ್ಲಾ ಅಬ್ದುಲ್ಲಾನನ್ನು ನಡೆಸಿಕೊಂಡು ನಿಧಾನವಾಗಿ ಬೆಟ್ಟವನ್ನೇರತೊಡಗಿದರು. ನಾಡರನು ಬೆಟ್ಟದ ಮೇಲಿನ ಸಮತಟ್ಟಾದ ಪ್ರದೇಶವನ್ನು ತಲಪಿದಾಗ ಅವನಿಗೆ ಅಚ್ಚರಿಯೊಂದು ಕಾದಿತ್ತು. ಬೆಟ್ಟದ ಇಳಿಜಾರಿನಲ್ಲಿ ಕೇವಲ ನೂರು ಗಜಗಳ ಅಂತರದಲ್ಲಿ ಹುಲ್ಲು ಹೊದೆಸಿದ ದಪ್ಪ ಮಣ್ಣಿನ ಗೋಡೆಗಳ 'ಬಾಷಾ' (ಗುಡಿಸಿಲು)ಗಳಿದ್ದುವು. ಅದು ನಾಗಾ ಬಂಡುಖೋರರ ಶಿಬಿರವಾಗಿತ್ತು. ಶಿಬಿರದ ಮುಂದೆ ಕಾವಲಿದ್ದವನೊಬ್ಬ ನಾಡರನನ್ನು ನೋಡಿ ಒಳಗಿದ್ದವರಿಗೆ ಎಚ್ಚರಿಕೆ ಕೊಡಲು ಮಿಂಚಿನ ವೇಗದಲ್ಲಿ ಓಡಿದ. ಆ ಸಮಯದಲ್ಲಿ ನಾಡರನು ತನ್ನ ಮೇಲಿನ ಅಧಿಕಾರಿಯ ಆದೇಶಗಳಿಗೆ ಕಾದುಕೊಂಡು ಕುಳಿತಿರಲು ಸಮಯವಿರಲಿಲ್ಲ. ಪರಿಸ್ಥಿತಿಯ ತೀವ್ರತೆಯನ್ನು ಮನಗಂಡು ಧೈರ್ಯದಿಂದ ತನಗೆ ಸರಿಕಂಡ ನಿರ್ಧಾರವನ್ನೇ ತೆಗೆದುಕೊಂಡು ಏಕಾಕಿಯಾಗಿ ಪರಿಸ್ಥಿತಿಯನ್ನೆದುರಿಸಿದ.

ಆ ಕಾವಲುಗಾರ 'ಬಾಷಾ'ದೊಳಗೆ ಹೋದ ಕೆಲವೇ ಕ್ಷಣಗಳಲ್ಲಿ ನಾಡರನತ್ತ ಗುಂಡುಗಳು ಹಾರತೊಡಗಿದುವು. ನಾಡರನು ಒಂದು ಕ್ಷಣವನ್ನೂ ವ್ಯರ್ಥಮಾಡದೆ ಪೊದೆಯೊಂದರ ಮರೆಯಲ್ಲಿದ್ದ ತಗ್ಗಿನಲ್ಲಿ ಅಡಗಿ 'ಪೋಚಸ್' ನಲ್ಲಿದ್ದ ಗ್ರೆನೇಡೊಂದನ್ನು ತೆಗೆದುಕೊಂಡು ಅದರ ಪಿನ್ನನ್ನು ಕಿತ್ತು, ಒಂದು ಕ್ಷಣ ಎದ್ದು ನಿಂತು ವಿದ್ರೋಹಿಗಳು ಅಡಗಿದ್ದ 'ಬಾಷಾ' ಗಳತ್ತ ಬೀಸಿ ಎಸೆದು ಮತ್ತೆ ತಗ್ಗಿನಲ್ಲಿ ಅಡಗಿಕೊಂಡ. ಕೆಲವೇ ಕ್ಷಣಗಳಲ್ಲಿ ಭಾರಿ ಆಸ್ಫೋಟನೆಯ ಶಬ್ದ ಕೇಳಿಬಂತು. ನಾಡರನು ಎರಡೂ ಕೈಗಳಿಂದ ಕಿವಿಗಳನ್ನು ಭದ್ರವಾಗಿ ಮುಚ್ಚಿಕೊಂಡ. ಮತ್ತೆ ಹಳ್ಳದಿಂದ ಮೆಲ್ಲನೆ ತಲೆ ಎತ್ತಿ ನೋಡಿದಾಗ ಹತ್ತಾರು ಮಂದಿ ಬಂಡುಖೋರ ನಾಗಾಗಳು ತಾವಿದ್ದ ಸ್ಥಳದಿಂದ ನೂರು ಅಡಿಗಳ ಅಂತರದಲ್ಲಿ ಓಡುತ್ತಿದ್ದಾರೆ. ನಾಡರನು ಕೂಡಲೆ ಮಷಿನ್ ಗನ್ನಿನಿಂದ, ಪಲಾಯನ ಮಾಡುತ್ತಿದ್ದ ವಿದ್ರೋಹಿಗಳತ್ತ ಗುಂಡು ಹಾರಿಸಲಾರಂಭಿಸಿದ. ಓಡುತ್ತಿದ್ದವರಲ್ಲಿ ನಾಲ್ಕು ಮಂದಿ ಸತ್ತುಬಿದ್ದರು. ಅಳಿದುಳಿದ ವಿದ್ರೋಹಿಗಳು ದಿಕ್ಕುಗಾಣದೆ ಗಾಬರಿಯಿಂದ ಸನಿಹದ ಪ್ರಪಾತಕ್ಕೆ ಹಾರಿಕೊಂಡು ಮೃತ್ಯುವನ್ನಪ್ಪಿದರು. ನಮ್ಮ ಕಂಪನಿಯ ಸೈನಿಕರೆಲ್ಲಾ ಬೆಟ್ಟವನ್ನೇರಿ ಮೇಲೆ ಬರುವುದರೊಳಗಾಗಿ ಕೆಲವೇ ನಿಮಿಷಗಳ ಅವಧಿಯಲ್ಲಿ ಈ ಕಾರ್ಯಾಚರಣೆ ತ್ವರಿತಗತಿಯಲ್ಲಿ ನಡೆದುಹೋಯಿತು.

ಶಿಬಿರದ ಆಸುಪಾಸಿನಲ್ಲಿ ಶೋಧನೆ ನಡೆಸಿದಾಗ ಹತ್ತು ಚೀನೀ ಸ್ವಯಂಚಾಲಿತ ರೈಫಲುಗಳು, ಒಂದು ಮಷಿನ್‌ಗನ್, ಎರಡು ಮಾರ್ಟರ್, ವಿಪುಲವಾದ ಮದ್ದುಗುಂಡುಗಳು ಮತ್ತು ನಾಗಾವಿದ್ರೋಹಿಗಳ ಭೂಗತ ಅಂಗಸಂಸ್ಥೆಯಾದ 'ನಾಗಾ ಫೆಡರಲ್ ಹೋಂ ಗಾರ್ಡ್'ಗೆ ಸಂಬಂಧಿಸಿದ ಮುಖ್ಯ ಕಾಗದ ಪತ್ರಗಳು ದೊರೆತವು. ಇದರೊಂದಿಗೆ ಲೂಟಿ ಹೊಡೆದಿದ್ದ ಮೂವತ್ತು ಹೊಸ ಬೆಡ್‌ಶೀಟುಗಳು, ಟಾರ್ಚ್ ಲೈಟುಗಳು ದೊರೆತವು. ವೈರ್‌ಲೆಸ್ ಉಪಕರಣದ ಮೂಲಕ ಈ ಕಾರ್ಯಾರಣೆಯ ಸುದ್ದಿಯನ್ನು ಇಂಫಾಲಾ ಮತ್ತು ಉಕ್ರೂಲ್

ಗಳಲ್ಲಿದ್ದ ನಮ್ಮ ಕಚೇರಿಗಳಿಗೆ ತಲಪಿಸಿದೆವು.

ಅನಿರೀಕ್ಷಿತವಾಗಿ ಲಭಿಸಿದ ಆ ಗೆಲುವಿನ ಸಮಯದಲ್ಲಿಯೂ ದೃಢಕಾಯ ನಾಗಾ ವಿದ್ರೋಹಿಗಳ ಶವಗಳನ್ನು ಕಂಡು ಈ ನಾಗಾ ಯುವಶಕ್ತಿ ದೇಶಕ್ಕೆ ಲಭ್ಯವಾಗದೆ ವ್ಯರ್ಥವಾಗಿ ನಾಶವಾಗುತ್ತಿರುವುದಲ್ಲಾ ಎಂಬ ವಿಷಾದದ ಛಾಯೆ ಒಂದುಕ್ಷಣ ಮನದಲ್ಲಿ ಮೂಡಿ ಮರೆಯಾಯಿತು.

ವಿದ್ರೋಹಿಗಳಿಂದ ದೊರೆತ ಮದ್ದು ಗುಂಡು ಆಯುಧಗಳು ಮತ್ತು ಇತರೆ ಸಾಮಾನು ಸರಂಜಾಮುಗಳನ್ನು ಹೊತ್ತು ಸಾಗುವುದೇ ಪ್ರಯಾಸವೆನಿಸಿತು. ಸೂರ್ಯ ಕಂತುವುದಕ್ಕೆ ಮೊದಲು ಅಡವಿಯ ಸೆರಗಿನಲ್ಲಿದ್ದ 'ಕಿಜೆತುಮ' ಎಂಬ ಚಿಕ್ಕ ಗ್ರಾಮವನ್ನು ತಲಪಿದೆವು. ಅಲ್ಲಿಯ 'ಗಾವ್‌ನಬುರ' (ಯಜಮಾನ) ಆಯಾಸದಿಂದ ಕಂಗಾಲಾಗಿದ್ದ ನಮಗೆಲ್ಲಾ ದೊಡ್ಡ ಗಡಿಗೆಯಲ್ಲಿ 'ಮಧು' (ಅಕ್ಕಿಯ ಮದ್ಯ) ವನ್ನು ತಂದು ಕೊಟ್ಟ. ಹಸಿವು ಬಾಯಾರಿಕೆಗಳಿಂದ ಕಂಗೆಟ್ಟಿದ್ದ ನಾವು ಅಭ್ಯಾಸವಿಲ್ಲದಿದ್ದರೂ ಅವರು ನೀಡಿದ 'ಮಧು'ವನ್ನು ಕುಡಿದೆವು. ಅನ್ನದ ಗಂಜಿಯಂತೆ ತೆಳುವಾಗಿದ್ದ ಆ ಮದ್ಯವನ್ನು ಕುಡಿದ ಸ್ವಲ್ಪ ಹೊತ್ತಿಗೆ ದಣಿವೆಲ್ಲಾ ತೀರಿದಂತಾಗಿ ಮೈ ಮನ ಗಳು ಉಲ್ಲಾಸದಿಂದ ಗಾಳಿಯಲ್ಲಿ ತೇಲಾಡುತ್ತಿರು ವಂತೆ ಭಾಸವಾಯಿತು.

ಕೆಲವು ಮಂದಿ ನಾಗಾಗಳು ಎರಡು ದೊಡ್ಡ ಗಡಿಗೆಗಳನ್ನು ತಂದರು. ಗಡಿಗೆಗಳಲ್ಲಿ ಬಿದಿರಕ್ಕಿ ಯಿತ್ತು. ಎರಡು ಹಳ್ಳಗಳನ್ನು ತೋಡಿದರು. ಗಡಿಗೆಗಳನ್ನು ಹಳ್ಳಗಳಲ್ಲಿಳಿಸಿದರು. ಗಡಿಗೆಗಳ ಕಂಠ ಪೂರ್ತಿ ನೀರು ತುಂಬಿ ಮೇಲೆ ಕಾಡು ಮರಗಳ ಅಗಲವಾದ ಎಲೆಗಳನ್ನಿರಿಸಿ ಮುಚ್ಚಳ ವಿಟ್ಟು ಭದ್ರವಾಗಿ ಮಣ್ಣು ಮುಚ್ಚಿ ಮೇಲೊಂದು ಕಲ್ಲುಹೇರಿದರು. ಅವರ ಈ ಕಾರ್ಯ ದಿಂದ ನಮಗೆಲ್ಲಾ ವಿಸ್ಮಯವಾಯಿತು. ಒಂದು ಗಂಟೆಯನಂತರ ಹಳ್ಳದಿಂದ ಗಡಿಗೆಗಳನ್ನು ಹೊರಗೆ ತೆಗೆದು ಮುಚ್ಚಳವನ್ನು ಸರಿಸಿದಾಗ ನಮಗೆಲ್ಲಾ ಅಚ್ಚರಿಯಾಯಿತು. ಗಡಿಗೆಗಳ ತುಂಬ ಬಿದಿರಕ್ಕಿಯ ಅನ್ನ ಮಲ್ಲಿಗೆಯ ಹೂವಿನಂತೆ ಬಿರಿದು ಸುವಾಸನೆ ಸೂಸುತ್ತಿತ್ತು. ಮಣಿಪುರದ ಪ್ರದೇಶದಲ್ಲಿ ಅಲ್ಲಲ್ಲಿ ಭೂಮಿ ಬಿರಿದು ಹೊಗೆ ಯಾಡುವುದು ಸಾಮಾನ್ಯ.

ಬಾಳೆಯ ಎಲೆಗಳ ಮೇಲೆ ಬಿಸಿ ಅನ್ನವನ್ನು ಬಡಿಸಿ ಮೇಲೆ ಬೊಗಸೆಯಷ್ಟು ಹೆಜ್ಜೇನನ್ನು ಸುರಿದರು. ಜೊತೆಗೆ ಕಾಡು ಬಾಳೆಯ ಹಣ್ಣು ಗಳು ಬೇರೆ. ನಾಗಾಗಳು ಹೆಚ್ಚಾಗಿ ಗೋಮಾಂಸದ ಸಾರನ್ನು ಉಪಯೋಗಿಸುತ್ತಿದ್ದುದರಿಂದಾಗಿ ನಾವೆಲ್ಲಾ ಅವರು ನೀಡಬಯಸಿದ ಸಾರನ್ನು ನಿರಾಕರಿಸಿದೆವು. ಅಂದಿನ ಭೋಜನದ ವಿಶೇಷ ರುಚಿಯನ್ನು ನಾವು ನಮ್ಮ ಜೀವಿತದಲ್ಲಿಯೇ ಕಂಡಿರಲಿಲ್ಲ. ನಾವು ವಿದ್ರೋಹಿಗಳ ಶಿಬಿರದಿಂದ ಹೊತ್ತು ತಂದಿದ್ದ ಬೆಡ್‌ಶೀಟು ಮತ್ತು ಟಾರ್ಚ್ ಲೈಟುಗಳನ್ನು ನಮ್ಮ ಹಸಿವು ಹಿಂಗಿಸಿದ ಆ ಗ್ರಾಮವಾಸಿಗಳಿಗೆ ಹಂಚಿದೆವು.

ಗಾವ್‌ನಬುರ ಒದಗಿಸಿದ ಮಾರ್ಗದರ್ಶಿಯ ನೆರವಿನಿಂದ ರಾತ್ರಿ ಹತ್ತು ಗಂಟೆಗೆ ಉಕ್ರೂಲಿನ ನಮ್ಮ ಶಿಬಿರವನ್ನು ತಲಪಿದೆವು. ಈ ಸೈನಿಕ ಕಾರ್ಯಾಚರಣೆಯಲ್ಲಿ ವೈಯಕ್ತಿಕವಾಗಿ ಪ್ರದರ್ಶಿಸಿದ ಧೈರ್ಯ ಸಾಹಸಗಳಿಗಾಗಿ ಪೊನ್ನು ಪಿಳ್ಳೆ ನಾಡರನಿಗೆ ರಾಷ್ಟ್ರಾಧ್ಯಕ್ಷರಿಂದ 'ಸೇನಾಪದಕ' ದೊರಕಿತು.

ಅಂದು ಹೆಗಲ ಮೇಲೆ ಗನ್ನು ಹೊತ್ತು ಹೆಮ್ಮೆಯಿಂದ ಬೀಗಿ ನಡೆಯುತ್ತಿದ್ದ ನಾಡರ್‌-ನೊಂದಿಗೆ ಸ್ವಲ್ಪ ಹೊತ್ತಿಗೆ ಮೊದಲು ಕಂಡ ಮಾಜಿ ಸೈನಿಕ ನಾಡರ್‌ನನ್ನು ಹೋಲಿಸಿ ನೋಡಿ ದಾಗ ನನ್ನ ಮನಸ್ಸು ಸಹಜವಾಗಿಯೆ ಭಾರ ವಾಯಿತು. ✡



ತೆಂಗಿನಕಾಯಿ ಏಡಿ' ಎಂಬ ಹೆಸರು ಕೇಳಿ ಮರದ ಮೇಲಿನ ತೆಂಗಿನಕಾಯಿಗೂ ನೀರಿನಲ್ಲಿನ ಏಡಿಗೂ ಇದೆಲ್ಲಿಯ ಸಂಬಂಧ ಎಂದು ನಿಮಗೆ ಆಶ್ಚರ್ಯವಾಗಿರಬೇಕಲ್ಲವೆ? ಅದೇ ಈ ಏಡಿಯ ವೈಶಿಷ್ಟ್ಯ. ದಶಪದಿ ಗುಂಪಿನ ಸಿನೋಬಿಟಿಡೇ ಎಂಬ ಏಡಿಗಳ ವಂಶಕ್ಕೆ ಸೇರಿದ ಇದರ ವೈಜ್ಞಾನಿಕ ಹೆಸರು ಬಿರ್ಗಸ್ ಲ್ಯಾಟ್ರೊ. ಸುಮಾರು ಒಂದು ಸಾವಿರ ವಿವಿಧ ಜಾತಿಯ ಏಡಿಗಳಿದ್ದು ಸಾಮಾನ್ಯವಾಗಿ ಅವು ಜಲವಾಸಿಗಳು. ಆದರೆ ಈ ಏಡಿ ವಾಸಿಸುವುದು ನೆಲದ ಮೇಲೆ. ಸುಮಾರು ಎರಡು ಅಡಿಗಳಷ್ಟು ಉದ್ದವಾಗಿ ಬೆಳೆಯಬಲ್ಲ ಈ ಏಡಿ ಹಿಂದೂಮಹಾಸಾಗರ ಮತ್ತು ಶಾಂತಿ ಸಾಗರಗಳಲ್ಲಿನ ತೆಂಗಿನ ಮರಗಳಿಂದಾವೃತವಾದ ಹವಳ ದ್ವೀಪಗಳಲ್ಲಿ ಮಾತ್ರ ಕಂಡು ಬರುತ್ತದೆ. ತೆಂಗಿನಕಾಯಿ ತಿರುಳು ಈ

# ತೆಂಗಿನಕಾಯಿ ಏಡಿ

ಪ್ರಾಣಿಯ ಬಹುಪ್ರಿಯ ಆಹಾರ. ತನ್ನ ದೊಡ್ಡ ಇಕ್ಕಳದಂತಹ ಕೊಂಡಿಯಿಂದ ತೆಂಗಿನಕಾಯಿಯ ಕಣ್ಣಿನ ಭಾಗಕ್ಕೆ ಬಲವಾಗಿ ಹೊಡೆದು ತೂತು ಮಾಡಿ, ಈ ತೂತಿನ ಮುಖಾಂತರ ಇನ್ನೊಂದು ಜೊತೆ ಚಿಕ್ಕ ಕೊಂಡಿಯಿಂದ ತಿರುಳನ್ನು ಹೊರ ತೆಗೆದು ಭಕ್ಷಿಸುತ್ತದೆ. ತೆಂಗಿನಕಾಯಿಯ ಸಿಪ್ಪೆಗಳನ್ನು ತನ್ನ ಬಿಲದಲ್ಲಿ ಹರಡಿ ಅತೀವ ಶಾಖ ಮತ್ತು ಮರಳ ಕೊರೆತಗಳಿಂದ ತನ್ನನ್ನು ರಕ್ಷಿಸಿ ಕೊಳ್ಳುತ್ತದೆ. ಕೆಲವೊಮ್ಮೆ ತೆಂಗಿನಚಿಪ್ಪಿನಲ್ಲಿ ತನ್ನ ದೇಹವನ್ನು ಮುದುಗಿಸಿಕೊಂಡು, ಚಿಪ್ಪನ್ನು ಹೊತ್ತು ಓಡಾಡುತ್ತ ವೈರಿಗಳಿಂದ ರಕ್ಷಣೆ ಪಡೆಯುತ್ತದೆ. ಈ ಏಡಿ ತನ್ನ ಬಹುಮುಖ್ಯ ಅವಶ್ಯಕತೆಗಳಿಗಾಗಿ ತೆಂಗಿನಕಾಯಿಯನ್ನು ಅವಲಂಬಿಸಿರುವುದರಿಂದ 'ತೆಂಗಿನಕಾಯಿ ಏಡಿ' ಎಂದೇ ಕರೆಯಲ್ಪಟ್ಟಿದೆ. ಮೇಲಾಗಿ ಈ ಏಡಿಯು ತೆಂಗಿನಕಾಯಿಗೋಸ್ಕರ ಮರಗಳನ್ನು ಹತ್ತುವುದರಲ್ಲಿಯೂ ಪ್ರವೀಣ. ಇದರಿಂದಾಗಿ ಇದು 'ದರೋಡೆಖೋರ ಏಡಿ' ಎಂದೂ ಪ್ರಸಿದ್ಧ.

ಭಾರತದಲ್ಲಿ ಈ ಏಡಿಯು ಅಂದಮಾನ್ ಮತ್ತು ನಿಕೋಬಾರ್ ದ್ವೀಪಸಮೂಹಗಳಲ್ಲಿ ಕಂಡುಬರುತ್ತದೆ. ಇದರ ಉದರ ಭಾಗದಲ್ಲಿ ಎಣ್ಣೆಯ ಅಂಶ ತುಂಬಿದ್ದು ರುಚಿಕರವಾದ ಆಹಾರವಾಗಿರುವುದರಿಂದ ಇಲ್ಲಿಯ ಜನತೆಯಲ್ಲಿ ಇದು ಬಹು ಬೇಡಿಕೆಯ ಪ್ರಾಣಿ. ಈ ವಿಶಿಷ್ಟ ಏಡಿಯ ಬಗ್ಗೆ ಹಲವಾರು ಕತೆಗಳು ಇಲ್ಲಿಯ ಜನರಲ್ಲಿ ಪ್ರಚಲಿತ. ಇದರ ಉದರದ ತಳಭಾಗವು ಮೃದುವಾಗಿದ್ದು, ಮೇಲ್ಭಾಗವು ಚಿಕ್ಕ ಚಿಕ್ಕ ಗಡುಸಾದ ಚಿಪ್ಪುಗಳಿಂದ ಕೂಡಿದೆ. ನೆಲದ ಮೇಲೆ ವಾಸಿಸುವುದರಿಂದ ಗಾಳಿಯ ಉಸಿರಾಟಕ್ಕೆ ಅನುಕೂಲವಾಗುವ ಹಾಗೆ ಇದರ ಕಿವಿರುಗಳಲ್ಲಿ ಬಹು ಬದಲಾವಣೆಗಳುಂಟಾಗಿದೆ. ಮೊಟ್ಟೆಯಿಡುವ ಕಾಲದಲ್ಲಿ ಹುಣ್ಣಿಮೆ ಮತ್ತು ಅಮವಾಸ್ಯೆ ಸಮಯದಲ್ಲಿ ಗಂಡು-ಹೆಣ್ಣು ಏಡಿಗಳು ಜೊತೆಗೂಡಿ ಸಮುದ್ರತೀರಕ್ಕೆ ವಲಸೆ ಹೋಗುತ್ತವೆ. ಹೆಣ್ಣು ಏಡಿಯು ತನ್ನ ಉದರದ ಕೆಳಭಾಗದಲ್ಲಿ ಮೊಟ್ಟೆಗಳನ್ನು ಹೊತ್ತು ರಕ್ಷಣೆ ಕೊಡುತ್ತದೆ ಮೊಟ್ಟೆಯೊಡೆದು, ಮರಿ ಕೆಲವು ಸಮಯ ನೀರಿನಲ್ಲಿ ಕಳೆದು ಪೂರ್ಣ ಏಡಿಯಾಗಿ ರೂಪಾಂತರಗೊಂಡ ಮೇಲೆ ನೆಲದ ಮೇಲೆ ವಾಸಿಸಲು ಹೋಗುತ್ತದೆ. ಆಹಾರಕ್ಕಾಗಿ ಈ ಏಡಿಯನ್ನು ಹಿಡಿಯಲಾಗುತ್ತಿರುವುದರಿಂದ ಇತ್ತೀಚೆಗೆ ಇದು ಬಹು ಅಪರೂಪದ ಪ್ರಾಣಿಯಾಗಿದೆ. ಇದನ್ನು ಗಮನಿಸಿದ ಭಾರತ ಸರಕಾರ ಈ ಏಡಿಯನ್ನು ರಕ್ಷಿಸಲ್ಪಟ್ಟ ವನ್ಯಜೀವಿಗಳ ಗುಂಪಿಗೆ ಸೇರಿಸಿ ಇದರ ಸಂತತಿಯ ರಕ್ಷಣೆಯ ಹೊಣೆ ಹೊತ್ತಿದೆ.

**ಕೆ. ಆರ್. ದಿನೇಶ**

# ಮಾತು ಮತ್ತು ಭಾಷೆ
## ಇವೆರಡರಲ್ಲಿರುವ ಮೂಲಭೂತ ವ್ಯತ್ಯಾಸ

ಶಂ. ಬಾ. ಜೋಶಿ

**ಮಾತು** (Speech); **ಭಾಷೆ** (Language). ಮಾತು ವೈಯಕ್ತಿಕ; ಭಾಷೆ ಸಾಮಾಜಿಕ; **ಸಂಕಲ್ಪನೆ** (Idea) ಮತ್ತು **ಧಾರಣೆ** (Concept) ಇವೆರಡರಲ್ಲೂ ಇದೇ ಬಗೆಯ ಅಂತರವು ಉಂಟು.

**ವ್ಯಕ್ತಿ** = ಮಾತು; **ಸಮಾಜ** = ಭಾಷೆ. **ವ್ಯಕ್ತಿ** = Functional ಪಾತಳಿ; ಸಮಾಜ = Structural ಪಾತಳಿ. **ವ್ಯಕ್ತಿ** = ದಿಕ್ಕಾಲದ = **ಸ್ಥಲ/ಕಾಲದ** (Space – Time) **ಪಾತಳಿ**-**ಯವನು; ಸಮಾಜ;** ವ್ಯಕ್ತಿ ನಿರಪೇಕ್ಷ = ಸ್ಥಲ **ಕಾಲದ ಪಾತಳಿಯ ಮೇಲ್ಗಡೆಯಲ್ಲಿ** ಇರ **ಬಲ್ಲನು**.

ವ್ಯಕ್ತಿಗಳಿಂದ ಭಾಷೆಯಾಗಿರುವುದು ನಿಜವಿದ್ದರೂ, ಒಬ್ಬ ವ್ಯಕ್ತಿಯೇ ಭಾಷೆಗೆ ಕಾರಣ ನಲ್ಲ. ವ್ಯಕ್ತಿಯು ಸಮಾಜದ ಅಂಗ; **'ವ್ಯಕ್ತಿ'** **ಎಂದರೆ ಇಡೀ ಸಮಾಜವಲ್ಲ**. 'ಸಮಾಜ' = **ಸಮಷ್ಟಿ** ಎಲ್ಲಿ ಇದೆ? ಮಾನವ ಭಾಷೆ, ಮತ್ತು ಸಮಾಜ ಬೇರೆಯಲ್ಲ. **ಭಾಷೆಯು ಮೂಲಕ— ಸಮಾಜವು, ಮಾನವನಲ್ಲಿ ಭಾಷೆಯೊಡನೆ ಅಮೂರ್ತ ರೀತಿಯಲ್ಲಿ ಹುದುಗಿರುತ್ತದೆ.**

**ವ್ಯಕ್ತಿ: ಮಾತು, ಮತ್ತು ಸಮಾಜ: ಸಮಷ್ಟಿ: ಭಾಷೆ** ಇವೆರಡರೊಳಗಿನ ಎಳೆದಾಟವು ಬಹು ಪುರಾತನ ಕಾಲದಿಂದಲೇ ಪ್ರಾರಂಭವಾಗಿದೆ: **ವ್ಯಕ್ತಿಯೇ ಸಮಾಜ ಆಗುವಾಗ**, ಶಾಂಕರ ಸಮಾಜ, ಮಾಧ್ವ ಸಮಾಜ, ಬಸವ ಸಮಾಜ, ಮಹಮ್ಮದೀಯ ಸಮಾಜ...ಇಂತಹ ಅನಾಹುತಕ್ಕೆ ಆಮಂತ್ರಣವು ದೊರೆಯುತ್ತದೆ!

೨

ಪಾಶ್ಚಾತ್ಯ ಪರಿಭಾಷೆಯೊಳಗಿನ 'Social Contract' (ಕರಾರು ಮಾಡಿ) **ಸಮಾಜ ಆಗಿದೆ** ಎಂಬ ಗ್ರಹಿಕೆಯು, ಆ ಸಂಸ್ಕೃತಿಯಲ್ಲಿ 'ವ್ಯಕ್ತಿ' ಮತ್ತು ಸಮಾಜ ಇವೆರಡರೊಳಗಿನ ಅಂತರವು ಉಳಿದಿದ್ದಿಲ್ಲ ಎಂಬ ಸಂಗತಿಯನ್ನು ನಿದರ್ಶನಕ್ಕೆ ತಂದು ಕೊಡುತ್ತದೆ.

**ಸಮಾಜ** ಮತ್ತು **ಭಾಷೆ** ಇವು ಕರಾರು **ಮಾಡಿ** (Contract) ಅಸ್ತಿತ್ವದಲ್ಲಿ ಬಂದಿಲ್ಲ; ಬರಲು ಸಾಧ್ಯವಿಲ್ಲ. ವ್ಯಕ್ತಿಯು **ಜೀವಿತದ ಪಾತಳಿಯ ಮೇಲಿದೆ. ಸಮಾಜವು** ವ್ಯಕ್ತಿ ನಿರಪೇಕ್ಷ: ಸ್ಥಳ-**ಕಾಲದ ಪಾತಳಿಯ ಮೇಲ್ಗಡೆಯಲ್ಲಿ** ಇದೆ. **ಇದುವೆ ಮಾನವ ಜೀವನದ ಪಾತಳಿ**. ಇಂದು-ಪ್ರಚಲಿತ ಋಗ್ವೇದ ಸಂಕಲನ ಕಾಲದಿಂದಲೇ— **ಜೀವನ** ಮತ್ತು **ಜೀವಿತ**, ಸಮಾಜ ಮತ್ತು ವ್ಯಕ್ತಿ ಇವೆರಡರೊಳಗಿನ ಅಂತರವು ಲುಪ್ತ,

ವಾಗಿದೆ. ಸಮುದಾಯ: ವ್ರಾತ, ಇದನ್ನು ಸಮಾಜ ಎಂದು ನಂಬಿಸುವ ಪ್ರಯತ್ನವಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ 'ವ್ರಾತ'ದ ನಾಯಕ 'ವ್ರಾತ್ಯ!' 'ವ್ರಾತ್ಯ' ಪದಕ್ಕೆ 'ಸಂಸ್ಕಾರಹೀನ ವ್ಯಕ್ತಿ,' ತುಂಟ, ಅವಿವೇಕಿ ಎಂಬ ಅರ್ಥಗಳು ಉಂಟು!

೩

ಈ ಸಂದರ್ಭದಲ್ಲಿ, ನನಗೆ, ನೂತನ ಯುಗ ಪ್ರವರ್ತಕ ಸಂಶೋಧಕ; ಡಾ. ಐನ್‌ಸ್ಟೈನರ ನೆನಪು ಬರುತ್ತದೆ. ಇವರು ಪೂರ್ವ ವಯಸ್ಸಿನಿಂದಲೇ 'Extra personal sphere of reality' ಯಲ್ಲಿ–ವ್ಯಕ್ತಿನಿರಪೇಕ್ಷ: ಸ್ಥಳ/ಕಾಲದ ಆಚೆಗಿನ ಪಾತಳಿಯ ಮೇಲೆ ವಾಸ್ತವ: ಸತ್ಯವು (reality) ಉಂಟು, ಎಂದು ನಂಬಿದ್ದರು.

ವ್ಯಕ್ತಿ ಸಾಪೇಕ್ಷ: ಸ್ಥಳ/ಕಾಲದ ಪಾತಳಿಯು, ಈ ಪಾತಳಿಯ ಮೇಲಣ ಆಗುಹೋಗುಗಳು ನಿತ್ಯವಾಗಿ ಅಂತರ್‌ವಿಸಂಗತ, ಪ್ರೇರಣಾ ದ್ವಂದ್ವಾತ್ಮಕವೇ ಇರುವುದುಂಟು, ಈ ಪಾತಳಿಯು ಜನನ/ಮರಣ ಚಕ್ರದ ಭೌತ ದೃಶ್ಯಗಳ (Phenomena) ಪಾತಳಿ. ಇಲ್ಲಿ ಪೂರ್ವ/ಪಶ್ಚಿಮ ಭೇದವು ಉಳಿಯುವುದಿಲ್ಲ! ವೃತ್ತಾಕೃತಿಯಾಗಿರುವುದರಿಂದ ಪೂರ್ವವು ಪಶ್ಚಿಮವಾಗಬಹುದು; ಪಶ್ಚಿಮವು ಪೂರ್ವವಾಗಬಹುದು! ಈ ಅಂತರ್‌ವಿಸಂಗತ ಪಾತಳಿಯ ಮೇಲೆ, ಅಣುವಿಸರಣದಲ್ಲಿ ಕಾಣುವ ಪರಮಾಣುಗಳು ಸ್ಥೈರ, ಸ್ವಚ್ಛಂದ, ಚಲನವಲನವುಳ್ಳವು ಆಗಿವೆ. ಇದನ್ನು 'ಕ್ವಾಂಟಂ' ಸಿದ್ಧಾಂತ ಎಂದು ಹೆಸರಿಸಲಾಗಿದೆ. ಐನ್‌ಸ್ಟೈನರು 'ಕ್ವಾಂಟಂ' ಸಿದ್ಧಾಂತವನ್ನು ಅ–ಸುಂದರ (Ugly) ಎಂದು ನಿಷೇಧಿಸಿದ್ದಾರೆ.

ಡಾ. ನೀಲ್ಸ್ ಬೊಹ್ರರು, ಐನ್‌ಸ್ಟೈನರನ್ನು, 'ಕ್ವಾಂಟಂ' ಸಿದ್ಧಾಂತವನ್ನು ಒಪ್ಪಲು ಕೇಳಿಕೊಂಡರು. ಆದರೆ 'ಅಂತರ್‌ವಿಸಂಗತಿಯನ್ನು' ಅಭಾವಾತ್ಮಕ[ಂ]ವನ್ನು 'ಉಂಟು' ಎಂದು ನಂಬಲು ಐನ್‌ಸ್ಟೈನರು ಸಿದ್ಧರಿದ್ದಿಲ್ಲ, ಬ್ರುಸೆಲ್ಸಿನಲ್ಲಿ ಆದ ಸಭೆಯಲ್ಲಿ, ಡಾ. ನೀಲ್ಸ್ ಬೊಹ್ರ್ ಪ್ರಶ್ನಿಸಿದಾಗ, ಐನ್‌ಸ್ಟೈನರು ಸುಮ್ಮನಾಗಿ ಮೌನವನ್ನೇ ಸ್ವೀಕರಿಸಿದ್ದಾಯಿತು. ಇದರಿಂದಾಗಿ, ಡಾ. ನೀಲ್ಸ್ ಬೋಹ್ರ್ ವಿಜಯಿಯಾದರು ಎಂದು ಬಿ. ಬಿ. ಸಿ. ವರದಿಗಾರ ಪ್ರಕಟಿಸಿದ್ದಾಯ್ತು. ಶ್ರೀ ಜಿ. ಟಿ. ನಾರಾಯಣ ರಾಯರು, ಕಸ್ತೂರಿಯ ಕಳೆದ ಅಗಸ್ಟ ಸಂಚಿಕೆಯಲ್ಲಿ, ಡಾ. ನೀಲ್ಸ್ ಬೊಹ್ರರ ಬಗೆಗೆ ಬರೆದಿದ್ದಾರೆ.

ಡಾ, ಐನ್‌ಸ್ಟೈನರು, ಈ ಬಾಳಿನಲ್ಲಿ ನಿಯಮ, ವ್ಯವಸ್ಥೆಯಿದೆ ಎಂಬ ನಿಷ್ಠೆಯುವರು. 'ಅ–ನಿಯಮವೇ ನಿಯಮ,' ಪ್ಯಾಥಾಗೊರಾಸ್ ಪಂಥೀಯ 'Law of Contraries' ಇದನ್ನು ಒಪ್ಪಲು ಹೇಗೆ ಸಾಧ್ಯ? ಅ–ನಿಯಮ ಅ–ವ್ಯವಸ್ಥೆಯೇ 'ಸ್ಥಾಯೀ' ಆಗುವಾಗ ಆ ಸೈನ್ಸ್: ಶಾಸ್ತ್ರವು ತನ್ನ ಹೆಸರಿಗೆ ಎರವಾಗುತ್ತದೆ.

ಒಪ್ಪಿದ್ದಲ್ಲಿ, ಡಾ. ಐನ್‌ಸ್ಟೈನರು 'ಸಾಪೇಕ್ಷ ಸಿದ್ಧಾಂತ'ಕ್ಕೇ ಎರಡು ಬಗೆದಂತೆ ಆಗುತ್ತಿತ್ತು. ನ್ಯೂಟನ್ನನ 'ಸ್ಥಲದ' ಸಿದ್ಧಾಂತವನ್ನು (Validity)ಪ್ರಶ್ನಿಸಿದ ಐನ್‌ಸ್ಟೈನರು ಸ್ಥಲ/ಕಾಲವನ್ನು ಅಭಾವಾತ್ಮಕವೆಂದು ಕಂಡುಕೊಂಡಿದ್ದರು. ಸ್ಥಲ/ಕಾಲದ ಸಂದರ್ಭದ ಜೀವಿತದ ಪಾತಳಿಯು ಉಂಟು. ಈ ಜೀವಿತದ ಪಾತಳಿಯ ಅಸ್ತಿತ್ವಕ್ಕೆ, ಜೀವನದ ಪಾತಳಿಯ ಅಪೇಕ್ಷೆಯಿದೆ.

ಈ ಬಗೆಯಲ್ಲಿ ಜೀವಿತದ–Functional–ಅಸ್ತಿತ್ವದ ಪಾತಳಿ ಮತ್ತು ಜೀವನದ–Structural ಪಾತಳಿ ಎಂದರೆ ಮಾತು ಮತ್ತು ಭಾಷೆ ಇವೆರಡರ ಭೂಮಿಕೆಗಳೂ ಡಾ. ಐನ್‌ಸ್ಟೈನರ ಸಿದ್ಧಾಂತದಿಂದ ಸ್ಪಷ್ಟತೆಯನ್ನು ಪಡೆಯುತ್ತವೆ. ✡



# ಝೈರೆ: ಆಫ್ರಿಕದ ಹೃದಯ

ಟಿ. ಎಂ. ಸುಬ್ಬರಾಯ

ಹಲವು ಆಶ್ಚರ್ಯಗಳನ್ನೂ ಕೆಲವು ವಿರೋಧಾಭಾಸಗಳನ್ನೂ ಹೊಂದಿರುವ ರಾಷ್ಟ್ರ ಝೈರೆ. ಹಿಂದೆ ಕಟಂಗಾವಾದಿಗಳ ಸಶಸ್ತ್ರ ಕ್ರಾಂತಿಯಿಂದಾಗಿ ಈ ದೇಶ ಹೊರಗೆ ಸುದ್ದಿ ಮಾಡಿತು. ಸರಿಸುಮಾರು ಭಾರತದಷ್ಟೇ ವಿಸ್ತಾರದ ಈ ನಾಡಿನ ಜನ ಎತ್ತರದ ಕಾಯ ಹೊಂದಿದವರು, ಅತಿ ತೆಳ್ಳಗಿನ ಶರೀರದವರು. ಇಲ್ಲಿಯ ಒಟ್ಟು ಜನಸಂಖ್ಯೆ ಎರಡು ಕೋಟಿ ಐವತ್ತು ಲಕ್ಷ.

ಆಫ್ರಿಕ ಖಂಡದ ನಡುವೆ ಇರುವ ದೇಶ ಝೈರೆ. ಇದರ ಮಧ್ಯದಲ್ಲಿ ಸಮಭಾಜಕ ವೃತ್ತ ಹಾದುಹೋಗುತ್ತದೆ. ಕಾಂಗೋ ನದೀ ಝೈರೆಯ ಜೀವನಾಡಿ; ಈಜಿಪ್ಟಿಗೆ ನೈಲ್ ಇದ್ದಂತೆ ಝೈರೆಗೆ ಕಾಂಗೋ. ಈ ನದಿಯಿಂದಾಗಿಯೇ ಈ ದೇಶ 'ಕಾಂಗೋ' ಎಂದು ಕರೆಯಲ್ಪಡುತ್ತಿತ್ತು. ಈಗ ನದಿ ಹಾಗೂ ದೇಶ ಎರಡೂ ಹೆಸರನ್ನು ಬದಲಾಯಿಸಿಕೊಂಡಿವೆ. ಎರಡೂ 'ಝೈರೇ'ಗಳೇ.

ಝೈರೆಯಲ್ಲಿ ವರ್ಷದ ಎಲ್ಲಾ ಕಾಲದಲ್ಲಿಯೂ ಮಳೆ. ಆದ ಕಾರಣ ಸಮೃದ್ಧ ಸಸ್ಯವರ್ಗ; ರಬ್ಬರ್ ಧೂಪದ ಮರಗಳದೇ ಪ್ರಾಶಸ್ತ್ಯ. ಇವೇ ಝೈರೆಯ ಅತಿ ಮುಖ್ಯ ನಿರ್ಯಾತ ಸಾಮಗ್ರಿಗಳು. ಭತ್ತ, ಮೆಕ್ಕೆ ಜೋಳ ಇಲ್ಲಿಯ ಪ್ರಮುಖ ಆಹಾರ ವಸ್ತುಗಳು. ಹತ್ತಿ, ಕಾಫಿ, ಕೋಕೋ ನಿರ್ಯಾತವಾಗುವ ಇನ್ನಿತರ ವಸ್ತುಗಳು. ಈ ಎಲ್ಲಾ ಬಗೆಯ ಬೆಳೆಗಳಿಗೆ ಕಾರಣ ಕಾಂಗೋ ನದೀ ತೀರದ ಫಲಭರಿತ ಮೆಕ್ಕಲು ಮಣ್ಣು.

ಝೈರೆ ಖನಿಜಗಳ ಆಗರ. ಝೈರೆಯ ದಕ್ಷಿಣ ಹಾಗೂ ಪೂರ್ವದ ಉನ್ನತ ಪ್ರಸ್ಥಭೂಮಿಗಳಲ್ಲಿ ಲಭ್ಯವಾಗುವ ಖನಿಜಗಳು ಹಲವು. ಯುರೇನಿಯಂ, ವಜ್ರ, ಬಂಗಾರ, ಪ್ಲಾಟಿನಂ, ತಾಮ್ರ, ತವರ, ಕೋಬಾಲ್ಟ್, ಕಲ್ಲಿದ್ದಲು, ಇತ್ಯಾದಿ. ಝೈರೆಯಂತೆ ಪ್ರಪಂಚದ ಇನ್ನಾವ ದೇಶವೂ ಈ ಬಗೆಯ ವಿಪುಲ ಖನಿಜ ಸಂಪ-

ತ್ತನ್ನು ಹೊಂದಿಲ್ಲ, ಪ್ರಪಂಚದಲ್ಲಿಯ ಒಟ್ಟು ಯುರೇನಿಯಂನಲ್ಲಿ ಅರ್ಧದಷ್ಟು ಝೈರೆಯಲ್ಲಿಯೇ ದೊರೆಯುತ್ತದೆ! ಎರಡನೇ ಮಹಾಯುದ್ಧ ಮುಗಿಯುವ ವೇಳೆಗೆ ತಯಾರಿಸಲಾದ ಪರಮಾಣು ಬಾಂಬಿಗೆ ಯುರೇನಿಯಂ ಬಂದದ್ದು ಝೈರೆಯಿಂದ! ಪ್ರಪಂಚದಲ್ಲಿ ಲಭ್ಯವಾಗುವ ಖನಿಜಗಳಲ್ಲಿ ಝೈರೆ ದೇಶ ನೀಡುವ ಶೇಕಡಾವಾರು ಖನಿಜ ಪ್ರಮಾಣ ಇಂತಿದೆ: ಕೋಬಾಲ್ಟ್ ೭೫%; ವಜ್ರ ೭೦%; ತವರ ೯%; ತಾಮ್ರ ೭%. ಈ ಎಲ್ಲಾ ಬಗೆಯ ಖನಿಜಗಳ ನಿರ್ಯಾತದಿಂದಾಗಿ ಝೈರೆಗೆ ಲಭ್ಯವಾಗುವ ವಾರ್ಷಿಕ ಆದಾಯ ೩,೭೫,೦೦,೦೦,೦೦೦ ರೂಪಾಯಿಗಳು! ಇದರ ಒಟ್ಟು ವಿಸ್ತೀರ್ಣ ೨೩,೪೪,೧೧೬ ಚದುರ ಕಿಲೋಮೀಟರ್‌ಗಳು. ಆಶ್ಚರ್ಯಕರ ವಿಷಯವೆಂದರೆ ಈ ದೊಡ್ಡ ರಾಷ್ಟ್ರಕ್ಕೆ ಕೇವಲ ೨೫ ಮೈಲಿಗಳಷ್ಟು (ಸುಮಾರು ೪೦ ಕಿಲೋಮೀಟರ್) ಮಾತ್ರ ಕರಾವಳಿ ಇದೆ.

"ಬನಾನ" ಈ ದೇಶದ ಒಂದೇ ಒಂದು ಬಂದರು. ಅದು ತೀರಾ ಪುಟ್ಟ ಬಂದರು. ೪,೬೪೦ ಕಿಲೋಮೀಟರ್ ದೂರ ಪ್ರವಹಿಸಿದ ಕಾಂಗೋ ಅಟ್ಲಾಂಟಿಕ್ ಸಾಗರ ಸೇರುವ ನದಿ ಮುಖಜ ಭೂಮಿಯಲ್ಲಿದೆ. ಬನಾನ ಪುಟ್ಟ ಬಂದರಾದರೂ ಬನಾನದ ಪ್ರಾಶಸ್ತ್ಯವೇನೂ ಕಡಿಮೆಯದಲ್ಲ. ಗುಲಾಮಗಿರಿ ಇಲ್ಲಿ ಪ್ರಚಲಿತವಿದ್ದ ಕಾಲದಿಂದಲೂ ಈ ಬಂದರಿಗೆ ಪ್ರಾಮುಖ್ಯವಿದೆ. ಗುಲಾಮರನ್ನು ಸಂಗ್ರಹಿಸಿತಂದು ಇಲ್ಲಿ ಶೇಖರಿಸುವುದಕ್ಕಾಗಿಯೇ ಕ್ರಿಸ್ತಶಕ ೧೫೦೦ ರಲ್ಲಿ ಪೋರ್ಚುಗೀಸರು ಈ ಬಂದರನ್ನು ಬಳಸಿಕೊಂಡಿದ್ದರು. ಬನಾನದಿಂದ ಸುಮಾರು ೯೫ ಕಿಲೋಮೀಟರ್‌ಗಳ ಮೇಲ್ಭಾಗದಲ್ಲಿ ಕಾಂಗೋದ ಮೊದಲಿನ ರಾಜಧಾನಿ 'ಬೊಮಾ' ಇದೆ. ಹಸಿರು ಪರ್ವತಗಳಿಂದಾವೃತವಾದ ಬೊಮಾದ ಮುಖ್ಯ ಆಕರ್ಷಣೆ ಎಂದರೆ, ಇಲ್ಲಿರುವ ನಾಲ್ಕು ಸಾವಿರ ವರುಷಗಳಷ್ಟು ಪ್ರಾಚೀನವಾದ ಬೃಹದಾಕಾರದ ಬಾವೋಬಾಬ್ ವೃಕ್ಷ. ಸುಮಾರು ಅರವತ್ತು ಅಡಿ ಸುತ್ತಳತೆಯುಳ್ಳ ಈ ಮರದ ಕಾಂಡದ ಮೇಲೆ ಆಫ್ರಿಕದ ಪ್ರಸಿದ್ಧ ಅನ್ವೇಷಕ ಹೆಚ್. ಎಂ. ಸ್ಟ್ಯಾನ್ಲೆ ತನ್ನ ಹೆಸರನ್ನು ಕೆತ್ತಿದ್ದಾನೆ. ಸಣ್ಣ ಕೊಂಬೆಗಳಲ್ಲಿ ಬಿಡುವ, ಆಯಾತಾಕಾರದ ಇದರ ಹಣ್ಣುಗಳು ಶುಂಠಿಯ ರುಚಿ ಹೊಂದಿವೆ. ಈ ಹಣ್ಣುಗಳೆಂದರೆ ಇಲ್ಲಿಯ ಕೋತಿಗಳಿಗೆ ಬಲು ಪ್ರೀತಿ. ಅಂತೆಯೇ ಇದನ್ನು 'ಮಂಕೀ ಬ್ರೆಡ್ ಟ್ರೀ' ಎಂದೂ ಕರೆಯಲಾಗುತ್ತಿದೆ. ಇದರ ಹಣ್ಣಿನ ರಸಕ್ಕೆ ಜ್ವರವನ್ನು ಕಡಿಮೆ ಮಾಡುವ ಗುಣವಿದೆಯಂತೆ. ಇಲ್ಲಿಯ ಕೂಲಿಕಾರರು ಈ ಮರದ ಎಲೆಗಳನ್ನು ಪುಡಿ ಮಾಡಿ, ಆಹಾರದೊಂದಿಗೆ ಬೆರೆಸಿ ತಿನ್ನುತ್ತಾರಂತೆ. ಕಾರಣ ಇದಕ್ಕೆ ಹೆಚ್ಚು ಬೆವರು ಹರಿಯುವುದನ್ನು ನಿಲ್ಲಿಸುವ ಗುಣ ಉಂಟಂತೆ.

ಬೊಮಾದಿಂದ ಐವತ್ತೈದು ಕಿಲೋಮೀಟರ್ ಪೂರ್ವಕ್ಕೆ, ಸಮುದ್ರದಿಂದ ೧೧೨ ಕಿಲೋಮೀಟರ್ ದೂರದಲ್ಲಿದೆ ಮತಾದಿ. ಇದೂ ಒಂದು ರೇವು ಪಟ್ಟಣ. ಸೌಂದರ್ಯ ತಾಣವಾದ ಮತಾದಿಗೆ ಸಮುದ್ರದಿಂದ ಕಾಂಗೋ ನದಿಯ ಮೂಲಕ ಸಣ್ಣ ಪುಟ್ಟ ಹಡಗುಗಳಷ್ಟೇ ಬರಬಲ್ಲವು. ಮತಾದಿಯಿಂದ, ಝೈರೆಯ ರಾಜಧಾನಿ ಕಿನ್‌ಷಾಸದ ತನಕ ಕಾಂಗೋ ನದಿ ಹಲವು ಜಲಪಾತಗಳನ್ನುಂಟುಮಾಡಿದೆ. ಅವುಗಳಲ್ಲಿ ಕೆಲವಂತೂ ಮುನ್ನೂರ ಎಂಬತ್ತಾಲ್ಕು ಅಡಿಗಳಿಗಿಂತ ಹೆಚ್ಚು ಎತ್ತರದಿಂದ ಧುಮುಕುತ್ತವೆ.

ಕಿನ್‌ಷಾಸದ ಮೊದಲಿನ ಹೆಸರು ಲಿಯೋ-ಪೋಲ್ಡ್‌ವಿಲೇ. ನದಿಯ ದಂಡೆಯ ಮೇಲಿರುವ ಕಿನ್‌ಷಾಸವನ್ನು ೧೯೨೫ರಲ್ಲಿ ಬೆಲ್ಜಿಯನ್ನರು ತಮ್ಮ ವಸಾಹತಿನ ಪ್ರಧಾನ ಕೇಂದ್ರವನ್ನಾಗಿ ಆರಿಸಿಕೊಂಡಿದ್ದರು. ಇಂದು ಕಿನ್‌ಷಾಸ ಸದಾ ಗದ್ದಲದಿಂದ ಕೂಡಿರುವ ದೊಡ್ಡ ನಗರ. ಸುಮಾರು ಹತ್ತು ಲಕ್ಷ ಜನಸಂಖ್ಯೆ ಇರುವ ಈ ನಗರದಲ್ಲಿ ಅತ್ಯಾಧುನಿಕ ಮಾದರಿಯ ಕಟ್ಟಡಗಳು ತಲೆ ಎತ್ತಿವೆ; ಆಕರ್ಷಕ ಹೆದ್ದಾರಿ

ಗಳು ನಿರ್ಮಾಣವಾಗಿವೆ; ರೈಲ್ವೆ ನಿಲ್ದಾಣ ಸಿದ್ಧವಾಗಿ ಪಯಣಿಗರಿಂದ ತುಂಬಿದೆ.

ಎಲಿಜಬೆತ್‌ವಿಲ್ಲೆ ಎಂದು ಕರೆಯಲ್ಪಡುತ್ತಿದ್ದ ಸುಮಾರು ಐದು ಲಕ್ಷ ಜನಸಂಖ್ಯೆ ಇರುವ ಲುಂಬಾಬಸಿ ಝೈರೆ ದೇಶದ ಎರಡನೇ ದೊಡ್ಡ ನಗರ.

ನೀಗ್ರೋ ಬುಡಕಟ್ಟಿಗೆ ಸೇರಿದ ಹಲವು ಗುಡ್ಡಗಾಡು ಜನಾಂಗಗಳು ಝೈರೆಯ ವಿಶೇಷ. ಇವರ ಆಚಾರ, ವಿಚಾರ, ಸಂಸ್ಕಾರ, ಸಂಸ್ಕೃತಿ ಎಲ್ಲವೂ ಆಧುನಿಕತೆಗಿಂತ ತೀರಾ ಭಿನ್ನವಾದುದು. ತಮ್ಮದೇ ಆದ ದೈವ, ಪೂಜೆ, ಪುರಾಣ, ಕತೆ ಬದುಕು ಇವರದು.

ಈ ಮೂಲನಿವಾಸಿಗಳಲ್ಲಿ ಎಷ್ಟೋ ಮಂದಿಯನ್ನು ಕ್ರೈಸ್ತ ಮಿಷನರಿಗಳು ಮತಾಂತರಗೊಳಿಸಿದ್ದಾರೆ. ಈಗ ಝೈರೆಯಲ್ಲಿ ಐವತ್ತೈದು ಲಕ್ಷ ಕ್ಯಾಥೋಲಿಕ್ಕರೂ, ಹದಿನೈದು ಲಕ್ಷ ಪ್ರೊಟೆಸ್ಟೆಂಟರೂ ಇದ್ದಾರೆ.

೧೪೮೨ರಲ್ಲಿ ಮೊದಲ ಬಾರಿಗೆ ಪೋರ್ಚುಗೀಸರು ಝೈರೆಯ ನೆಲದ ಮೇಲೆ ಕಾಲಿಟ್ಟರು. ಸಂಪದ್ಭರಿತ ನಾಡಾದ ಝೈರೆ ಅವರ ಪಾಲಿಗೆ ಸ್ವರ್ಗವಾಯಿತು. ಝೈರೆಯ ನೈಸರ್ಗಿಕ ಸಂಪತ್ತಿಗಿಂತ ಅಧಿಕವಾಗಿ ಅವರ ಲಕ್ಷ್ಯ ಗುಲಾಮರನ್ನು ಕೊಂಡು ವಿದೇಶಗಳಿಗೆ ರವಾನಿಸುವುದರಲ್ಲಿತ್ತು. ಸುಮಾರು ಹತ್ತು ಲಕ್ಷ ಗುಲಾಮರನ್ನು ಪೋರ್ಚುಗೀಸರು ವಿದೇಶಗಳಿಗೆ ಮಾರಿದರು.

೧೮೮೫ರಲ್ಲಿ ಈ ರಾಜ್ಯ ಬೆಲ್ಜಿಯಂನ ರಾಜ



ಎರಡನೇ ಲಿಯೋಪೋಲ್ಡ್‌ನಿಗೆ ಹಸ್ತಾಂತರಿಸಲ್ಪಟ್ಟಿತು. ಲಿಯೋಪೋಲ್ಡ್‌ನಂಥ ಸ್ವಾರ್ಥಿ ಹಾಗೂ ದಬ್ಬಾಳಿಕೆಯ ಪ್ರವೃತ್ತಿ ಹೊಂದಿದ ಬೇರೆ ಯಾವ ರಾಜನನ್ನೂ ಝೈರೆಯ ಜನ ಕಂಡಿಲ್ಲ. ಆತ ಅಮಾನುಷ ವರ್ತನೆಯವನು. ಕರುಣೆ ಎನ್ನುವ ಶಬ್ದವೇ ಆತನಿಗೆ ತಿಳಿದಿರಲಿಲ್ಲ. ರಬ್ಬರ್ ಹಾಗೂ ದಂತದ ನಿಗದಿಗೊಳಿಸಲ್ಪಟ್ಟ ಕೋಟಾವನ್ನು ಸಲ್ಲಿಸದಿದ್ದರೆ ಕೆಲಸದವರನ್ನಾತ ಚಿತ್ರಹಿಂಸೆಗೆ ಗುರಿಪಡಿಸುತ್ತಿದ್ದ ಇಲ್ಲವೇ ಕೊಲ್ಲಿಸುತ್ತಿದ್ದ.

ಅಧಿಕೃತ ಅಂದಾಜಿನ ಪ್ರಕಾರ ೧೯೦೦ ರಲ್ಲಿ ಝೈರೆಯ ಜನಸಂಖ್ಯೆ ಎರಡು ಕೋಟಿಯಷ್ಟಿತ್ತು. ೧೯೬೦ರ ಜೂನ್ ೩೦ ರಂದು ಬೆಲ್ಜಿಯನ್ನರು ಇಲ್ಲಿಂದ ಹೊರಟು ಹೋದಾಗ, ಇಲ್ಲಿನ ಜನಸಂಖ್ಯೆ ಒಂದೂವರೆ ಕೋಟಿ ಇಪ್ಪತ್ತು ಸಾವಿರ. ಅರ್ಥಾತ್ ಲಿಯೋಪೋಲ್ಡ್‌ನ ಅಧಿಕಾರಾವಧಿಯಲ್ಲಿ ಎಂಬತ್ತು ಲಕ್ಷ ಮಂದಿ ಜೀವ ತೆತ್ತರು.

ಲಿಯೋಪೋಲ್ಡ್‌ನ ಅವಸಾನದ ನಂತರ ಝೈರೆಯ ಆರ್ಥಿಕ ಸ್ಥಿತಿಗತಿಯನ್ನು ಸುಧಾರಿಸಲು ಬೆಲ್ಜಿಯಂ ಸರಕಾರ ತೀವ್ರವಾಗಿ ಪ್ರಯತ್ನಿಸಿತೆ ಹೊರತು ನಾಗರಿಕ ಹಕ್ಕುಗಳನ್ನು ಕೊಡಲೂ ಶಿಕ್ಷಣವನ್ನು ನೀಡಲೂ ಅದು ಇಚ್ಛಿಸಲಿಲ್ಲ. ಆದರೆ, ಸುಪ್ತವಾಗಿ ಅಡಗಿದ್ದ ಸ್ವಾತಂತ್ರ್ಯದ ಬಯಕೆಯನ್ನು ಹತ್ತಿಕ್ಕಲು ಬೆಲ್ಜಿಯನ್ನರಿಂದ ಸಾಧ್ಯವಾಗಲಿಲ್ಲ. ಹಾಗಾಗಿ, ಝೈರೆ ೧೯೬೦ರ ಜೂನ್ ೩೦ ರಂದು ಸ್ವಾತಂತ್ರ್ಯವನ್ನು ಪಡೆಯಿತು.

ಝೈರೆಗೆ ಸೇರಿದ ಶಾಬಾ ಪ್ರದೇಶವನ್ನು ಅಂಗೋಲಾ ಪ್ರಚೋದಿತ ಕ್ರಾಂತಿವಾದಿಗಳು ಆಕ್ರಮಿಸಿದಾಗ ರಶಿಯ ಹಾಗೂ ಕ್ಯೂಬಾ ದೇಶಗಳು ಅದರ ಕಾರ್ಯಕ್ಕೆ ತಮ್ಮ ನೇರ ಬೆಂಬಲವನ್ನು ವ್ಯಕ್ತಪಡಿಸಿದವು. ರಶಿಯ ಹಾಗೂ ಕ್ಯೂಬಾಗಳ ಈ ಕ್ರಮವನ್ನು ಅಧ್ಯಕ್ಷ ಮೋಬೊಟೋ ಸೆಸೆ ಸೇಕೋ ತೀವ್ರವಾಗಿ ಖಂಡಿಸಿದರು. ಜೊತೆಗೆ, ಝೈರೆಯ ಸ್ವಾತಂತ್ರ್ಯಕ್ಕೆ ಹಾಗೂ ತನ್ನ ನೆಲವನ್ನು ತಾನುಳಿಸಿಕೊಳ್ಳಲು ನೆರವು ನೀಡುವಂತೆ ಮೊರಕ್ಕೊ ದೊರೆಯನ್ನೂ ಅವರು ಪ್ರಾರ್ಥಿಸಿದರು. ಮೊರಕ್ಕೋದ ದೊರೆ ಹುಸೇನ್ ತಮ್ಮ ಸೇನೆಯನ್ನು ಝೈರೆಗೆ ಕಳಿಸಿ ಸಕ್ರಿಯ ಸಹಾಯ ನೀಡಿದರು. ಮೊರಕ್ಕೋದೊಂದಿಗೆ ಝೈರೆಗೆ ಅಮೇರಿಕ, ಫ್ರಾನ್ಸ್ ಹಾಗೂ ಚೀನಗಳ ಬೆಂಬಲ ಕೂಡಾ ದೊರೆತವು. ಈಗ, ಸಧ್ಯಕ್ಕೆ ಝೈರೆ ಹಾಗೂ ಮೊರಕ್ಕೋ ಸೇನೆಗಳ ಸಾಮೂಹಿಕ ಮತ್ತು ಒಗ್ಗಟ್ಟಿನ ಕಾರ್ಯಕ್ರಮಗಳಿಂದ ಕ್ರಾಂತಿವಾದಿಗಳ ಸೊಲ್ಲು ಅಡಗಿದೆ. ಶಾಬಾದವನ್ನು ಮರಳಿ ಪಡೆಯುವುದರೊಂದಿಗೆ ಹಲವಾರು ಬದಲಾವಣೆ ಹಾಗೂ ತೊಂದರೆಗಳನ್ನು ಝೈರೆ ಎದುರಿಸಬೇಕಾಯಿತು. ಸ್ವಾತಂತ್ರ್ಯದ ಹೊಸದರಲ್ಲೇ ಝೈರೆಯ ಪ್ರಧಾನಿ ಲುಮುಂಬಾರವರ ಕೊಲೆಯಾಯಿತು. ಝೈರೆ ಅನುಭವಿಸಿದ ಅತಿ ದಾರುಣ ಘಟನೆ ಇದು.

ಸ್ವಾತಂತ್ರ್ಯಾನಂತರ ಝೈರೆ ಹಲವು ಸಮಸ್ಯೆಗಳನ್ನು ಎದುರಿಸುತ್ತಿದೆ. ಕೆಲವೊಮ್ಮೆ ಆಂತರಿಕ ಯುದ್ಧಗಳೂ ಸಂಭವಿಸಿದ್ದುಂಟು. ಆದರೆ, ಝೈರೆಯ ರಾಷ್ಟ್ರೀಯವಾದಿಗಳು ಇವುಗಳನ್ನೆಲ್ಲಾ ಧೈರ್ಯದಿಂದ ಎದುರಿಸುತ್ತಿದ್ದಾರೆ. ☸



# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅನಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಪ್ರಾಯಶಃ
(ಅ) ಮುದುಕ (ಆ) ಯುವಕ (ಇ) ಬಹಳಮಟ್ಟಿಗೆ (ಈ) ಪ್ರೀತಿಯುಳ್ಳ

೨. ಪ್ರಾಯಶ್ಚಿತ್ತ
(ಅ) ಮಾಡಿದ ತಪ್ಪಿಗೆ ಪರಿಹಾರ ಕ್ರಮ (ಆ) ಚಂಚಲ ಮನಸ್ಸು (ಇ) ಹೆಚ್ಚು ಮಟ್ಟಿಗೆ (ಈ) ಮುದುಕನನ್ನು ತರುಣನನ್ನಾಗಿಸುವುದು

೩. ನಿಃಸ್ಪೃಹ
(ಅ) ಮೇಲಾಟ (ಆ) ಸ್ವಾರ್ಥವಿಲ್ಲದ (ಇ) ಮುಟ್ಟಬಾರದ (ಈ) ಮಡಿವಂತ

೪. ಹಿಸಾಬು
(ಅ) ಜಟಕಾ ನಡೆಸುವವ (ಆ) ಕಜ್ಜಿ (ಇ) ಹಂಚುವುದು (ಈ) ಲೆಕ್ಕ

೫. ತೊಂಡ
(ಅ) ನಿದ್ದೆ (ಆ) ಕಳ್ಳ (ಇ) ಕೊಕ್ಕು (ಈ) ಸೇವಕ

೬. ಕರಾಮತಿ
(ಅ) ಕೈಚಳಕ (ಆ) ಕಾರ್ಯ (ಇ) ಕ್ಷೌರ (ಈ) ಸಾಮೂಹಿಕ ಕೊಲೆ

೭. ಕರಿನೀರು
(ಅ) ಗ್ರಹಣದ ನಂತರದ ಸ್ನಾನ (ಆ) ಗಡಿಪಾರಿನ ಶಿಕ್ಷೆ (ಇ) ಕಾರಖಾನೆಗಳ ಕೊಳೆನೀರು (ಈ) ಆನೆ ಸೊಂಡಿಲಿಂದ ತೂರುವ ನೀರು

೮. ಪ್ರೀತ
(ಅ) ಇಲ್ಲದ್ದು (ಆ) ಹೆಣ (ಇ) ಮೆಚ್ಚಿದವ (ಈ) ತುಂಬಿ ಬಂದ

೯. ದೂರೀಕರಿಸು
(ಅ) ವ್ಯಾಜ್ಯ ಹೂಡು (ಆ) ಪ್ರವಾಸ ಮಾಡು (ಇ) ಹುಲ್ಲು ತೆಗೆ (ಈ) ದೂರ ಮಾಡು

೧೦. ದೈವಜ್ಞ
(ಅ) ಆಕಾಶಯಾನಿ (ಆ) ದೇವತೆಗಳ ಭಕ್ತ (ಇ) ಜ್ಯೋತಿಷಿ (ಈ) ಧರ್ಮಿಷ್ಠ

೧೧. ಹೋಬಳಿ
(ಅ) ಸಾಮೀಪ್ಯ (ಆ) ತಾಲೂಕಿನ ಒಂದು ವಿಭಾಗ (ಇ) ಪುರೋಹಿತನ ಕೆಲಸ (ಈ) ಅಲುಗಾಟ

೧೨. ಸೂಡಿ
(ಅ) ಹುಲ್ಲಿನ ಕಟ್ಟು (ಆ) ಹೆರಿಗೆ (ಇ) ಕೊಲೆ (ಈ) ರಜೆ



೧. **ಪ್ರಾಯಶಃ** (ಇ) ಬಹಳ ಮಟ್ಟಿಗೆ, ಸಾಮಾನ್ಯವಾಗಿ, ಹೆಚ್ಚಾಗಿ, ಬಹುಶಃ, ಉದಾ:— ಪ್ರಾಯಶಃ ರಾತ್ರಿಯಲ್ಲಿ ಉಬ್ಬಸ ಉಲ್ಬಣಿಸುತ್ತದೆ. [ಸಂ.]

೨. **ಪ್ರಾಯಶ್ಚಿತ್ತ** (ಅ) ತನ್ನ ತಪ್ಪಿಗೆ ಅಥವಾ ಪಾಪಕ್ಕೆ ಮಾಡುವ ಪರಿಹಾರ ಕರ್ಮ; ಶಿಕ್ಷೆ. ಉದಾ:— ಇದು ಪ್ರಾಯಶ್ಚಿತ್ತವಿಲ್ಲದ ಪಾಪ. [ಸಂ.]

೩. **ನಿಃಸ್ಪೃಹ** (ಅ) ಸ್ವಾರ್ಥವಿಲ್ಲದ, ಪ್ರಯೋಜನ ಅಥವಾ ಲಾಭ ಬಯಸದ; ಪಕ್ಷಪಾತವಿಲ್ಲದ. ಉದಾ:— ನಿಃಸ್ಪೃಹನಾದ ಮನುಷ್ಯ [ಸಂ. ನಿಃ = ಇಲ್ಲ + ಸ್ಪೃಹಾ = ಅಪೇಕ್ಷೆ]

೪. **ಹಿಸಾಬು** (ಈ) ಲೆಕ್ಕ, ಗಣನೆ, ಕೊಡುಕೊಳ್ಳುವುದರ ಲೆಕ್ಕಾಚಾರ, ಲೆಕ್ಕಪತ್ರ. ಉದಾ:— ಹಿಸಾಬು ತಾಳೆಗೂಡಲಿಲ್ಲ. [ಅರಬ್ಬಿ–ಹಿಸಾಬ್]

೫. **ತೊಂಡ** (ಈ) ಸೇವಕ, ಆಳು; ಭಕ್ತ. ಉದಾ:— ಸಜ್ಜನರ ತೊಂಡ. [ದೇಶ್ಯ]

೬. **ಕರಾಮತಿ** (ಅ) ಕೈಚಳಕ, ಕೈವಾಡ; ಅದ್ಭುತ ಕಾರ್ಯ. ಉದಾ:—ಇದೊಂದು ರಾಜಕೀಯ ಕರಾಮತಿ. [ಅರಬ್ಬಿ–ಕರಾಮತ್]

೭. **ಕರಿನೀರು** (ಅ) ದೇಶದಿಂದ ಗಡಿಪಾರು ಮಾಡುವುದು, ದ್ವೀಪಾಂತರದಲ್ಲಿ ಸೆರೆಯಿಡುವ ಶಿಕ್ಷೆ. ಉದಾ:— ಕೊಲೆಗಡಕರಿಗೆ ಕರಿನೀರಿನ ಶಿಕ್ಷೆ ಆಯಿತು. [ಕರಿ + ನೀರು = ಕಾಲಾಪಾನಿ (ಹಿಂದಿ) = ಸಮುದ್ರ]

೮. **ಪ್ರೀತ** (ಇ) ಮೆಚ್ಚಿದವ, ಸಂತೋಷಗೊಂಡವ, ಸಂತುಷ್ಟ. ಉದಾ:— ದೇವರು ಪ್ರೀತನಾದ [ಸಂ.]

೯. **ದೂರೀಕರಿಸು** (ಈ) ದೂರಮಾಡು, ದೂರದಲ್ಲಿಡು. ಉದಾ:— ಹೊಗಳುಭಟ್ಟರನ್ನು ದೂರೀಕರಿಸಿದನು. [ಸಂ. ದೂರೀಕೃ = ದೂರಮಾಡು]

೧೦. **ದೈವಜ್ಞ** (ಇ) ಜ್ಯೋತಿಷಿ, ಭವಿಷ್ಯ ಹೇಳುವವ, ಆ ವೃತ್ತಿಮಾಡುತ್ತಿದ್ದ ಒಂದು ಜಾತಿ. ಉದಾ:—ದೈವಜ್ಞರಿಗೂ ಸಾವು ತಪ್ಪದು. [ಸಂ. ದೈವ = ದೇವತೆ + ಜ್ಞ = ಬಲ್ಲವ]

೧೧. **ಹೋಬಳಿ** (ಅ) ತಾಲೂಕಿನ ಒಂದು ವಿಭಾಗ, ನಾಡು [ಹಳೆಗನ್ನಡ–ಪೋಬಳಿ]

೧೨. **ಸೂಡಿ** (ಅ) ಹುಲ್ಲಿನ ಕಟ್ಟು, ಕಂತೆ ಅಥವಾ ಹೊರೆ. ವೀಳೆಯದೆಲೆಯ ಕಟ್ಟು; ಪೂರಕೆ. ಉದಾ:— ನೂರು ಸೂಡಿ ಹುಲ್ಲು. [ದೇಶ್ಯ–ಸೂಡು = ಕಟ್ಟು]

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬–೮ | ಸರಿಯಿದ್ದರೆ | ... ಸಾಧಾರಣ |
| ೮–೧೦ | ,, | ... ಉತ್ತಮ |
| ೧೧–೧೨ | ,, | ... ಅತ್ಯುತ್ತಮ |



# ಮೃದಂಗ ವಿದ್ವಾನ್ ಸಿ. ವಿ. ರಾಮನ್

ರಾಮನ್ ಪರಿಣಾಮದಿಂದ ಪ್ರಪಂಚಪ್ರಸಿದ್ಧರಾದ ಸರ್ ಚಂದ್ರಶೇಖರ ವೆಂಕಟರಾಮನ್ (೧೮೮೮–೧೯೭೦) ಶಬ್ದ ಪ್ರಪಂಚದಲ್ಲಿಯೂ ಮೂಲಭೂತ ಸಂಶೋಧನೆ ನಡೆಸಿದ್ದರೆಂಬ ಸಂಗತಿ ಅಷ್ಟೇನೂ ಬೆಳಕಿಗೆ ಬಂದಿರುವುದಿಲ್ಲ. ೧೯೩೦ರಲ್ಲಿ ಇವರು ನೊಬೆಲ್ ಪ್ರಶಸ್ತಿ ಸ್ವೀಕರಿಸಿದಾಗ ಮಾಡಿದ ಭಾಷಣ ಇವರ ಚಿಂತನ ಪ್ರಕ್ರಿಯೆಯನ್ನು ಸಮರ್ಥವಾಗಿ ಪ್ರತಿಬಿಂಬಿಸುತ್ತದೆ: "ನೈಸರ್ಗಿಕ ವಿದ್ಯಮಾನವೊಂದರ ಅಧ್ಯಯನ ಹೊಸತೊಂದು ಜ್ಞಾನದ ಶಾಖೆ ಕವಲೊಡೆಯುವಿಕೆಗೆ ಆಗುವುದನ್ನು ವಿಜ್ಞಾನೇತಿಹಾಸದಲ್ಲಿ ಪದೇ ಪದೇ ಕಾಣುತ್ತೇವೆ. ಬಾನ ಬೆಳಗಿನ ಬಣ್ಣ ಕುರಿತ ಅಧ್ಯಯನ ಇದಕ್ಕೊಂದು ನಿದರ್ಶನ... ಇನ್ನಷ್ಟು ಎದ್ದು ತೋರುವ ಆದರೆ ಹೆಚ್ಚು ಮಂದಿ ಗಮನಿಸಿರದ ವಿದ್ಯಮಾನವೆಂದರೆ ಕಡಲ ನೀರು ಬಿತ್ತರಿಸುವ ಬಣ್ಣ."

ಪ್ರತಿಯೊಂದು ನೈಸರ್ಗಿಕ ವಿದ್ಯಮಾನದಲ್ಲಿಯೂ ಇವರಿಗೆ ಅಸಾಧಾರಣ ಆಸಕ್ತಿ. ಇದು ಬೆಳಕಿನ ಜ್ಞಾತಿಸಂಬಂಧಿ ಶಬ್ದದತ್ತವೂ ಸಹಜವಾಗಿ ಹರಿಯಿತು. ಕಣ್ಣಿಗೆ ಬೆಳಕು ಹೇಗೋ ಕಿವಿಗೆ ಶಬ್ದ ಹಾಗೆ. ಅಲ್ಲಿ ಪ್ರಿಯ–ಅಪ್ರಿಯ ವರ್ಣಗಳಿದ್ದರೆ ಇಲ್ಲಿ ಹಿತ–ಅಹಿತ ನಾದಗಳಿವೆ. ಅಲ್ಲಿ ಮೂಲ ವರ್ಣಗಳ ವಿವಿಧ ಒಂದಿಕೆಗಳಿಂದ (blends) ಅಸಂಖ್ಯ ಛಾಯೆಗಳು ಲಕಲಕಿಸಿದರೆ ಇಲ್ಲಿ ಮೂಲ ನಾದಗಳ ವಿವಿಧ ಮೇಳನಗಳಿಂದ ಅಸಂಖ್ಯ ಧಾಟಿಗಳು ನಿನದಿಸುತ್ತವೆ. ವರ್ಣಗಳು ಎಷ್ಟೋ ಛಾಯೆಗಳು ಅಷ್ಟು. ಅಂತೆಯೇ ನಾದಗಳು ಎಷ್ಟೋ ಧಾಟಿಗಳು ಅಷ್ಟು. ಆದರೆ ಗುಣಧರ್ಮಗಳಲ್ಲಿ ಬೆಳಕು ಬೇರೆ. ಶಬ್ದ ಬೇರೆ.

ಜಿ. ಟಿ. ನಾರಾಯಣರಾವ್

ಶಬ್ದದ ಹಿತ ನಾದಭಾಗಕ್ಕೆ ಸುನಾದವೆಂದು ಹೆಸರು. ಇದೇ ಸಂಗೀತದ ಮೂಲ. ಹೀಗೆ ಸಂಗೀತವೆಂಬುದು ಶಬ್ದಪ್ರಪಂಚದ ಒಂದು ನಿರ್ದಿಷ್ಟ ಖಂಡ. ಇದರ ವಿಜ್ಞಾನ ವೃತ್ತಾಂತವೇನು? ಕಂಪನದಿಂದ ಶಬ್ದ ಉಂಟಾಗುತ್ತದೆ. ಇದರಲ್ಲಿ ನಮ್ಮ ಕಿವಿಯ ರಚನೆ ಅನುಸರಿಸಿ ಎರಡು ಬಗೆಗಳು ಏರ್ಪಡುತ್ತವೆ: ಗಲಭೆ, ಸುನಾದ. ಕ್ರಮರಹಿತ ಕಂಪನಗಳ ಅಸಂಗತ

ಕಲಸೇ ಗಲಭೆ. ಇದು ಪರಿಷೆಯ ಜನಜಂಗುಳಿಯ ಅಲೆತದಂತೆ. ಕ್ರಮೀಕೃತ ಕಂಪನಗಳ ಸಂಗತ ಮೇಳನವೇ ಸುನಾದ. ಇದು ಸಿಪಾಯಿಗಳ ಕವಾಯತು ನಡಿಗೆಯಂತೆ.

ರಾಮನ್ ಸುನಾದದತ್ತ ಆಕರ್ಷಿತರಾದರು. ಇದರ ಹಿನ್ನೆಲೆಯಲ್ಲಿ ಮೂರು ಮುಖ್ಯ ಕಾರಣಗಳನ್ನು ಗುರುತಿಸಬಹುದು:

ಆನುವಂಶಿಕ—ಇವರ ತಂದೆ ತಾಯಿ ಸಂಗೀತ ಪ್ರೇಮಿಗಳು.

ಪರಿಸರಾತ್ಮಕ—ಇವರು ಹುಟ್ಟಿ ಬೆಳೆದು ಕಲಿತು ಪ್ರೌಢರಾದದ್ದು ತಮಿಳು ಮತ್ತು ತೆಲಗು ನಾಡುಗಳ ವರ್ಣಮಯ ಸಂಗೀತ ಪರಿಸರದಲ್ಲಿ.

ಪ್ರೇರಣಾತ್ಮಕ—ಆಗ ಇವರಿನ್ನೂ ಕಾಲೇಜ್ ವಿದ್ಯಾರ್ಥಿ. ತಂದೆ ಮಗನಿಗೆ ಬರೆದ ಕಾಗದದಲ್ಲಿ ಈತ ಭಾರತೀಯ ಸಂಗೀತದ ಸ್ವರಗ್ರಾಮವನ್ನು ವೈಜ್ಞಾನಿಕವಾಗಿ ಅಭ್ಯಸಿಸಬೇಕೆಂದು ಸೂಚಿಸಿದರು. ಷಡ್ಜದಿಂದ ಮೇಲಿನ (ತಾರ) ಷಡ್ಜದವರೆಗಿನ ಸಪ್ತಸ್ವರ ಸಮೂಹವೇ ಸ್ವರಗ್ರಾಮ. ಇಲ್ಲೊಂದು ಕ್ರಮವಿದೆ. ಕ್ರಮದ ತಳದಲ್ಲಿ ವಿಜ್ಞಾನವಿದೆ. ಈ ವಿಜ್ಞಾನವನ್ನು ರಾಮನ್ ಅನ್ವೇಷಿಸಬೇಕೆಂಬುದು ತಂದೆಯ ಅಪೇಕ್ಷೆ.

ಇವರ ಸಂಗೀತ ಪ್ರೇಮವನ್ನು ಬದುಕಿನ ಒರೆಗಲ್ಲಿಗೆ ತೀಡಿ ಪರೀಕ್ಷಿಸುವ ಸನ್ನಿವೇಶ ಶೀಘ್ರದಲ್ಲೇ ಒದಗಿಬಂದಿತು. ಆದಾಗ ತಾನೇ ಇವರು ಕಲ್ಕತ್ತದಲ್ಲಿ ವೃತ್ತಿ ಹಿಡಿದಿದ್ದರು (೧೯೦೭). ತಮ್ಮ ಬಾಳಸಂಗಾತಿ ಅರಸಿ ವಧೂ ಪರೀಕ್ಷೆಗೆಂದು ತವರೂರಿಗೆ ಹೋದರು. ಲೋಕಸುಂದರಿ ಆಗ 'ರಾಮ ನೀ ಸಮಾನಮೆವರೋ' ಎಂಬ ತ್ಯಾಗರಾಜ ಕೃತಿಯನ್ನು ವೀಣೆಯಲ್ಲಿ ನುಡಿಸುತ್ತಿದ್ದರಂತೆ! ಈ ವಿವಾಹ ನೆರವೇರಿ ನೂತನ ದಂಪತಿಗಳು ಕಲ್ಕತ್ತದಲ್ಲಿ ಬಿಡಾರ ಹೂಡಿದರು. ಅಲ್ಲಿಯ ಇಗರ್ಜಿಯಲ್ಲಿ ಪ್ರತಿ ಆದಿತ್ಯವಾರ ಸೇರುತ್ತಿದ್ದ ಪ್ರಾರ್ಥನಾ ಸಭೆಗೆ ಹಾಜರಾಗುವುದು ಇವರ ಹವ್ಯಾಸ. ಉದ್ದೇಶ? ಪಾಶ್ಚಾತ್ಯ ಸಂಗೀತ ಶ್ರವಣ. ಆದರೆ ಈ ಸೂಕ್ಷ್ಮ ಅರಿಯಲಾರದ ಇವರ ಕರ್ಮಠ ಬ್ರಾಹ್ಮಣ ಬಾಣಸಿಗ ತಮಿಳು ನಾಡಿಗೆ ಪಲಾಯನಗೈದು ರಾಮನ್ ದಂಪತಿಗಳು ಕ್ರಿಶ್ಚಿಯನ್ನರಾಗಿಹೋದರೆಂಬ ವದಂತಿ ಹಬ್ಬಿಸಿದ್ದಿತ್ತು!

ಭಾರತೀಯ ವಾದ್ಯಗಳ ಪೈಕಿ ಮೃದಂಗ ಮತ್ತು ಪಿಟೀಲು ಇವರನ್ನು ವಿಶೇಷವಾಗಿ ಆಕರ್ಷಿಸಿದುವು. ಇವುಗಳಿಗೆ ಸಾಮಾನ್ಯವಾದದ್ದೇನು? ಮೇಲು ನೋಟಕ್ಕೆ ಏನೂ ಇಲ್ಲ. ಒಂದು ತಾಳ ವಾದ್ಯ, ಇನ್ನೊಂದು ರಾಗ ವಾದ್ಯ. ಒಂದು ಚರ್ಮ ವಾದ್ಯ, ಇನ್ನೊಂದು ತಂತ್ರೀ ವಾದ್ಯ. ನಾದ, ವಾದನ, ರಚನೆ, ಉದ್ದೇಶ ಒಂದೊಂದರಲ್ಲೂ ವಿಭಿನ್ನವಾದ ಈ ವಾದ್ಯಗಳ ನಡುವೆ ರಾಮನ್ ಆಂತರಂಗಿಕ ಏಕತೆ ಸಾಧಿಸಿದರು. ಅದು ಏನೆಂದು ಈಗ ನೋಡೋಣ.

ಶ್ರುತಿಕವೆಯನ್ನು (tuning fork) ತಟ್ಟಿದಾಗ ಅದರ ನಾಲಗೆಗಳು ಸೆಕೆಂಡಿಗೆ ಹಲವು ನೂರು ಸಲ ಕಂಪಿಸಿ ಸ್ವರೋತ್ಪತ್ತಿ ಮಾಡುವುದು ಸರಿಯಷ್ಟೆ. ಈ ಕಂಪನ ದರಕ್ಕೆ ಆವರ್ತಾಂಕವೆಂದು (frequency) ಹೆಸರು. ಉದಾಹರಣೆಗೆ ಒಂದು ಶ್ರುತಿಕವೆಯ ಆವರ್ತಾಂಕ ೨೬೧ ಎಂದರೆ ಅದನ್ನು ತಟ್ಟಿದಾಗ ಅದು ಸೆಕೆಂಡಿಗೆ ೨೬೧ ಸಲ ಕಂಪಿಸಿ ತದನುಗುಣವಾದ ಸ್ವರೋತ್ಪತ್ತಿ ಮಾಡುವುದೆಂದರ್ಥ. ಇಂಥ ಒಂದು ಶ್ರುತಿ ಕವೆಯಿಂದ ಏಕಶ್ರುತಿಯ ಅತ್ಯಂತ ಪರಿಶುದ್ಧವಾದ ಸರಳ ಸ್ವರ ಮಾತ್ರ ಹೊಮ್ಮುತ್ತದೆ. ಇದನ್ನು ಯುಕ್ತ ಉಪಕರಣದ ಮೂಲಕ ರೇಖಾರೂಪಕ್ಕೆ ಇಳಿಸಿದರೆ ಇದೊಂದು ಏಕರೂಪದ ಉಬ್ಬು ತಗ್ಗುಗಳಿಂದ ಹರಿಯುವ ವಕ್ರರೇಖೆ ಆಗಿರುತ್ತದೆ — ಸರ್ಪಗತಿಯಂತೆ. ಕ್ರಮಬದ್ಧತೆ ಇದರ ಗುಣ. ಸುನಾದದ (ಆದ್ದರಿಂದ ಸಂಗೀತದ) ಪ್ರಾಥಮಿಕ ಅವಶ್ಯಕತೆ ಇದು.

ತಾಳವಾದ್ಯಗಳಾದ ನಗಾರಿ, ಚಂಡೆ, ಡೋಲು, ಡಮರು, ತಮಟೆ, ತಾಸ, ಮೃದಂಗ ಮುಂತಾದವುಗಳಿಗೆ ಒಟ್ಟಾಗಿ ಆನದ್ಧವಾದ್ಯಗಳೆಂದು ಹೆಸರು. ಬಿಗಿಯಾಗಿ ಕಟ್ಟಿ ಎಳೆದು ಹಿಡಿದ ಚರ್ಮದ ಪೊರೆಯನ್ನು ಬಡಿದು, ತಟ್ಟಿ, ಉಜ್ಜಿ ಅಥವಾ ಹೊಡೆದು ಕಂಪಿಸುವಂತೆ ಮಾಡಿ ಸ್ವರ ಹೊರಡಿಸುವುದು ಇಲ್ಲಿಯ ತಂತ್ರ.

ಪೊರೆಯ ತಳದಲ್ಲಿರುವ ಗಾಳಿಬುರುಡೆ ಸ್ವರದ ಅನುರಣನವನ್ನು (resonance) ಪೋಷಿಸುತ್ತದೆ. ಉತ್ತೇಜಿತ ಸ್ಥಿತಿಯಲ್ಲಿರುವ ಇಂಥ ವಾದ್ಯವನ್ನು ಬಾಜಿಸಿದಾಗ ಇದರಿಂದ ಅನೇಕ ಶ್ರುತಿಗಳ ಮಿಶ್ರ ಮತ್ತು ಸಂಕೀರ್ಣ ಸ್ವರ ಹೊಮ್ಮುತ್ತದೆ. ಆದ್ದರಿಂದ ಇದು ಸುನಾದವಾಗಿರಲೇಬೇಕೆಂದೇನೂ ಇಲ್ಲ. ಉದಾಹರಣೆಗೆ ನಗಾರಿಯನ್ನು ಬಜಾಯಿಸಿದಾಗ ಢವ್ ಎಂಬ ಸ್ವರ ಮೊಳಗುವುದು ಸರಿಯಷ್ಟೆ. ಇದು ಚರ್ಮದ ಗುಣ, ಎಳೆತ, ಗಾಳಿಬುರುಡೆಯ ರಚನೆ ಮುಂತಾದವನ್ನು ಅವಲಂಬಿಸಿ ನಿರ್ಣೀತವಾಗುವ ಪ್ರಧಾನ ಆವರ್ತಾಂಕದ ಸ್ವರವೂ ಇದರ ಪೂರ್ಣಾಂಕ ಗುಣಿತ ಆವರ್ತಾಂಕಗಳಿರುವ ಹಲವಾರು ಸ್ವರಗಳೂ ಸೇರಿ ಆಗಿರುವ ಸಂಕೀರ್ಣ ಸ್ವರ. ಮೊದಲನೆಯದು ಪ್ರಧಾನ ಸ್ವರ. ಎರಡನೆಯ ಗುಂಪಿನವು ಪ್ರಧಾನ ಸ್ವರದ ಆವರ್ತಕಗಳು (overtones). ಆವರ್ತಕಗಳ ಪೈಕಿ ಕೆಲವು ಪ್ರಧಾನ ಸ್ವರದ ರಂಜಕ ಗುಣವನ್ನು— ಅಂದರೆ ಕಿವಿಗೆ ಮಧುರವಾಗುವ ಸಂಗೀತಗುಣವನ್ನು — ಪ್ರವರ್ಧಿಸಬಲ್ಲಂಥವು. ಇವುಗಳಿಗೆ ರಂಜಕಾವರ್ತಕಗಳೆಂದು (harmonies) ಹೆಸರು.*

ಮೃದಂಗ, ಮತ್ತು ರಚನೆಯ ದೃಷ್ಟಿಯಿಂದ ಇದರದೇ ಇನ್ನೊಂದು ರೂಪವಾದ ತಬಲ, ಇವೆರಡರ ಹೊರತಾಗಿ ಮಿಕ್ಕ ಯಾವ ಆನದ್ಧ ವಾದ್ಯವೂ ರಂಜಕಾವರ್ತಕಗಳನ್ನು ಉತ್ಪಾದಿಸುವುದಿಲ್ಲ. ಎಂದೇ ಇವು ಮಾತ್ರ ಸಂಗೀತದ ಅವಿಭಾಜ್ಯ ಸಂಗಾತಿಗಳಾಗಿ ಮೆರೆದಿವೆ. ಹಾಡುಗಾರಿಕೆಗೆ ಇಲ್ಲವೇ ವೀಣಾ ವಾದನಕ್ಕೆ ಮೃದಂಗ ಹಿತಕರವಾಗುವುದೂ ಅಂತೆಯೇ ತಮಟೆ ಹಿತಕರವಾಗದಿರುವುದೂ ಈ ಕಾರಣದಿಂದ. ಪಾಶ್ಚಾತ್ಯ ಆನದ್ಧ ವಾದ್ಯ ಯಾವುದೂ ತಾಳ ಬಜಾವಣೆಯ ಪ್ರಾಥಮಿಕ ಘಟ್ಟದಿಂದ ಮೇಲಕ್ಕೆ ಬಡ್ತಿ ಪಡೆದಿಲ್ಲ. ಅದು ರಂಜಕಾವರ್ತಕಗಳನ್ನು ಉತ್ಪಾದಿಸದಿರುವುದೇ ಇದರ ಕಾರಣವೆಂದು ರಾಮನ್ ಬರೆದಿದ್ದಾರೆ.

ಅತ್ಯಂತ ಸರಳ ತಂತ್ರೀವಾದ್ಯವಾದ ತಂಬೂರಿಯನ್ನು ಪರಿಶೀಲಿಸೋಣ. ಸರಿಯಾಗಿ ಶ್ರುತಿಗೊಳಿಸಿದ ತಂಬೂರಿಯ ಯಾವುದೇ ತಂತಿಯನ್ನು ಮಿಡಿದಾಗ ಅದರಿಂದ ರಂಜಕಾವರ್ತಕಗಳು ಮಾತ್ರ ಹೊಮ್ಮುವುದರಿಂದ ತಂಬೂರಿ ಸಂಗೀತದ ಅವಿಚ್ಛಿನ್ನ ಭಾಗವಾಗಿದೆ. ಅಲ್ಲಿಗೆ ರಂಜಕಾವರ್ತಕಗಳ ಉತ್ಪಾದನೆ ಕೆಲವು ವಿಶಿಷ್ಟ ರಚನೆಗಳ ಗುಣವೆಂದಾಯಿತು. ಆನದ್ಧ ವಾದ್ಯಗಳಲ್ಲಿ ಸಾಧಾರಣವಾಗಿ ಕಂಡುಬರದ ಈ ಗುಣ ಮೃದಂಗದಲ್ಲಿ ಮಾತ್ರ ಪ್ರಕಟವಾಗುವುದರ ಕಾರಣವೇನು? ಅರ್ಥಾತ್ ಮೃದಂಗದ ಪೊರೆ ತಂಬೂರಿಯ ತಂತಿಯಂತೆ ರಂಜಕಾವರ್ತಕಗಳನ್ನು ಉತ್ಪಾದಿಸುವುದರ ರಹಸ್ಯವೇನು? ಇದರ ಶೋಧನೆ ರಾಮನ್ ಎದುರಿದ್ದ ಸಮಸ್ಯೆ.

ಇದಕ್ಕೆ ಪರಿಹಾರ ಅರಸಲು ಅವರು ಹಲವಾರು ಪ್ರಯೋಗಗಳನ್ನು ಕೈಗೊಂಡರು. 'ಪ್ರಾಚೀನ ಹಿಂದೂಗಳ ಧ್ವನಿವೈಜ್ಞಾನಿಕ ಜ್ಞಾನ' (The acoustical knowledge of the ancient Hindus) ಎಂಬ ವಿಷಯ ಕುರಿತು ಅವರು ೧೯೧೮ರಲ್ಲಿ ಪ್ರಕಟಿಸಿದ ಪ್ರಬಂಧದ ಉದ್ಧೃತಾಂಶಗಳಿವು: "ಪ್ರಾಚೀನ ಭಾರತದ ಸಾಂಸ್ಕೃತಿಕ ಜೀವನದಲ್ಲಿ ಮೌಖಿಕ ಮತ್ತು ವಾದ್ಯ ಸಂಗೀತಗಳೆರಡೂ ಪ್ರಮುಖ ಪಾತ್ರ ವಹಿಸಿದ್ದುವು. ಮೀಟಿ ಇಲ್ಲವೇ ಕಮಾನೆಳೆದು ಉತ್ತೇಜನಗೊಳಿಸುವ ತಂತ್ರೀವಾದ್ಯ, ಅಡ್ಡ ಹಿಡಿದು ನುಡಿಸುವ ಕೊಳಲು, ಹಲವು ಬಗೆಯ ಸುಷಿರ ಹಾಗೂ ಪೀಪಿ ವಾದ್ಯಗಳು ಹಿಂದೂಗಳಿಗೆ ಇತಿಹಾಸದ ಆರಂಭದ ದಿನಗಳಲ್ಲೇ ಪರಿಚಿತವಾಗಿದ್ದುವೆಂಬುದು ಸ್ಪಷ್ಟ... ಧ್ವನಿ ಉತ್ಪಾದನೆಯ ಮತ್ತು ಅನುರಣನದ ತತ್ತ್ವಗಳನ್ನು ಅವರು ಸಾಕಷ್ಟು ಆಳವಾಗಿ ಗ್ರಹಿಸಿದ್ದರೆಂಬ ಸಂಗತಿ ಕೆಲವೊಂದು ತಂತ್ರೀವಾದ್ಯಗಳ ಆಲೇಖ್ಯಗಳನ್ನು ತೀರ ಮೇಲಿಂದ ಮೇಲೆ ಪರೀಕ್ಷಿಸಿದಾಗಲೂ ವೇದ್ಯವಾಗುತ್ತದೆ. ಈ ದಿಟ್ಟಿನಲ್ಲಿ ವ್ಯಾಪಕ ಅಧ್ಯಯನ ನಡೆಸಿದರೆ ಅದು

---

* ಆವರ್ತಕಗಳು — ರಂಜಕಾವರ್ತಕಗಳು ನಡುವಿನ ವ್ಯತ್ಯಾಸವನ್ನು ನನಗೆ ಸ್ಪಷ್ಟವಾಗಿ ವಿವರಿಸಿದವರು ಮಹಾಮಹೋಪಾಧ್ಯಾಯ ಡಾ. ರಾ. ಸತ್ಯನಾರಾಯಣ.

ಕುತೂಹಲಕಾರಿ ಫಲಗಳನ್ನು ನೀಡಬಹುದೆಂಬ ಭರವಸೆಯಿಂದ ನಾನು ಪ್ರಾಚೀನ ಭಾರತೀಯ ವಾದ್ಯಗಳ ಆಧುನಿಕ ವೈಜ್ಞಾನಿಕಾಧ್ಯಯನಕ್ಕೆ ಈಗ ಎರಡು ತಿಂಗಳ ಹಿಂದೆ ತೊಡಗಿದೆ."

ತಮ್ಮ ಸಹಕಾರ್ಯಕರ್ತ ಶಿವಕಾಳಿ ಕುಮಾರ್ ಎಂಬವರ ಜೊತೆ ಕೈಗೊಂಡ ಪ್ರಯೋಗಗಳು ಇವರ ಭರವಸೆಯನ್ನು ಸ್ಥಿರೀಕರಿಸಿದುವು. ಪ್ರತಿಷ್ಠಿತ ವಿಜ್ಞಾನ ಪತ್ರಿಕೆ Nature ತನ್ನ ೧೫-೧-೧೯೨೦ರ ಸಂಚಿಕೆಯಲ್ಲಿ ಇವರ ಸಂಶೋಧನ ಲೇಖನ Musical drums with harmonic overtones ಎಂಬುದನ್ನು ಪ್ರಕಟಿಸಿದೆ.

ಮೃದಂಗದ ಮುಖ್ಯ ಘಟಕಗಳಿವು: ಅಸಮ ಗಾತ್ರದ ಶಂಕುಮುಂಡಗಳನ್ನು ಅವುಗಳ ತಳಗಳಲ್ಲಿ ಬೆಸೆದು ಜೋಡಿಸಿದಂತಿರುವ ಮರದ ಟೊಳ್ಳು ಕಾಂಡ, ಇದರ ಎರಡೂ ಬಾಯಿಗಳನ್ನು ಬಿಗಿಯಾಗಿ ಮುಚ್ಚಿಕೊಂಡಿರುವ ಚರ್ಮದ ಪೊರೆಗಳು, ಇವನ್ನು ಎಳೆದು ಹಿಡಿದಿಟ್ಟಿರುವ ಚರ್ಮದ ಪಟ್ಟಿಗಳು ಮತ್ತು ಇವುಗಳ ಎಳೆತವನ್ನು ಹೆಚ್ಚು ಕಡಿಮೆ ಮಾಡಲು ಅಳವಡಿಸಿರುವ ಮರದ ಬಿಮ್ಮುಗಳು. ಬಲಬರಿಗೆ ಮೃದಂಗದ ಬಲಮುಖದ ಹೆಸರು ಕರ್ಣ. ಇದು ತಾರಶ್ರುತಿಯಲ್ಲಿರುವುದು. ಎಡಮುಖದ ಹೆಸರು ತೊಪ್ಪಿ. ಇದು ಮಂದ್ರ ಶ್ರುತಿಯಲ್ಲಿರುವುದು. ಬಲ ಮುಖದ ವಿಸ್ತಾರ ಎಡ ಮುಖದ ವಿಸ್ತಾರಕ್ಕಿಂತ ಕಿರಿದು.

ಮೃದಂಗ ಉತ್ಪಾದಿಸುವ ರಂಜಕಾವರ್ತಕಗಳ ರಹಸ್ಯ ಅದರ ಕರ್ಣಮುಖದಲ್ಲಿ ಅಡಗಿದೆ ಎಂದು ರಾಮನ್ ತರ್ಕಿಸಿದರು. ಈ ಮುಖದ ರಾಚನಿಕ ವೈಶಿಷ್ಟ್ಯವಿದು: ಪೊರೆಯ ಎರಡು ಪದರಗಳನ್ನು ಒಂದರಮೇಲೊಂದರಂತೆ ಇದಕ್ಕ ಮುಚ್ಚಿಗೆ ಹಾಕಿ ಅಂಚಿನಲ್ಲಿ ಸಮ ಅಂತರಗಳಲ್ಲಿ ಇರುವಂತೆ ರೂಪಿಸಿದ ೧೬ ಕಣ್ಣುಗಳ ಮೂಲಕ ಪಟ್ಟಿಗಳನ್ನು ಹಾಯಿಸಿ ಬಿಗಿದು ಬಳಿಕ ಮೇಲು ಪೊರೆಯ ಕೇಂದ್ರ ಭಾಗವನ್ನು ವರ್ತುಲೀಯವಾಗಿ ಕತ್ತರಿಸಿ ತೆಗೆಯಲಾಗುವುದು; ಈಗ ಈ ಭಾಗದಲ್ಲಿ ಹೊರ ಕಾಣುವ ಕೆಳ ಪೊರೆಯ ಅಧಿಕ ಭಾಗಕ್ಕೆ ಕಬ್ಬಿಣದ ರೇಣು, ಇದ್ದಲಿನ ಪುಡಿ ಮತ್ತು ಹಿಟ್ಟು ಕಲಸಿ ನಾದಿದ ಅಂಟು ಪದಾರ್ಥವನ್ನು ಸವರಿ ಮತ್ತು ಹಚ್ಚಿ ಉಬ್ಬು ರೊಟ್ಟಿಯ ಮೇಲ್ಮೈಯಂತೆ ಮಾಡಲಾಗುವುದು. ಈ ಕಪ್ಪು ಲೇಪನವೇ ಕರ್ಣ. ಹೀಗೆ ಕರ್ಣ ಮುಖದಲ್ಲಿ ಮೂರು ಸ್ಪಷ್ಟ ವಿಭಾಗಗಳು ಏರ್ಪಡುತ್ತವೆ: ಮೇಲು ಪೊರೆಯ ಶೇಷ ಭಾಗ ರೂಪಿಸುವ ಕಂಕಣಾಕಾರದ ಅಂಚು, ಕರ್ಣ, ಮತ್ತು ಇವೆರಡರ ನಡುವಿನಲ್ಲಿರುವ ಕೆಳ ಪೊರೆಯ ಕಂಕಣಾಕಾರ.

ಈ ತೆರನಾಗಿ ತಯಾರಿಸಿದ ಮೃದಂಗದ ಪಟ್ಟಿಗಳನ್ನು ಯುಕ್ತವಾಗಿ ಎಳೆದು ಬಿಗಿಗೊಳಿಸಿದಾಗ ಕರ್ಣ ಮುಖದ ಎಲ್ಲ ಕಡೆಗಳಲ್ಲಿಯೂ ಎಳೆತ ಒಂದೇ ಸಮವಾಗಿದ್ದು ಅದು ನಿರ್ದಿಷ್ಟ ಶ್ರುತಿಯ ಸ್ವರವನ್ನು ಮಿಡಿಯುತ್ತದೆ. ಅಂಚಿನಲ್ಲಿರುವ ಕಣ್ಣುಗಳನ್ನೂ ಗಂಟುಗಳನ್ನೂ ಮೃದುವಾಗಿ ತಟ್ಟಿ ಶ್ರುತಿಯಲ್ಲಿ ಸೂಕ್ಷ್ಮ ಹೊಂದಾಣಿಕೆ ಸಾಧಿಸುವುದು ಸುಲಭ. ಹೀಗೆ ಶ್ರುತಿಗೊಳಿಸಿದ ಕರ್ಣ ಮುಖವನ್ನು ಈ ವಾದ್ಯದ ಶಿಸ್ತು ವಿಧಿಸುವ ಪ್ರಕಾರ ಬೆರಳುಗಳಿಂದ ಮತ್ತು ಹಸ್ತದ ಮಟ್ಟಸ ಭಾಗದಿಂದ ಮಿಡಿದಾಗ ಇಲ್ಲವೇ ಘಾತಿಸಿದಾಗ ಅದು ರಂಜಕಾವರ್ತಕಗಳನ್ನು ಮಾತ್ರ ಉತ್ಪಾದಿಸುವುದೆಂಬ ಸಂಗತಿಯನ್ನು ರಾಮನ್ ಶೋಧಿಸಿದರು.

ಇದು ಸರಿ. ಇದರ ಹಿನ್ನೆಲೆಯಲ್ಲಿರುವ ಭೌತ ವೃತ್ತಾಂತವೇನು? ರಾಮನ್ ಬರೆದಿದ್ದಾರೆ: "ಕರ್ಣ ಮುಖದ ಭೌತ ವರ್ತನೆ, ಇವರ ಅನೇಕ ಭೌತ ವಿವರಗಳಲ್ಲಿ, ಎಳೆದು ಹಿಡಿದ ಸಾಧಾರಣ ವರ್ತುಲೀಯ ಪೊರೆಯ ವರ್ತನೆಯಂತಲ್ಲದೆ, ಬಿಗಿ ತಂತಿಯದರಂತೆ ಇರುವುದು. ಕರ್ಣಭಾರದಿಂದ ಸಜ್ಜಾಗಿರುವ ಪೊರೆ ಇದರ ಕಂಪನಕ್ರಮದಲ್ಲಿ ಬಿಗಿ ತಂತಿಯ ಹಾಗೆ ವಿಭಾಗಗೊಂಡು ೧, ೨, ೩. ೪ ಅಥವಾ ೫ ಭಾಗಗಳಲ್ಲಿ ಕಂಪಿಸಬಲ್ಲದು. ಈ ಕಂಪನಗಳು ಮೃದಂಗದ ಶ್ರುತಿಯ ಆವರ್ತಾಂಕದ ಜೊತೆ ನಿರ್ದಿಷ್ಟವಾಗಿ ಗುರುತಿಸಬಹುದಾದ ಗಣಿತ ಸಂಬಂಧ ಹೊಂದಿದು ರಂಜಕಾವರ್ತಕಗಳನ್ನು ಉತ್ಪಾದಿಸುತ್ತವೆ."

ತಮ್ಮ ಈ ತೀರ್ಮಾನಗಳಿಗೆ ಸಾಕ್ಷಿಯಾಗಿ ಅವರು ನೆಲಕ್ಕೆ ಲಂಬವಾಗಿ ನಿಲ್ಲಿಸಿದ ಮೃದಂಗದ ಕರ್ಣಮುಖದ ಮೇಲೆ ಏಕಗಾತ್ರದ ತೆಳುಮರಳ

ಕಣಗಳನ್ನು ಸಮವಾಗಿ ಹರಡಿ ಬಳಿಕ ಮೃದಂಗವನ್ನು ವಿವಿಧ ಪರಿಗಳಲ್ಲಿ ಮಿಡಿದು ಒಂದೊಂದು ಪರಿಯಲ್ಲಿಯೂ ಮರಳ ಕಣಗಳು ಕಂಪನಾನಂತರ ತಳೆಯುವ ವಿನ್ಯಾಸವನ್ನು ಛಾಯಾಚಿತ್ರೀಕರಿಸಿ ಪ್ರಕಟಿಸಿದ್ದಾರೆ. ಕರ್ಣ ಮುಖದ ಒಂದೊಂದು ಎಡೆಯಲ್ಲಿ ಮಿಡಿದ ಘಾತ ಹೇಗೆ ಒಂದೊಂದು ಬಗೆಯ ವಿನ್ಯಾಸಕ್ಕೆ ಕಾರಣವಾಗುತ್ತದೆ, ಇವರ ಒನ್ನೆಲೆಯಲ್ಲಿ ಹೇಗೆ ಘಾತದ ಶಕ್ತಿ ವಿತರಣೆ ಆಗುತ್ತದೆ, ಕರ್ಣಮುಖದ ವಿಶಿಷ್ಟ ರಚನೆ ಹೇಗೆ ಇದನ್ನು ಸಾಧಿಸುತ್ತದೆ, ಸಂಗೀತ ಕುರಿತಂತೆ ಹೇಗೆ ಇದು ಪೋಷಕವಾಗುತ್ತದೆ ಮುಂತಾದ ಸಂಗತಿಗಳನ್ನು ಗಣಿತದ ಪರಿಭಾಷೆಯಲ್ಲಿ ಚರ್ಚಿಸಿ ಮೃದಂಗ ರಚನೆಯ ತಳದಲ್ಲಿರುವ ಭೌತ ಅಂಶಗಳನ್ನು ಶೋಧಿಸಿದ್ದಾರೆ. ಅಲ್ಲಿಯ ತನಕ ಪರಂಪರಾಗತವಾಗಿ ಅಭಿವರ್ಧಿಸಿ ಬಂದಿದ್ದ ಆನುಭವಿಕ ಜ್ಞಾನವನ್ನು ಅಥವಾ ಪ್ರಯೋಗಲಭ್ಯ ಮಾಹಿತಿಗಳನ್ನು ಆಧುನಿಕ ಭೌತವಿಜ್ಞಾನದ ಭದ್ರ ಅಸ್ತಿಭಾರದ ಮೇಲೆ ಸ್ಥಾಪಿಸಿದ್ದಾರೆ. ಈ ಸಂಶೋಧನ ಪ್ರಬಂಧಕ್ಕೆ ಅವರು ಬರೆದಿರುವ ಸಮಾರೋಪ ಹೀಗಿದೆ:

"ಸಂಗೀತದ ಜೊತೆ ಏನೂ ಸಂಬಂಧವಿರದ ತೀರ ಸಾಮಾನ್ಯ ವಸ್ತುಗಳಿಂದ ತಯಾರಿಸಲಾದ ಈ ಸಂಗೀತವಾದ್ಯ (ಮೃದಂಗ) ಅತ್ಯಂತ ನಿಷ್ಕೃಷ್ಟ ಆಧುನಿಕ ಧ್ವನಿವೈಜ್ಞಾನಿಕ ಪರೀಕ್ಷೆಯಲ್ಲಿಯೂ ತೇರ್ಗಡೆಯಾಗಿದೆ. ಇದು ಪಾಶ್ಚಾತ್ಯ ಸಂಗೀತದ ಎಲ್ಲ ತಾಳವಾದ್ಯಗಳಿಗಿಂತ ಅದೆಷ್ಟೊ ಉನ್ನತ ಮಟ್ಟದಲ್ಲಿದೆ. ಪ್ರಾಚೀನ ಹಿಂದೂಗಳ ಸೂಕ್ಷ್ಮ ಕಲಾಭಿರುಚಿಗೂ ಧ್ವನಿವೈಜ್ಞಾನಿಕ ಜ್ಞಾನಕ್ಕೂ ಇದೊಂದು ಉತ್ತಮ ನಿದರ್ಶನ... ಧ್ವನಿ ಉತ್ಪಾದಕ ವಸ್ತುಗಳಿಂದ ಸಾಧಾರಣವಾಗಿ ಏಕ ಕಾಲದಲ್ಲಿ ಅನೇಕ ಸ್ವರಗಳು ಹೊಮ್ಮುತ್ತವೆ ಎನ್ನುವ ಸಂಗತಿ ಹಿಂದೂಗಳಿಗೆ ತಿಳಿದಿತ್ತು. ಆನದ್ಧವಾದ್ಯಗಳಿಂದ ಉಗಮಿಸುವ ಇಂಥ ಆವರ್ತಕಗಳನ್ನು ರಂಜಕಾವರ್ತಕಗಳಾಗಿ ಪರಿವರ್ತಿಸಲು ಅವರು ನಡೆಸಿದ ಸತತ ಪ್ರಯೋಗಗಳ ಫಲವೇ ಇಂದಿನ ಪಕ್ವ ಹಾಗೂ ಪರಿಪೂರ್ಣ ಮೃದಂಗ ಎಂದು ತೀರ್ಮಾನಿಸಲು ಸಾಕಷ್ಟು ಸಾಕ್ಷ್ಯಾಧಾರಗಳಿವೆ."

ಮೃದಂಗದ ಧ್ವನಿವೈಜ್ಞಾನಿಕ ಗುಣಗಳನ್ನು ಶೋಧಿಸುತ್ತಿದ್ದ ದಿನಗಳಲ್ಲೇ ಅವರು ಪಿಟೀಲು ಕುಟುಂಬದ ತಂತ್ರೀವಾದ್ಯಗಳ ಗುಣಗಳನ್ನು ಕೂಡ ಅಭ್ಯಾಸಮಾಡುತ್ತಿದ್ದರು. ಉದಾಹರಣೆಗೆ ಪಿಟೀಲಿನಲ್ಲಿ ಕಮಾನು ಮತ್ತು ಬಿಗಿತಂತಿ ನಡುವಿನ ಘರ್ಷಣೆಯಿಂದ ಸ್ವರೋತ್ಪತ್ತಿ ಆಗುತ್ತದೆ. ಘರ್ಷಣೆಯ ಶಕ್ತಿಯನ್ನು ವಾದಕ ಕಮಾನಿನ ಮೂಲಕ ಒದಗಿಸುತ್ತಾನೆ. ಈ ಬಗ್ಗೆ ಪ್ರಚಲಿತವಿದ್ದ ಸಿದ್ಧಾಂತಗಳನ್ನು ಅವರು ಪ್ರಯೋಗ-ಗಳಿಗೆ ಒಳಪಡಿಸಿ ಸ್ಥಿರೀಕರಿಸಿದರು. ತಾವು ಕಂಡುಕೊಂಡ ಸಂಗತಿಗಳನ್ನು ೧೯೧೮ರಲ್ಲಿ ಪ್ರಕಟಿಸಿದರು.

ಸೌಂದರ್ಯದ ನಿಜ ಮೂಲ ವಿಶ್ವ. ಇದರ ತಳದಲ್ಲಿ ಸಾಂಗತ್ಯವಿದೆ. ಬಿಡಿಗಳು ಇಡಿಯಲ್ಲಿ ಅಡಕವಾಗಿ ಎರಕಗೊಂಡಿರುವುದೇ ಸಾಂಗತ್ಯ. ಇದನ್ನು ಸುಲಭಲಭ್ಯ ಉಪಕರಣಗಳ ನೆರವಿನಿಂದ ಅನ್ವೇಷಿಸುವುದು ಮಾನವಮತಿಗೆ ಸಾಧ್ಯವಿದೆ ಎಂದು ನಂಬಿದ್ದ ರಾಮನ್ ಸಂಗೀತ ವಾದ್ಯಗಳ ಬಗೆಗಿನ ಸಂಶೋಧನೆಯಲ್ಲಿಯೂ ಈ ನಿಲವನ್ನು ಪ್ರದರ್ಶಿಸಿದ್ದಾರೆ.

ಬೆಂಗಳೂರಿನ ಹೆಬ್ಬಾಳದಲ್ಲಿರುವ ರಾಮನ್ ವಿಜ್ಞಾನ ಮಂದಿರದಲ್ಲಿ ಇವರನ್ನು ೧೧-೩-೧೯೫೨ ರಂದು ಸಂದರ್ಶಿಸಿ ಇವರಿಂದ ಪಿಟೀಲಿನ ಧ್ವನಿ ವಿಜ್ಞಾನ ಕುರಿತು ವಿವರಣೆ ಪಡೆದ ಪಿಟೀಲು ಮಾಂತ್ರಿಕ ಯೆಹೂದಿ ಮೆನುಹಿನ್ ಬರೆದಿರುವ ಸಂದೇಶ ಅರ್ಥಪೂರ್ಣವಾಗಿದೆ: "ಶಬ್ದದ ಬಗೆಗಿನ ಪಂಡಿತಶ್ರೇಷ್ಠರ ಮಂದಿರಕ್ಕೆ ಭೇಟಿ ನೀಡಿದುದರ ಕುರುಹಿಗೆ— ಅಜ್ಞ ಪಿಟೀಲುಗಾರನೊಬ್ಬನಿಂದ."

ವಾದ್ಯ ಧ್ವನಿವಿಜ್ಞಾನದೊಳಗೋ ಧ್ವನಿ-ವಿಜ್ಞಾನ ವಾದ್ಯದೊಳಗೋ ಇವೆರಡೂ ಶ್ರೋತೃವಿನ ಕಿವಿಯೊಳಗೋ! ✿





# ಅಭಿನಯಂ

ಎಂ. ಎಚ್. ನಾಯಕ ಬಾಡ

ಆರಬೈಲ ಘಟ್ಟದ ನಾಗಮುರಿಗೆ ರಸ್ತೆಯಲ್ಲಿ ಟ್ರಕ್ಕು ಮೆಲ್ಲನೆ ಇಳಿಯತೊಡಗುತ್ತಲೇ ಇದು ವರೆಗೆ ಹನಿಸುತ್ತಿದ್ದ ಮಳೆ ಇದ್ದಕ್ಕಿದ್ದಂತೆ ಜೋರಾಗಿ ಸುರಿಯತೊಡಗಿತು. ಗಾಡಿಯನ್ನು ರಸ್ತೆಯ ಒಂದು ಪಕ್ಕಕ್ಕೆ ಮೆಲ್ಲನೆ ಹೊರಳಿಸಿ ಬ್ರೇಕು ಹಾಕಿ ನಿಲ್ಲಿಸಿದ ಡ್ರೈವರ್ "ಥತ್ ದರಿದ್ರದ ಮಳೆ" ಎಂದು ತನ್ನಷ್ಟಕ್ಕೆ ಮತ್ತೇನನ್ನೋ ಗೊಣಗುತ್ತ ಲೈಟು ಹಾಕಿದ.

ಡ್ರೈವರನ ಹಿಂದೆಯೇ ಕಿಟಕಿಗೆ ಒತ್ತಿಕೊಂಡು ಕುಳಿತು ಹೊರಗಿನ ಕತ್ತಲೆಯಲ್ಲಿ ದೃಷ್ಟಿ ನೆಟ್ಟು ತನ್ನದೇ ಗುಂಗಿನಲ್ಲಿ ಕಳೆದು ಹೋಗಿದ್ದ 'ಆತ'ನಿಗೆ ಇದ್ದಕ್ಕಿದ್ದಂತೆ ಕ್ಯಾಬಿನ್ನಿನಲ್ಲಿ ಲೈಟು ಝಗ್ಗೆಂದುದರಿಂದ ಗಲಿಬಿಲಿಯಾಗಿ ಏನಾಗಿರಬಹುದೆಂದು ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾಗ ಡ್ರೈವರು ಕಾಲು ಬುಡದಲ್ಲೆಲ್ಲೊ ಬಿದ್ದಿದ್ದ ಬಟ್ಟೆಯಿಂದ ಗ್ಲಾಸಿನ ಒಳಭಾಗವನ್ನು ಒರೆಸತೊಡಗಿದುದೂ, ವೈಪರನ್ನು ಬಿಗಿಗೊಳಿಸುತ್ತಿದುದೂ, ಸಡಿಲುಗೊಳಿಸುತ್ತಿದುದೂ ಅಷ್ಟು ದೂರದಲ್ಲಿ ಕುಳಿತಿದ್ದ ಕ್ಲೀನರೂ ಎದ್ದು ಬಂದು ಅಲ್ಲಿ ಇಲ್ಲಿ ಕೈ ತೋರಿಸತೊಡಗಿದುದೂ ಕಾಣಿಸಿತು. "ಏನಾಯ್ತು?" ಎಂದು ಕೇಳಿದುದಕ್ಕೆ "ಏನಿಲ್ಲ ಸಾರ್, ಸಾರ್, ವೈಪರ್ ಕೆಲಸ ಮಾಡ್ತಿಲ್ಲ. ದರಿದ್ರದ ಮಳೆ ಬೇರೆ ಜೋರಾಯ್ತು. ಆಯ್ತು, ಹೋಗುವ" ಎಂದವ ಮತ್ತೆ ಗ್ಲಾಸಿನ ಒಳಭಾಗವನ್ನೆಲ್ಲ ಬಟ್ಟೆ ಚೂರುಗಳಿಂದ ಉಜ್ಜತೊಡಗಿದ.

ಈ ಡ್ರೈವರುಗಳ ವಿಚಾರವಾಗಿ ಆತ ಬಹಳಷ್ಟು ಕೇಳಿದವನಾಗಿದ್ದ. ಘಟ್ಟದ ನಿರ್ಜನ ಪ್ರದೇಶದಲ್ಲಿ ಪ್ರಯಾಣ ಹೊರಟ ಪಾಪದ ಒಂಟಿ ಪ್ರಯಾಣಿಕರು ಯಾರಾದರೂ ಇವರ ಕೈಗೆ ಸಿಕ್ಕು ಬಿದ್ದರೆ ವಾಚು, ಉಂಗುರ, ಪರ್ಸು ಕಿತ್ತುಕೊಂಡು ಒದ್ದು ಕೆಳಗೆ ಹಾಕಿ ಗಾಡಿ ಬಿಟ್ಟುಕೊಂಡು ಹೋಗುವ, ಆಸಾಮಿ ಇನ್ನೂ ಭರ್ಜರಿಯವನಾಗಿದ್ದರೆ ಕೊಂದು ಕಣಿವೆಯಲ್ಲಿ ಬೀಸಾಡಿ ಹೋಗಲೂ ಹೇಸದವರಲ್ಲ ಮುಂತಾಗಿ. ಮೊದಲಾಗಿದ್ದಿದ್ದರೆ ಅಂಥದೊಂದು ನೆನಪಿನಿಂದಲೇ



ಮೈ ನವಿರೇಳುತ್ತಿತ್ತೇನೋ. ಆದರೆ ಈಗೀಗ ಹಾಗೇನೂ ಆಗುತ್ತಿಲ್ಲ. ಇಂಥ ಸಂಗತಿಗಳಿಗೆಲ್ಲ ಅದು ಬಂದಂತೆ ಎದುರುಗೊಳ್ಳುವ ಪ್ರವೃತ್ತಿಯನ್ನು ಬೆಳೆಸಿಕೊಂಡು ಬಹಳ ಕಾಲವೇ ಆಯ್ತು. ಕನಸಿನದ್ದಕ್ಕೂ ವಾಸ್ತವದಲ್ಲಿ ಎದುರುಗೊಳ್ಳುವುದಕ್ಕೂ ಒಂದಂಶವೂ ತಾಳೆಯಾಗದೆ ಪ್ರತಿ ವಿಷಯದಲ್ಲೂ ನಕಾರಾತ್ಮಕ ಪರಿಣಾಮಗಳನ್ನೇ ಸ್ವೀಕರಿಸಬೇಕಾಗಿ ಬಂದಿದ್ದರಿಂದ ಅದೇ ರೂಢಿಯಾಗುತ್ತ ಹೋಯ್ತು. ನಾಳೆ ಅಲ್ಲಿಗೆ ಹೋಗುವದು, ಅದನ್ನು ಮಾಡುವದು ಎಂದು ತೀರ್ಮಾನಿಸಿದ ಕ್ಷಣದಲ್ಲೇ ಇಲ್ಲ ಅದು ಸಾಧ್ಯವಾಗಲಿಕ್ಕಿಲ್ಲ: ಬೆಳಗಾಗುವ ಹೊತ್ತಿಗೆ ಇನ್ನೇನಾದರೂ ಘಟಿಸಿ ಅಲ್ಲಿಗೆ ಹೋಗುವದು ನಿಂತೇ ಹೋದರೂ ಹೋಗಬಹುದು; ಒಮ್ಮೆ ಹೋದರೂ ಆ ಕೆಲಸ

ಕೈ ತಪ್ಪಿ ಹೋದೀತು ಎಂದೆಲ್ಲ ಯೋಚನೆ ಮಾಡುವದೂ ರೂಢಿಯಾಗುತ್ತ ಹೋಯ್ತು.

ಗ್ಲಾಸು ಉಜ್ಜುವುದನ್ನು ನಿಲ್ಲಿಸಿದ ಡ್ರೈವರ್ ಸಿಗರೇಟು ಅಂಟಿಸಿ ಗಾಡಿ ಸ್ಟಾರ್ಟ್ ಮಾಡಿ ಕ್ಯಾಬಿನ್ನಿನ ಲೈಟು ಆರಿಸಿದ. ಗಾಡಿ ಮತ್ತೆ ಮೆಲ್ಲನೆ ಚಲಿಸತೊಡಗಿತು. ಆತ ಮತ್ತೆ ಹೊರಗಿನ ಕತ್ತಲೆಯಲ್ಲಿ ದೃಷ್ಟಿ ಕೀಲಿಸಿ ಯೋಚನೆಯಲ್ಲಿ ಮುಳುಗಿದ.

ನಿನ್ನೆ ಸಾಯಂಕಾಲ ನಾಲ್ಕು ಗಂಟೆಯಿಂದ ಪ್ರಾರಂಭವಾದ ಈ ಪಯಣ ಇನ್ನೂ ಮುಗಿದಿರಲಿಲ್ಲ. ಬಹುಶಃ ಮಳೆಯಿಂದಾಗಿ ಗಾಡಿ ಇದೇ ರೀತಿ ನಿಧಾನಕ್ಕೆ ಸಾಗಿದರೆ ಆ ಊರು ತಲಪಲು ಇನ್ನೂ ಒಂದೂವರೆ ಎರಡು ತಾಸುಗಳಾದರೂ ಬೇಕಾದೀತು. ಹಿಂದಿನ ಊರಿನಲ್ಲಿ ರಸ್ತೆ ಪಕ್ಕದ ಚಾ ದುಕಾನದೆದುರು ಚಾ ಕುಡಿಯಲು ಲಾರಿ ನಿಲ್ಲಿಸಿದಾಗ ಆತ ತಾನು ತಲಪಬೇಕಾದ ಊರ ಕುರಿತು ಸಾಕಷ್ಟು ವಿಷಯಗಳನ್ನು ಸಂಗ್ರಹಿಸಿದ್ದ.

ಅರಬೈಲು ಘಟ್ಟದ ಬುಡದಲ್ಲಿ ಅದೇ ಹೆಸರಿನ ಊರು ಕೂಡ ಇದೆ. ಅಡ್ಡ ರಸ್ತೆಯಲ್ಲಿ ಹೋದರೆ ಆ ಊರಿನಿಂದ ಸುಮಾರು ಎರಡು ಕಿಲೋಮೀಟರ್ ಅಂತರದಲ್ಲಿರೋದೇ ಮಂಚಳ್ಳಿ ಹೆಸರಿನ ಆ ಪುಟ್ಟ ಊರು. ಮಂಚಳ್ಳಿಗೆ ಸರಿಯಾದ ರಸ್ತೆಯಿಲ್ಲ. ಕಾಲು ಹಾದಿಯಲ್ಲಿ ನಡೆದುಕೊಂಡೇ ಹೋಗಬೇಕು. ಬೆಟ್ಟದ ಅಂಚಿನಲ್ಲಿರುವ ಆ ಕುಗ್ರಾಮದಲ್ಲಿರುವ ವೆಂಕಟರಮಣ ಸ್ವಾಮಿ ದೇವಸ್ಥಾನವೊಂದೇ ಪ್ರಮುಖ ಆಕರ್ಷಣೆ ಮುಂತಾಗಿ. ಆ ದೇವಸ್ಥಾನದಲ್ಲೇ ನಾಳೆ ಹನ್ನೆರಡು ಗಂಟೆಯ ಮುಹೂರ್ತದಲ್ಲಿ ಪಾರ್ವತಿ ಹೆಸರಿನ ಆ ಪಾಪದ ಹುಡುಗಿಯನ್ನು ಆ ನೀಚ……ಆತ ಆ ಯೋಚನೆಯನ್ನು ಅಷ್ಟಕ್ಕೇ ನಿಲ್ಲಿಸಿದ. ಅದನ್ನು ಯೋಚಿಸಿದಾಗಲೆಲ್ಲ ತನಗರಿವಿಲ್ಲದೆ ಎಲ್ಲಿಲ್ಲದ ಹಿಂಸೆಯಾಗುತ್ತದೆಂದು ತನ್ನ ಲಕ್ಷ್ಯವನ್ನು ಬೇರೆಡೆ ತಿರುಗಿಸಲು ನೀರಿನಿಂದ ತೊಯ್ದು ಕಿಟಕಿಯ ಭಾಗಕ್ಕೆ ಇನ್ನಷ್ಟು ಒತ್ತಿಕೊಂಡು ಕುಳಿತ. ನಿನ್ನೆ ಚಿಕ್ಕಮ್ಮನ ಮಗಳು ಹೇಮಾ ಬರೆದ ಪತ್ರ ಬಂದಾಗ ಆತ ರೂಮಿನಲ್ಲೇ ಇದ್ದ. ನೈಟ್ ಶಿಫ್ಟ್ ಮುಗಿಯುತ್ತಲೇ ಒಂದಿಷ್ಟು ತಾಸು 'ಓಟಿ' ಮಾಡಿ ರೂಮಿಗೆ ಬಂದು ಸ್ನಾನ ಮುಗಿಸಿ ಹೋಟೆಲ್ಲಿಗೆ ಹೋಗಿ ಊಟ ಮಾಡಿ ಬಂದು ಒಂದಿಷ್ಟು ಗಡದ್ದು ನಿದ್ದೆ ಮಾಡಿ, ಯಾವುದಾದರೂ ಸಿನೆಮಾ ಥಿಯೇಟರು ಹುಡುಕಿಕೊಂಡು ಹೋದರೆ ಹೇಗೆ ಎಂದು ಯೋಚಿಸುತ್ತಿದ್ದಾಗ ಪೋಸ್ಟ್‌ಮನ್ ಕಾಣಿಸಿದ. ತನ್ನನ್ನು ನೋಡಿ ನಕ್ಕರೂ ನಂಬಿಕೆಯಾಗಲಿಲ್ಲ. ಹೇಮಾಗೆ ಪಾರ್ಸಲ್ಲು ಮಾಡಿದ್ದ ಬಟ್ಟೆಯ ಕುರಿತು ಅವಳ ಸುದೀರ್ಘ ಪತ್ರ ಮೊನ್ನೆಯೇ ಬಂದಿದ್ದುದರಿಂದ ತನಗೆ ಈ ತಿಂಗಳೀಡಿ ಯಾರಿಂದಲೂ ಪತ್ರದ ನಿರೀಕ್ಷೆ ಇದ್ದಿರಲಿಲ್ಲ. ತೆರೆದ ರೂಮಿನ ಬಾಗಿಲ ಎದುರು ಕ್ಷಣ ನಿಂತ ಪೋಸ್ಟಮನ್ ಒಂದು ಕವರು ನೀಡಿದ. ನೋಡಿದರೆ ಹೇಮಾಳದೇ! ಮತ್ತೇನಪ್ಪಾ ಬೇಕು ಇವಳಿಗೆ ಎಂದು ಯೋಚಿಸುತ್ತ ಪತ್ರ ಒಡೆದ. ಬರೆದಿದ್ದಳು. "ಈ ಪತ್ರ ನಿನಗೊಂದು ದಾರುಣ ವಾರ್ತೆಯನ್ನು ಹೊತ್ತು ತರುತ್ತಿದೆ. ಅದನ್ನ ಸಹಿಸುವ ಶಕ್ತಿಯನ್ನು ದೇವರು ನಿನಗೆ ಕೊಡಲಿ ಎಂದು ಪ್ರಾರ್ಥಿಸುತ್ತಿದ್ದೇನೆ. ಪಾರ್ವತಿ ಮದುವೆಯ ನಿಶ್ಚಯವಾಗಿದೆ. ಯಾವ ಪಾರ್ವತಿ ಅಂತ ಬೇರೆ ಹೇಳಬೇಕಿಲ್ಲ ತಾನೆ? ಅವಳ ಮದುವೆ ಅನ್ನುವದಕ್ಕಿಂತಲೂ ಅವಳ ಕೊಲೆ ಎಂದರೆ ಸರಿಯಾಗಿ ಹೇಳಿದಂತಾಗುತ್ತೇನೊ. ಯಾಕೆಂದರೆ ಮದುವೆಯಾಗುವಾತ ಒಬ್ಬ ಕಟುಕನೇ. ಅಕ್ಕನನ್ನು ಮದುವೆಯಾಗಿ ಬದುಕಿರುವ ತನಕ ಅವಳನ್ನು ಗೋಳು ಹುಯ್ದುಕೊಂಡದ್ದು ಸಾಲದಾಯ್ತೇನೋ ಆ ಅಯೋಗ್ಯನಿಗೆ. ಈಗ ತಂಗಿಯ ಸರದಿ. ಪಾರ್ವತಿಯ ತಾಯಿಯ ಮೇಲೆ ಆ ರಾಕ್ಷಸ ಹಾಕಿದ ಮೋಡಿ ಅರ್ಥವಾಗುತ್ತಿಲ್ಲ. ಮುದುಕಿಗೆ ಮಗಳ ಭವಿಷ್ಯತ್ತಿಗಿಂತಲೂ ಕಾಸು ಖರ್ಚಿಲ್ಲದೆ ಮಗಳು ದಾಟುತ್ತಿದ್ದಾಳೆ, ಮೇಲಾಗಿ ಅಳಿಯ ಮಾಡುತ್ತಿರುವುದೆಲ್ಲ ತಮ್ಮ ಉದ್ಧಾರಕ್ಕೇ

ಎಂಬುದು ಮನದಟ್ಟಾಗಿ ಹೋಗಿಬಿಟ್ಟಿದೆ. ಯಾರೇನು ಹೇಳಿದರೂ ಅವಳ ಮೇಲೆ ಏನೇನೂ ಪರಿಣಾಮ ಬೀರ್‍ತಾ ಇಲ್ಲ. ಮೇಲಾಗಿ ಉಳಿದವರಿಗಂತೂ ಈ ಪ್ರಕರಣ ತಮಗೆ ಸಂಬಂಧ-ವಿಲ್ಲದ್ದು. ಇದೆಲ್ಲ ಅವರವರೇ ನೋಡಿಕೊಳ್ತಾರೆ. ತಮಗೇಕೆ ಬೇಕು ಇನ್ನೊಬ್ಬರ ಉಸಾಬರಿ ಎನ್ನುವ ನಿರ್ಲಿಪ್ತತನ. ಇವರೆಲ್ಲರ ಮಧ್ಯೆ ಬಲಿಪಶುವಾಗುತ್ತಿರುವವಳು ಆ ಪಾಪದ ಹುಡುಗಿ. ಅವಳ ಗೋಳನ್ನು ನೋಡಲಾಗುತ್ತಿಲ್ಲ ಕೇಳಲಾಗುತ್ತಿಲ್ಲ. ಹೆಣ್ಣಾಗಿ ನನಗೆ ಅವಳ ಸಂಕಟ ಅರ್ಥವಾಗುತ್ತದೆ ಅಷ್ಟೇ. ಆದರೆ ನಾನೇನು ಮಾಡಲಿ ಹೇಳು. ಏನಾದರೂ ಪ್ರಯತ್ನಿಸೋಣವೆಂದು ಮನೆಯಲ್ಲಿ ಅಪ್ಪನ ಮುಂದೆ ಪ್ರಸ್ತಾಪ ಮಾಡಿದೆ. 'ನೀನ್ಯಾರು ಅದನ್ನೆಲ್ಲ ಸರಿಪಡಿಸೋಕೆ? ನಿನಗೇನು ಸಂಬಂಧ ಅವುಗಳ ಜೊತೆಗೆ?' ಅಂದ. ಆಯ್ತುಲ್ಲ. ಇಂಥ ಸಮಾಜದಲ್ಲಿ ಬದುಕುವ ಪಾರ್ವತಿಯಂಥವರ ಗೋಳು ಮುಗಿಯುವ ಹೊತ್ತಿಗೆ ಇನ್ನೆಷ್ಟು ಅಮಾಯಕ ಹೆಣ್ಣುಗಳ ಬಲಿ ಆಗಬೇಕೇನೋ. ಇದನ್ನೆಲ್ಲ ಆ ಅಯೋಗ್ಯ ಅತಿ ಜಾಗರೂಕತೆಯಿಂದ ತುಂಬಾ ಸೂಕ್ಷ್ಮವಾಗಿ ಯಾರಿಂದಲೂ ಏನೂ ತೊಂದರೆಯಾಗದ ಹಾಗೆ ಯೋಚಿಸಿ-ಕೊಂಡಿದ್ದಾನೆ. ಅದ್ಯಾವುದೋ ಮಂಚಳ್ಳಿ ಹೆಸರಿನ ಊರಂತೆ. ಅರಬೈಲ ಘಟ್ಟದ ಬುಡ-ದಲ್ಲಿದೆಯಂತೆ. ಅಲ್ಲೊಂದು ವೆಂಕಟರಮಣ ಸ್ವಾಮಿ ದೇವಸ್ಥಾನವಿದೆಯಂತೆ. ಶುಕ್ರವಾರ ಮಧ್ಯಾಹ್ನ ಹನ್ನೆರಡುವರೆ ಗಂಟೆಗೆ ಆ ದೇವ-ಸ್ಥಾನದಲ್ಲಿ ಮದುವೆಯೆನ್ನುವ ಈ ನಾಟಕ. ಅವನಿಗೆ ಬೇಕಾದ ಕೆಲವರಿಗೆ ಮಾತ್ರ ಆಮಂತ್ರಣ......"

ಮುಂದೆ ಆತನಿಂದ ಒಂದಕ್ಷರವನ್ನೂ ಓದ-ಲಾಗಲಿಲ್ಲ, ಹೊಟ್ಟೆಗೆ ಚಾಕು ಇರಿದು ಇರಿದು ಘಾಸಿಗೊಳಿಸಿದಂತಾಯ್ತು, ಸಹಿಸಲಾರದಂತಹ ಸಂಕಟವಾದಂತಾಗಿ ನಿಂತಿರುವುದು ಸಾಧ್ಯವಾಗದೆ ಕುಳಿತುಕೊಂಡ, ನೋಡ ನೋಡುತ್ತಿರುವಂತೆಯೆ ಪಾರ್ವತಿಯನ್ನು ಕಳೆದುಕೊಳ್ಳುತ್ತಿರುವೆನಲ್ಲ ಎಂದು ನೆನಪಾಗುತ್ತಲೇ ಸಂಕಟ ಇನ್ನೂ ಜಾಸ್ತಿಯಾಯ್ತು. ಆತ ಮತ್ತೆ ಎದ್ದುನಿಂತ. ಇಲ್ಲ



ಏನಾದರೂ ಮಾಡಲೇಬೇಕು. ನಲ್ವತ್ತೆಂಟು ಗಂಟೆಗಳ ಸಮಯಾವಕಾಶವಿದೆ ತನಗೆ. ಈಗಲೂ ಸಮಯ ಮೀರಿಲ್ಲ. ಹುಬ್ಬಳ್ಳಿಯತನಕ ಬಸ್ಸೋ ರೈಲೋ ಹಿಡಿದು ಹೊರಟರೆ, ಅದಲ್ಲವಾದರೆ ಹೆದ್ದಾರಿಯಲ್ಲಿ ಪ್ರಯಾಣಿಸುವ ಲಾರಿಗಳಿದ್ದೇ ಇವೆಯಲ್ಲ. ಏಳೆಂಟು ತಾಸು ಮುಂಚಿತವಾಗಿ ಆ ಊರನ್ನು ತಲುಪುವಂತಾದರೆ ಸಾಕು. ಮೊದಲು ಪಾರ್ವತಿಯನ್ನು ನೋಡುತ್ತೇನೆ. ಅವಳು ಗಟ್ಟಿಯಾಗಿ ತನ್ನ ಜೊತೆ ನಿಂತರೆ ಸಾಕು, ಮತ್ತೆಲ್ಲ ಹನ್ನು ಹೇಗೆ ನಿಭಾಯಿಸಬೇಕು ಎನ್ನುವುದು ತನಗೆ ಗೊತ್ತು.

ಪಾರ್ವತಿ ಹೆಸರಿನ ಆ ಹುಡುಗಿ ತನಗೆ ಪರಿಚಯವಾದದ್ದು ಚಿಕ್ಕಮ್ಮನ ಮನೆಯಲ್ಲಿದ್ದುಕೊಂಡು ಕಾಲೇಜು ಓದುತ್ತಿದ್ದ ದಿನಗಳಲ್ಲಿ. ಹೇಮಾನ ಓರಿಗೆಯ ಅವಳದೇ ವಯಸ್ಸಿನ ಆ ಹುಡುಗಿ ನೋಡಲು ತುಂಬಾ ಮುದ್ದಾಗಿರುವಷ್ಟೇ ಸಂಕೋಚದ ಸ್ವಭಾವದವಳೂ ಆಗಿದ್ದಳು. ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡ, ಇದ್ದೊಬ್ಬ ಅಕ್ಕನನ್ನು ಅಯೋಗ್ಯನೊಬ್ಬನಿಗೆ ಧಾರೆಯೆರೆದು ಕೊಟ್ಟು ವಯಸ್ಸಾದ ತಾಯಿಯೊಂದಿಗೆ ಯಾವ ನಿಶ್ಚಿತ ಆದಾಯವೂ ಇಲ್ಲದೆ ಗುಡಿಸಲಿನಂಥದೆ ಪುಟ್ಟದೊಂದು ಮನೆಯಲ್ಲಿ ನಾಲ್ಕೈದು ಗದ್ದೆ ತುಂಡುಗಳ, ಹೊಲಿಗೆ ಕೆಲಸ ಮಾಡಿ ಅಷ್ಟಿಷ್ಟು ಸಂಪಾದಿಸುತ್ತ ಹೇಗೋ ಬದುಕುವ ಜೀವನಕ್ಕೆ ಒಗ್ಗಿಕೊಂಡವಳು. ತಾನವಳನ್ನು ಮೊಟ್ಟ ಮೊದಲ ಸಲ ನೋಡಿದ, ಮೊದಲ ನೋಟದಲ್ಲೇ ತಾನವಳ ರೂಪಕ್ಕೆ ಸೋತು ಹೋದ. ಆ ಘಳಿಗೆ ಮೈಯಲ್ಲೆಲ್ಲ ಒಂದು ಬಗೆಯ ಬೆಚ್ಚನೆ ಪ್ರವಾಹ ಹರಿದಂತಾಗಿ ಎಲ್ಲಿಲ್ಲದ ಲಹರಿಯುಂಟಾಯ್ತು. ತನಗರಿವಿಲ್ಲದೆ ಯಾವದೋ ಸಿನಿಮಾ ಹಾಡಿನ ಸೊಲ್ಲು ಸಿಳ್ಳಿನ ರೂಪದಲ್ಲಿ ಹೊರಬಂತು. ಮಳೆ ಸುರಿಯುವದು ನಿಂತಿರದಿದ್ದರೂ ಅದರಿಂದೇನೂ ಆತಂಕವಾದಂತೆ ಅನ್ನಿಸಲಿಲ್ಲ, ಬಹುಶಃ ಎಲ್ಲವೂ ಸುಖಾಂತವಾಗಿಯೇ ಮುಗಿಯುವಂತಿದೆ.

ಹೇಮಾ ಬರೆದ ಪತ್ರ ಅಂಚೆಯಲ್ಲಿ ಲೇಟಾಗದೆ ಮೂರನೆಯ ದಿನಕ್ಕೆ ಬಂದುದು, ಪೋಸ್ಟ್‌ಮನ್ ಬಂದಾಗ ತಾನು ರೂಮಿನಲ್ಲೇ ಇದ್ದದ್ದು, ಪತ್ರ ಸಿಗುತ್ತಲೇ ಬ್ಯಾಗಿನಲ್ಲಿ ಎರಡು ಜೊತೆ ಬಟ್ಟೆ ಸೇರಿಸಿ ಬಸ್—ಸ್ಟ್ಯಾಂಡಿಗೆ ಧಾವಿಸಿ ಬಂದಾಗ ಪ್ರಯಾಸವಿಲ್ಲದೆ ಬೆಳಗಾಂಗೆ ಹೊರಟು ನಿಂತ ಬಸ್ಸು ಸಿಕ್ಕಿದುದು, ಅಲ್ಲಿಂದ ಲಾರಿ ಹಿಡಿದು ಹೊರಟುಬಂದುದು ತನ್ನೆದುರು ಇನ್ನೂ ಸುಮಾರು ಹದಿನೆಂಟು ತಾಸುಗಳ ಅವಧಿ ಬಾಕಿಯಿದ್ದುದು. ಮತ್ತೆ ಪಾರ್ವತಿ ನೆನಪಾದಳು. ಈ ಹುಡುಗಿ ಇದನ್ನೆಲ್ಲ ತನಗೇಕೆ ಮೊದಲೇ ಬರೆಯಲಿಲ್ಲ? ಅಥವಾ ಹೇಮಾ ಬರೆದಂತೆ ಇದೆಲ್ಲ ಯಾವ ಮುನ್ಸೂಚನೆಯನ್ನೂ ನೀಡದೆ ದಿಢೀರೆಂದು ನಿಶ್ಚಯಿಸಿದ ಆ ನೀಚನ ಕಾರಸ್ಥಾನವೋ! ಈ ಹೊತ್ತಿನಲ್ಲಿ ಅವಳ ಮನಸ್ಸಿನಲ್ಲಿ ಏನೇನೆಲ್ಲ ಗೊಂದಲಗಳಿದ್ದಿರಬಹುದು, ಏನೇನೆಲ್ಲ ಯೋಚಿಸುತ್ತಿದ್ದಿರಬಹುದು ಎಂಬುದು ನೆನಪಾಗುತ್ತಲೇ ಆತ ಕುಳಿತಲ್ಲೇ ಚಡಪಡಿಸಿ ಕ್ಯಾಬಿನ್ನಿನ ಮಂದ ಬೆಳಕಿನಲ್ಲಿ ಮುಂಗೈಯ ವಾಚನ್ನು ಇನ್ನೊಮ್ಮೆ ನೋಡಿಕೊಂಡ.

ಸರಿಯಾಗಿ ಕಾಣಿಸಲಿಲ್ಲ. ಆದರೆ ಆತನ ಚಡಪಡಿಕೆಯನ್ನು ಗಮನಿಸಿದ ಡ್ರೈವರ್ "ಏಳೂ ಕಾಲು ಸಾರ್. ಇನ್ನರ್ಧ ಗಂಟೆಗೆಲ್ಲ ನಿಮ್ಮನ್ನ ಅಂಬೈಲಲ್ಲಿ ಬಿಡ್ತೇನೆ" ಎಂದ. ಆತ ಏನೂ ಹೇಳಲಿಲ್ಲ.

ಆ ಅಯೋಗ್ಯ ನೋಡಲು ಹೇಗಿದ್ದಿರಬಹುದು, ಪಾರ್ವತಿ ಅವನ ಅವಾಂತರಗಳಿಂದಾಗಿ ಎಷ್ಟೆಲ್ಲ ಘಾಸಿಗೊಂಡಿದ್ದಿರಬಹುದು ಎಂಬುದು ನೆನಪಾಗುತ್ತಲೇ ಮತ್ತೆ ಚಡಪಡಿಕೆ ಸುರುವಾಯ್ತು.

ಚಿಕ್ಕಮ್ಮನ ಮನೆಯಲ್ಲಿದ್ದಾಗ ಆತನ ಕುರಿತು ಬಹಳಷ್ಟು ಸಂಗತಿಗಳನ್ನು ಕೇಳಿದ್ದೆ. ಅವನ ಅವ್ಯವಹಾರಗಳು, ಕುಡಿತ, ಹೆಂಗಸರ ಖಯಾಲಿ ಮುಂತಾದವುಗಳ ಕುರಿತಾಗಿ, ಅಕ್ಕ ಬದುಕಿದ್ದಾಗಲೇ ತಂಗಿಯ ಮೇಲೂ ಅವನಿಗೆ ಒಂದು

ಕಣ್ಣಿತ್ತಂತೆ. ಹೇಮಾ ಹೇಳುತ್ತಿದ್ದಳಲ್ಲ. ಆದರೆ ಪಾರ್ವತಿ ಇಂಥ ವಿಷಯಗಳ ಕುರಿತು ತನ್ನೆದುರು ಎಂದೂ ಚಕಾರ ಎತ್ತಿದವಳಲ್ಲ. ತುಂಬಾ ಬುದ್ಧಿವಂತೆ. ಯಾವೊಂದು ವಿಷಯವಾಗಿ ತಾನವಳನ್ನು ಹೊಗಳಿದರೆ 'ಇದೆಲ್ಲ ನಿಮಗೇ ಸಲ್ಲಬೇಕು. ನಿಮ್ಮಿಂದಲೇ ಅಲ್ಲವ ಇದನ್ನೆಲ್ಲ ನಾನು ಕಲಿತದ್ದು. ನೀವೇ ಅಲ್ಲವ ನನ್ನ ಗುರು?' ಎನ್ನುತ್ತಿದ್ದಳು. ಆಗವಳ ಕಣ್ಣುಗಳಲ್ಲಿ ಎಂಥ ಹೊಳಪಿರುತ್ತಿತ್ತು! ಎಂಥ ಧನ್ಯತೆಯ ಭಾವ ವಿರುತ್ತಿತ್ತು ಅವಳ ಮೋರೆಯ ಮೇಲೆ! ನಿಜ ಹೇಳಬೇಕೆಂದರೆ ಆ ಕಣ್ಣುಗಳಿಂದಾಗಿಯೇ ಅಲ್ಲವಾ ತಾನವಳಿಗೆ ಮನಸೋತದ್ದು. ಎಲ್ಲಿಗೇ ಹೋದರೂ ಎಂಥದೇ ಕೆಲಸವಿದ್ದರೂ ತಾನು ಕಾಲೇಜಿನಿಂದ ಸಂಜೆ ಮನೆಗೆ ಹಿಂತಿರುಗುವ ಹೊತ್ತಿಗೆಲ್ಲ ಎಷ್ಟು ಕರಾರುವಾಕ್ಕಾಗಿ ಹಾಜರಾಗುತ್ತಿದ್ದಳು ಅವಳು ಹೇಮಾಳ ಬಳಿಗೆ. ತನ್ನನ್ನು ನೋಡುತ್ತಲೇ ಯಾವ ರೀತಿ ಅರಳಿಕೊಳ್ಳುತ್ತಿದ್ದಳು. ತನ್ನೆದುರಿಗಿದ್ದಾಗ ಹೇಗೆ ಬೇರೆಯೆ ಆದ ವ್ಯಕ್ತಿತ್ವವನ್ನು ಹೊಂದಿದವಳಾಗಿರುತ್ತಿದ್ದಳು. ಆದರೆ ಎಷ್ಟು ಬೇಗ ಮುಗಿದು ಹೋದವು ಆ ನಾಲ್ಕು ವರ್ಷಗಳು. ಕೊನೆಗೊಮ್ಮೆ ತನಗೆ ನೌಕರಿಯ ನೆವದಲ್ಲಿ ಚಿಕ್ಕಮ್ಮನ ಮನೆಯಿಂದ ಅಗಲಲೇಬೇಕಾಗಿ ಬಂದಾಗ ಎಂಥ ಹಿಂಸೆ ಅನುಭವಿಸಿದಳು ಆ ಹುಡುಗಿ. ಮೊದ ಮೊದಲು ಬರುತ್ತಿದ್ದ ಹೇಮಾಳ ಪ್ರತಿ ಪತ್ರದ ತುಂಬೆಲ್ಲ ಅವಳ ನೋವಿನ, ಅವಳು ಅನುಭವಿಸುತ್ತಿದ್ದ ಏಕಾಂಗಿತನ ತುಂಬಿಕೊಂಡಿರುತ್ತಿದ್ದವಲ್ಲ. ತಾನೇಕೆ ಪಾರ್ವತಿಯ ಕುರಿತಾದ ತನ್ನ ಒಲವನ್ನು ಪ್ರಕಟಪಡಿಸಲಿಲ್ಲ. ಒಂದು ನೆಲೆಗೆ ಹೋಗಿ ಮುಟ್ಟುವ ತನಕ ಬೇಡವೆಂದು ಸುಮ್ಮನಿದ್ದುದೇ ಕಾರಣವಾಗಿದ್ದರೆ ನೌಕರಿ ದೊರೆತ ಮೇಲಾದರೂ ಪಾರ್ವತಿಯ ಅಮ್ಮನಿಗೆ ಇದನ್ನೆಲ್ಲ ಬರೆದು ತಿಳಿಸಬಹುದಾಗಿತ್ತಲ್ಲ. ಅದು ಬೇಡವೆಂದರೆ ಹೋಗಲಿ, ಚಿಕ್ಕಮ್ಮ ಚಿಕ್ಕಪ್ಪರಿಗಾದರೂ ಸೂಕ್ಷ್ಮವಾಗಿ ತಿಳಿಸಬಹುದಾಗಿತ್ತಲ್ಲ...

ಆತನ ಚಡಪಡಿಕೆ ಮತ್ತೆ ತೀವ್ರವಾಗತೊಡಗುತ್ತಲೇ ಡ್ರೈವರ್ ಕ್ಯಾಬಿನ್ನಿನಲ್ಲಿ ಲೈಟು ಹಾಕಿ "ಆಯ್ತು ಮಹಾರಾಯರೆ, ನೀವಿಳಿಯಬೇಕಾದ ಊರು ಬಂತು. ಓ ಅಲ್ಲಿ ಚಾ ದುಕಾನ ಕಾಣಿಸ್ತಿದೆಯಲ್ಲ; ಅಲ್ಲಿ ನಿಲ್ಲಿಸ್ತೇನೆ, ಇಳಕೊಳ್ಳಿ. ಮಳೆಯೇನೋ ಕಣ್ಣು ಮುಚ್ಚಾಲೆಯಾಡ್ತಿದೆ. ನೀವು ಹೋಗಬೇಕಾದ ಊರು ಅದೇನೋ ಹೆಸರು ಹೇಳಿದ್ರಲ್ಲ. ಅವರನ್ನ ಕೇಳಿ ತಿಳಕೊಳ್ಳಿ ಹ್ಯಾಗೆ ಹೋಗೋದು ಅಂತ. ಯಾರನ್ನಾದರೂ ಜೊತೇಲಿ ಕರಕೊಂಡು ಹೋಗಿ. ಅಪರಿಚಿತ ಸ್ಥಳ. ಒಂಟಿಯಾಗಿ ಹೋಗಬೇಡಿ" ಎನ್ನುತ್ತ ಟ್ರಕ್ಕಿನ ವೇಗ ಕಮ್ಮಿ ಮಾಡಿದ.

ಡ್ರೈವರನ ಆತ್ಮೀಯ ಮಾತುಗಳಿಂದ ಆತನ ಹೃದಯ ತುಂಬಿ ಬಂತು. ಕಾಲು ಬುಡದಲ್ಲಿದ್ದ ಬ್ಯಾಗನ್ನು ಹೆಗಲಿಗೇರಿಸಿ "ನಮಸ್ಕಾರ ತುಂಬಾ ಉಪಕಾರವಾಯ್ತು. ಈ ಪ್ರಯಾಣದ ಸಂದರ್ಭವನ್ನ ನಾನು ಎಂದೂ ಮರೆಯೋಲ್ಲ. ಅದೃಷ್ಟವಿದ್ದರೆ ಮತ್ತೊಂದಾದರೂ ಖಂಡಿತ ಭೆಟ್ಟಿಯಾಗೋಣ" ಎನ್ನುತ್ತ ಕೆಳಕ್ಕಿಳಿದು ಮಳೆ ಬೀಳುತ್ತಿದ್ದುದರಿಂದ ಓಡಿಹೋಗಿ ಚಾದಂಗಡಿಯೊಳಕ್ಕೆ ತೂರಿಕೊಂಡ.

*

ಮಂಚಳ್ಳಿಯ ಆ ಪುಟ್ಟ ದೇವಸ್ಥಾನ ಹತ್ತಿರವಾದಂತೆ ಆತನ ಆತಂಕ ಉದ್ವೇಗಗಳು ವಿಪರೀತವಾಗುತ್ತ ಹೋದವು. ತನಗೇನಾದರೂ ಆಗಿಬಿಡಬಹುದು ಅಥವಾ ತನ್ನಿಂದೇನಾದರೂ ಪ್ರಮಾದ ಜರುಗಿದರೂ ಜರುಗಬಹುದು ಎಂದೆಲ್ಲ ಅವನಿಗೆ ಅನ್ನಿಸತೊಡಗಿತು. ಕಳೆದ ಎರಡು ದಿನಗಳ ತನ್ನ ದೀರ್ಘ ಪ್ರಯಾಣದಲ್ಲಿ ಆತ ಇದನ್ನೆಲ್ಲ ಯೋಚಿಸಿರಲಿಲ್ಲ. ಹೀಗೂ ನಡೆದೀತು ಎಂದು ಆತನ ಕಲ್ಪನೆಗೆ ನಿಲುಕಿರಲಿಲ್ಲ.

ಅರಬೈಲ ಘಟ್ಟದ ಬುಡದಲ್ಲಿರುವ ಆ ಪುಟ್ಟ ಊರಿನಲ್ಲಿ ಲಾರಿಯಿಂದ ಇಳಿಯುವ ತನಕ ಆತ ಬೇರೆಯೇ ಆದ ವ್ಯಕ್ತಿಯಾಗಿದ್ದ. ಮಳೆಯಿಂದ ರಕ್ಷಣೆ ಪಡೆಯಲು ಚಾದಂಗಡಿಯೊಳಕ್ಕೆ ತೂರಿ-

ಕೊಂಡಾಗ ಆತನಿಗೆ ಮಂಚಳ್ಳಿಯ ದೇವಸ್ಥಾನದಲ್ಲಿ ನಾಳೆ ನಡೆಯಲಿದೆಯೆಂದು ತಾನು ಭಾವಿಸಿದ ಮದುವೆಯ ಕುರಿತು ಹಲವು ಸಂಗತಿಗಳು ಗೊತ್ತಾದವು. ನಾಳೆ ಅಲ್ಲಿ ಯಾವ ಮದುವೆಯೂ ಇಲ್ಲ. ನಾಳೆ ನಡೆಯುವದೆಂದು ಪ್ರಚುರಪಡಿಸ-ಲಾದ ಮದುವೆ ಇಂದೇ ಮುಗಿದು ಹೋಗಿದೆ. ವಧೂವರರು ಈ ಭಾಗದವರಲ್ಲ. ವರನಾದವನಿಗೆ ಇದು ಎರಡನೆಯ ಮದುವೆ. ಬಹಳ ವರ್ಷಗಳ ಹಿಂದೆ ಇಲ್ಲೆಲ್ಲೋ ಯಾರೋ ಭಟ್ಟರ ಮನೆಯಲ್ಲಿ ಕೆಲಸಕ್ಕಿದ್ದನಂತೆ ಆತ. ಹಾಗಾಗಿಯೇ ಅವನಿಗೆ ಈ ಊರು ಪರಿಚಯವಾದದ್ದು.

ಇದೆಲ್ಲ ತುಂಬಾ ಲೆಕ್ಕಾಚಾರ ಮಾಡಿ, ಅಳೆದೂ ಸುರಿದೂ ನಡೆಸಿದ ಮದುವೆಯಾಗಿತ್ತು. ಮದುವೆ ಯಾರಿಂದಲೂ, ಯಾವುದೇ ಕಾರಣಕ್ಕಾಗಿಯೂ ನಿಲ್ಲಬಾರದೆಂದೇ ಇಷ್ಟೆಲ್ಲ ನಾಟಕವಾಡಿದುದಂತೆ. ಮದುವೆಗೆಂದು ವರನ ಜೊತೆಗೆ ಬಂದವರ ಸಂಖ್ಯೆ ಆರೇಳಕ್ಕಿಂತ ಜಾಸ್ತಿಯಾಗಿರಲಿಲ್ಲವಂತೆ. ಇಷ್ಟ ರೊಳಗಾಗಿ ಊರಿಗೆ ವಾಪಸು ಹೋಗಬೇಕಾ ದವರೆಲ್ಲ ಮಳೆಯ ದೆಸೆಯಿಂದಾಗಿ ಇಂದು ಇಲ್ಲೇ ಉಳಿಯಬೇಕಾಯ್ತಂತೆ ಮುಂತಾ.

ಆತನ ಹೃದಯ ಒಂದೇ ಸಮನೆ ಮೊರೆಯಿಡು ತ್ತಿತ್ತು: 'ದೇವರೇ, ಇದೆಲ್ಲ ಸುಳ್ಳಾಗಿರಲಿ. ನಾನವನನ್ನು ಎದುರಿಸುತ್ತೇನೆ. ನಾನವನಿಗೆ ಪಾಠ ಕಲಿಸುತ್ತೇನೆ.' ಆತ ದೇವಸ್ಥಾನ ತಲಪಿದ. ದೇವಸ್ಥಾನಕ್ಕೆ ಹೊಂದಿಕೊಂಡ ಪುಟ್ಟ ಚಂದ್ರ ಸಾಲೆಯ ತಣ್ಣನೆಯ ನೆಲದಮೇಲೆ ಚಳಿಯಿಂದ ರಕ್ಷಣೆ ಪಡೆಯಲು ಸೀರೆಯ ಸೆರಗನ್ನೇ ಮೈತುಂಬ ಹೊದ್ದು ಮುದುಡಿ ಕುಳಿತಿದ್ದ ಒಂದಿಷ್ಟು ಹೆಂಗಸರು ಚಂದ್ರಸಾಲೆಯ ಬಾಗಿಲ ಬಳಿ ಮಳೆ-ಯಿಂದ ತೊಯ್ದು ಕೈಕಾಲು ಬಟ್ಟೆ ಕೆಸರಾದ ಕೆದರಿದ ತಲೆಯ ಅಪರಿಚಿತ ವ್ಯಕ್ತಿಯನ್ನು ನೋಡಿ ಅರ್ಥವಾಗದೆ "ಎಲ್ಲಾಯ್ತು? ಯಾರು ಬೇಕಾ ಗಿತ್ತು?" ಎಂಬಂತೆ ಪ್ರಶ್ನೆಯ ಮುಖಮಾಡಿ ಎದ್ದು ನಿಂತಾಗ ಆತ ಒಳಗೆ ಹೆಜ್ಜೆ ಇಡುತ್ತ "ಪಾರ್ವತೀ" ಎಂದು ಕೂಗಿದ. ತನ್ನ ದನಿ ತನಗೇ ಅಪರಿಚಿತ ವಾಗುತ್ತಿದೆ. ತನಗೆ ತಾನೇ ಅಪರಿಚಿತನಾಗುತ್ತಿ ದ್ದೇನೆ ಅನ್ನಿಸಿತು.

ಗುಂಪಿಗೆ ಅಷ್ಟು ದೂರದಲ್ಲಿ ಗೋಡೆಗೆ ಮುಖ ಮಾಡಿ ಕುಳಿತು ಮದುವಣಗಿತ್ತಿಯ ಅಲಂಕಾರದ ಲ್ಲಿದ್ದ ಆ ಹುಡುಗಿ ಧಿಗ್ಗನೆದ್ದು ಆತನೆದುರು ಬರುತ್ತ "ನೀವು...ನೀವು ಈಗ ಬಂದಿರಾ? ಎಲ್ಲ ಮುಗಿದ ಮೇಲೆ ಬಂದಿರಾ?" ಎಂದವಳಿಗೆ ಮತ್ತೇ ನನ್ನೂ ಹೇಳಲು ಸಾಧ್ಯವಾಗದೆ ಮುಖ ಮುಚ್ಚಿ ಕೊಂಡು ಅಳತೊಡಗಿದಾಗ ಆತ "ಪಾರ್ವತೀ ಇದೆಲ್ಲ ನಿಜವಾ? ನಾನು ಕೇಳಿದ್ದು? ಈಗ ಇಲ್ಲಿ ನಾನು ನೋಡುತ್ತಿರುವದು? ಇದೆಲ್ಲ ನಿಜವಾ ಪಾರ್ವತೀ?" ಎಂದ. ಇದ್ದಕ್ಕಿದ್ದಂತೆ ಆತನ ಗಂಟಲು ಕಟ್ಟಿಕೊಂಡಿತು. ಸೆಲೆಯೊಡೆದಂತೆ ತುಂಬಿ ತುಂಬಿ ಬರುತ್ತಿದ್ದ ಕಣ್ಣುಗಳನ್ನು ಮತ್ತೆ ಮತ್ತೆ ಒರೆಸಿಕೊಳ್ಳುತ್ತ ಅವಳು ಹೇಳಿದಳು. "ನಾನು ಯಾರಿಗೂ ಬೇಡಾದವಳಾದೆ. ಕೊನೆಗೆ ನಿಮಗೂ. ನಿಮಗಿದನ್ನೆಲ್ಲ ಮುಂಚಿತವಾಗೇ ತಿಳಿಸಿದೆನಾದರೂ ನೀವು ನನ್ನನ್ನು ರಕ್ಷಿಸಲು ಬರಲಿಲ್ಲ. ನಾನು ಹಾಳಾಗಿ ಹೋದೆ. ನನ್ನ ಸರ್ವನಾಶವಾಯ್ತು..."

ಆತ ತಿರುಗಿ ನಿಂತ. ದೇವಸ್ಥಾನದ ಮೆಟ್ಟಲು ಗಳನ್ನು ಒಂದೊಂದಾಗಿ ಇಳಿಯುತ್ತ ಮತ್ತೆ ಮೊದಲಿನ ಕಾಲುಹಾದಿಗೇ ಬಂದು ನಿಂತ. ಆ ಹುಡುಗಿ ಬಹುಶಃ ಅಳುತ್ತ ತನ್ನ ಹಿಂದು ಹಿಂದೇ ಬಂದಿರಬೇಕು. ಹಿಂತಿರುಗಿ ಒಮ್ಮೆ ಅವಳನ್ನು ಕೊನೆಯ ಬಾರಿಗೆ ನೋಡುವುದೆಂದುಕೊಂಡವನಿಗೆ ಬೇಡವೇ ಬೇಡ ಅನ್ನಿಸಿತು.

ಎದುರು ದಿಕ್ಕಿನಿಂದ ಹೊಡೆಯುತ್ತಿದ್ದ ಮಳೆಯ ಇರುಚಲನ್ನು ಲೆಕ್ಕಿಸದೆ ಕೆಸರು ತುಂಬಿದ ಆ ಕಾಲು ಹಾದಿಯುಲ್ಲಿ ಆತ ಮೈಯಲ್ಲಿ ಆವೇಶ ಬಂದವರಂತೆ ಹೆಜ್ಜೆಹಾಕುತ್ತ ಕತ್ತಲೆಯಲ್ಲಿ ಕರಗಿ ಹೋದ. ✪



ಈ ಕಬ್ಬಿಣದ ಕಂಬಕ್ಕೆ ತುಕ್ಕು ಹಿಡಿಯುವುದಿಲ್ಲ!

# ವಿಷ್ಣುಧ್ವಜ

ಚಿತ್ರ ಲೇಖನ : **ಎಂ. ಶಶಿಧರ**

ದೆಹಲಿಯ ಕುತುಬ್‌ಮಿನಾರನ್ನು ನೋಡಲು ಹೋಗುವವರು, ಅದರ ಪಕ್ಕದಲ್ಲಿರುವ ಕಬ್ಬಿಣದ ಸ್ತಂಭವನ್ನೂ ನೋಡುವರು. ಸುಮಾರು ಏಳು ಮೀಟರ್ ಎತ್ತರದ ಈ ಸ್ತಂಭವು ಕುತುಬ್‌ಮಿನಾರಿನ ಗಗನಚುಂಬಿ ನಿಲುವಿನೆದುರು ಆಕರ್ಷಕವಾಗಿ ಕಾಣದಿರಬಹುದು. ಆದರೆ ಬಂದವರು ತಮ್ಮ ಅದೃಷ್ಟವನ್ನು ಪರೀಕ್ಷಿಸಲು ಕಂಭಕ್ಕೆ ಒರಗಿ ನಿಂತು, ಹಿಮ್ಮುಖವಾಗಿ ಕೈಗಳನ್ನು ಕಂಭಕ್ಕೆ ಬಳಸಿ ಅದೃಷ್ಟವನ್ನು ಪರೀಕ್ಷಿಸುವರು. ಕೈ ಬೆರಳುಗಳು ತಗುಲಿದರೆ ಅದೃಷ್ಟವಂತರೆಂದು ನಂಬಿಕೆಯಿದೆ. ಪುರಾತನ ಕಾಲದಲ್ಲೇ ಭಾರತದಲ್ಲಿ ಪ್ರಚಲಿತವಿದ್ದ ಲೋಹವಿದ್ಯೆಯ ಒಂದು ಕುರುಹು ಈ ಸ್ತಂಭವೆಂದು ಬಹು ಮಂದಿಗೆ ತಿಳಿದಿರಲಿಕ್ಕಿಲ್ಲ.

ಈ ಸ್ತಂಭವು ಪ್ರಖ್ಯಾತವಾಗಿರುವುದು ತನ್ನ ತುಕ್ಕು ಹಿಡಿಯದ ಗುಣದಿಂದಾಗಿ; ತನ್ನ ಮೂಲರೂಪವನ್ನು ಅದು ಇನ್ನೂ ಉಳಿಸಿಕೊಂಡಿರಲು ಇದೇ ಮುಖ್ಯ ಕಾರಣ. ಭಾರತದ ಹಲವು ಪ್ರದೇಶಗಳಲ್ಲಿ ಪುರಾತನ ಕಬ್ಬಿಣದ ರಚನೆಗಳು ಕಂಡುಬಂದಿದ್ದರೂ ತುಕ್ಕು ಹಿಡಿಯದ ಸ್ತಂಭ ಬೇರೆಲ್ಲೂ ಇಲ್ಲ. ಈ ವಿಶೇಷ ಗುಣವು ಆಧುನಿಕ ಲೋಹವಿದ್ಯೆಯ ಶಾಸ್ತ್ರಜ್ಞರಲ್ಲಿ ಜಿಜ್ಞಾಸೆ ಮೂಡಿಸಿದೆ; ಹಲವು ಸಂಶೋಧನೆಗಳು ನಡೆದಿವೆ. ತುಕ್ಕು ಹಿಡಿಯದಿರಲು ಮುಖ್ಯ ಕಾರಣವೇನೆಂದು ತಿಳಿದುಬಂದರೆ, ಇಂದಿನ ಎಲ್ಲಾ ತುಕ್ಕು ನಷ್ಟವನ್ನು ತಪ್ಪಿಸಬಹುದು! ಲಕ್ಷಾಂತರ ರೂಪಾಯಿ ಲಾಭ ಪಡೆಯಬಹುದು.

ಅರ್ಧ ಮೀಟರಿನಷ್ಟು ನೆಲದಲ್ಲಿ ಹುಗಿಯಲ್ಪಟ್ಟು, ಸುಮಾರು ಏಳು ಮೀಟರು ಎತ್ತರವಿರುವ ಈ ಕಂಭದ ತೂಕ ಸುಮಾರು ಆರು ಟನ್ನು. ತಳದ ವ್ಯಾಸ ಸುಮಾರು ೪೧ ಸೆಂಟಿಮೀಟರಿನಷ್ಟಾದರೆ, ಮೇಲೇರಿದಂತೆ ಕಿರುದಾಗುವ ವ್ಯಾಸ ತುದಿಯಲ್ಲಿ ಸುಮಾರು ಮೂವತ್ತು ಸೆಂಟಿಮೀಟರಿನಷ್ಟಿದೆ. ಸ್ತಂಭದ ತುದಿಯಲ್ಲಿ ಒಂದಷ್ಟು ಅಲಂಕಾರ ರಚನೆಯಿದ್ದು, ಚೌಕ್ ರಚನೆಯಲ್ಲಿ ಕೊನೆಗೊಂಡಿದೆ-ಪ್ರಾಯಶ: ಹಿಂದೆ ಇದರ ತುದಿಯಲ್ಲಿ ಬೇರೇನೋ ರಚನೆ ಇದ್ದಿರಬೇಕು. ಈ ಸ್ತಂಭ ಮೂಲತಃ ಮಥುರಾ ಅಥವಾ ಅಂಬಾಲದಲ್ಲಿತ್ತು. ದೆಹಲಿಗೆ ಬಂದ ಕಾರಣವನ್ನು ಹುಡುಕಿದರೆ, ಗಮನವು ಸ್ತಂಭದ ಮೇಲಿನ ಬರಹದತ್ತ ಸರಿಯುತ್ತದೆ. ಕಂಭದ ಎರಡು ಬರಹಗಳಲ್ಲಿ ಒಂದು ಸಂಸ್ಕೃತದಲ್ಲಿದ್ದು,

ಚಂದ್ರರಾಜನ ವಿಜಯವನ್ನಾಚರಿಸಲು ಸ್ಥಾಪಿಸಲಾದ ವಿಷ್ಣುಧ್ವಜವಿದೆಂದು ಹೇಳುತ್ತದೆ. ವಿಷ್ಣುಪಾದವೆಂಬ ಬೆಟ್ಟದ ಮೇಲೆ, ವಿಷ್ಣು ದೇವಾಲಯದ ಎದುರು ಈ ಸ್ತಂಭ ಇತ್ತು. ಎರಡನೆಯ ಬರಹವು ಕ್ರಿಸ್ತಶಕ ೧೧೫೨ರಲ್ಲಿ ಚೌಹಾಣ ರಾಜ ತೌರ ಅನಂಗಪಾಲ (೨)ನು ದೆಹಲಿ ನಗರವನ್ನು ಪುನಃಶ್ಚೇತನಗೊಳಿಸಿದನೆಂದು ತಿಳಿಸುತ್ತದೆ. ಮೊದಲ ಬರಹವು ತಿಳಿಸುವ ಚಂದ್ರರಾಜನ ಗುರುತು ಸ್ವಲ್ಪ ಅನುಮಾನಮ್ಮ; ಕೆಲವರ ಪ್ರಕಾರ ಚಂದ್ರಗುಪ್ತ (೨) (ಕ್ರಿಸ್ತಶಕ ೩೭೫-೪೧೩)ನು ಆ ರಾಜನಿರಬೇಕೆಂದಾದರೆ, ಇತರ ಕೆಲವರು ರಾಜಸ್ಥಾನದ ಜೋಧಪುರದ ಚಂದ್ರವರ್ಮನು ಆತನಿರಬಹುದೆಂದು ಹೇಳುವರು. ಮಥುರಾ ಅಥವಾ ಅಂಬಾಲದಲ್ಲಿದ್ದ ವಿಷ್ಣುಪಾದ ಬೆಟ್ಟದ ಮೇಲೆ ಸ್ಥಾಪನೆಗೊಂಡಿದ್ದ ಈ ವಿಷ್ಣುಧ್ವಜವು ಬಹುಶಃ ೨ನೇ ತೌರ ಅನಂಗಪಾಲನ ಕಾಲದಲ್ಲಿ ದೆಹಲಿಗೆ ಸ್ಥಳಾಂತರಗೊಂಡಿರಬೇಕು. ಏನಿದ್ದರೂ ಕುತುಬ್‌ಮಿನಾರ್‌ನ್ನು ಕಟ್ಟುವ ಮುಂಚೆಯೇ ಈ ಸ್ಥಳದಲ್ಲಿ ಸ್ತಂಭವು ನಿಂತಿತ್ತೆಂಬುದಕ್ಕೆ ಅದರ ಎದುರಿರುವ ಪೌಳಿಯಲ್ಲಿ ಹಿಂದೂ ವಾಸ್ತು ಶೈಲಿಯೆ ಸಾಕ್ಷಿ.

ಇಷ್ಟು ದೊಡ್ಡ ಗಾತ್ರದ ಕಬ್ಬಿಣದ ಸ್ತಂಭವನ್ನು ಆ ಕಾಲದಲ್ಲಿ ಹೇಗೆ ತಯಾರಿಸಿದರೆಂಬುದು ಮತ್ತೊಂದು ಕುತೂಹಲಕರ ವಿಚಾರ. ತೀರ ಇತ್ತೀಚಿನ ದಶಕಗಳ ತನಕ ಆಧುನಿಕ ವಿಜ್ಞಾನದ ಸಹಾಯದ ಲೋಹವಿದ್ಯೆಯಿಂದ ಅಷ್ಟು ದೊಡ್ಡ ಕಬ್ಬಿಣದ ಕಂಭವನ್ನು ತಯಾರಿಸುವುದು ಕಷ್ಟದ ಮಾತಾಗಿತ್ತು.

ಕಂಭವು ಏಕ ಎರಕ ಅಲ್ಲ; ಹಲವಾರು ಚಿಕ್ಕ ಕಬ್ಬಿಣದ ಚೂರುಗಳನ್ನು ಬಿಸಿ ಮಾಡಿ, ಬಡಿದು ಗಟ್ಟಿಮುಟ್ಟಾದ ದೊಡ್ಡ ತುಂಡನ್ನು ತಯಾರಿಸಲಾಗಿದೆ. ಇದರಿಂದ ಒಂದು ಲಾಭವೆಂದರೆ, ಸುಮಾರಾದ ಶಾಖದಲ್ಲೇ ಕಬ್ಬಿಣದ ತುಂಡುಗಳನ್ನು ಸೇರಿಸಬಹುದು; ಲೋಹವನ್ನು ಕರಗಿಸುವ ಪ್ರಮೇಯವು ಇಲ್ಲ. ಈ ಬಡಿತದ ವಿಧಾನವನ್ನು ಬಡಿತ ಲೋಹವಿದ್ಯೆ (ಪೌಡರ್ ಮೆಟಲರ್ಜಿ) ಎನ್ನುವರು. ಈ ವಿಧಾನ ಆ ಕಾಲದಲ್ಲೇ ಬಳಕೆಯಲ್ಲಿತ್ತೆಂಬುದೂ ಈಗಿನ ಶಾಸ್ತ್ರಜ್ಞರಿಗೆ ವಿಸ್ಮಯದ ವಿಚಾರ. ಭಾರತದಲ್ಲಿ ಉತ್ತಮ ಗುಣ ಮಟ್ಟದ ಕಬ್ಬಿಣದ ಅದಿರು ಹೇರಳವಾಗಿ ದೊರೆಯುವುದರಿಂದ, ಕಬ್ಬಿಣದ ಲೋಹವಿದ್ಯೆಯು ಪುರಾತನ ಕಾಲದಿಂದಲೂ ಭಾರತದಲ್ಲಿ ಬಳಕೆಯಲ್ಲಿತ್ತು. (ಕ್ರಿಸ್ತಪೂರ್ವ ೪೦೦ರಲ್ಲಿ ಬರೆಯಲ್ಪಟ್ಟ ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ ಲೋಹದ ಅದಿರನ್ನು ತೆಗೆಯುವ ಪ್ರಸ್ತಾಪ ಬರುತ್ತದೆ) ಸುಮಾರು ಕ್ರಿಸ್ತಪೂರ್ವ ೧೦೦೦ ದಲ್ಲಿ ಭಾರತಕ್ಕೆ ಬಂದರೆನ್ನಲಾದ ಆರ್ಯಜನಾಂಗವು ಈ ವಿದ್ಯೆಯನ್ನು ಇಲ್ಲಿಗೆ ತಂದಿರಬೇಕು. ದಕ್ಷಿಣ ಭಾರತದಲ್ಲಿ ತಯಾರಾದ ಉಕ್ಕು (ವೂಟ್ಸ್) ವಿದೇಶಗಳಿಗೆ ಕತ್ತಿಗಳ ತಯಾರಿಕೆಗೆಂದು ರಫ್ತಾಗುತ್ತಿದ್ದ ಕಾಲವೊಂದಿತ್ತು. (ಆಂಗ್ಲದ 'ವೂಟ್ಸ್' ಪದದ ಮೂಲ ಬಹುಶಃ ಕನ್ನಡದ 'ಉಕ್ಕು' ಇರಬೇಕೆಂದು ಮೈಸೂರು ವಿ. ವಿ. ದ ಇಂಗ್ಲಿಷ್-ಕನ್ನಡ ನಿಘಂಟು ಹೇಳುತ್ತದೆ.)

ದೆಹಲಿಯ ಶಿಲಾಸ್ತಂಭದ ಉಕ್ಕು ಹಿಡಿಯದಿರುವ ಗುಣದ ಕುರಿತು ಹಲವಾರು ವಾದಗಳು ಮಂಡಿಸಲ್ಪಟ್ಟಿವೆ. ಅವುಗಳಲ್ಲಿ ಎರಡು ಗುಂಪುಗಳಿವೆ. ಒಂದರ ಪ್ರಕಾರ ಕಬ್ಬಿಣದ ರಚನೆಯೇ ಆ ಗುಣಕ್ಕೆ ಕಾರಣವೆಂದಾದರೆ, ಇನ್ನೊಂದು ವಾದ ಗುಂಪು ದೆಹಲಿಯ ವಾತಾವರಣವೇ ಅದಕ್ಕೆ ಕಾರಣವೆಂದು ವಾದಿಸುತ್ತದೆ. ಕಂಭದ ಚಿಕ್ಕ ಚೂರುಗಳನ್ನು ರಾಸಾಯನಿಕವಾಗಿ ಪರೀಶೀಲಿಸಿದಾಗ, ಆಧುನಿಕ ಕಬ್ಬಿಣಕ್ಕಿಂತ ಭಿನ್ನವಿದ್ದು, ಮ್ಯಾಂಗನೀಸ್ ಅಂಶವೇ ಅದರಲ್ಲಿ ಇರದಿದ್ದದ್ದು ಕಂಡುಬಂತು; ಮತ್ತು ಗಂಧಕದ ಅಂಶವು ಜಾಸ್ತಿಯಾಗಿತ್ತು. ಇದರಿಂದಲೇ ತುಕ್ಕು ಹಿಡಿಯದಿರುವದು ಎಂದು ಒಂದು ವಾದ. ಆಧುನಿಕ ಕುಲುಮೆಗಳಲ್ಲಿ ಈ ರೀತಿಯ ಕಬ್ಬಿಣದ



ವಿಷ್ಣುಧ್ವಜ. ಒಳಚಿತ್ರದಲ್ಲಿ ಕಂಬಕ್ಕೆ ಒರಗಿನಿಂತು ಅದೃಷ್ಟ ಪರೀಕ್ಷೆ. ಕೈಬೆರಳುಗಳು
ಒಂದಕ್ಕೊಂದು ತಗುಲಿದರೆ ಅದೃಷ್ಟಶಾಲಿ ಎಂಬ ನಂಬಿಕೆ.

ತಯಾರಿಕೆ ಕಷ್ಟಸಾಧ್ಯವೆನ್ನಲಾಗಿದೆ.

ಇನ್ನೊಂದು ವಾದವೆಂದರೆ, ವಿಷ್ಣುಧ್ವಜವಾಗಿ ವಿಷ್ಣುಪಾದ ಬೆಟ್ಟದಲ್ಲಿ ಇದ್ದಾಗ ದಿನವೂ ಇದರ ತುದಿಯಲ್ಲಿ ಹಚ್ಚಿದ ದೀಪದ ಎಣ್ಣೆಯಿಂದ ಅಥವಾ ಇತರ ಸಾಂಪ್ರದಾಯಿಕ ಆಚರಣೆಗಳಿಂದ ಕಂಭದ ಮೇಲ್ಮೈ ಪೂರ್ತಿಯಾಗಿ ಎಣ್ಣೆಯಿಂದ ಸವರಲ್ಪಟ್ಟು ಧೂಳು ತುಂಬಿ ಶತಮಾನಗಳ ಪೊರೆಯಾಗಿರಬಹುದು—ಆದರಿಂದಾಗಿ ತುಕ್ಕು ಹಿಡಿಯುತ್ತಿಲ್ಲ ಎಂದು. ಜೊತೆಗೆ, ಆರಂಭದಲ್ಲಿ ಸ್ವಲ್ಪ ತುಕ್ಕು ನಿರ್ಮಾಣವಾಗಿ, ಶತಮಾನಗಳು ಕಳೆದಂತೆ ತುಕ್ಕು ನಿರ್ಮಾಣದ ಪ್ರಮಾಣ ಕಡಿಮೆಯಾಗಿ, ಬಹುಮಟ್ಟಿಗೆ ಸೊನ್ನೆಗಿಳಿದಿದೆಯೆಂದು ಇನ್ನೊಂದು ವಾದ. ದೆಹಲಿಯ ಶುಷ್ಕ ವಾತಾವರಣವೇ ಇದರ ತುಕ್ಕು ಹಿಡಿಯದ ಸ್ಥಿತಿಗೆ ಕಾರಣವಿದ್ದೀತೆಂದು ಮತ್ತೊಂದು ವಾದವಿದೆ. ತುಕ್ಕು ಹಿಡಿಯಲು ತೇವಾಂಶಬೇಕು; ಆದರೆ ದೆಹಲಿಯ ವಾತಾವರಣದಲ್ಲಿ ವರ್ಷದ ತೀರ ಕಡಿಮೆ ಭಾಗ ತೇವಾಂಶ ತುಂಬಿರುವದರಿಂದ ತುಕ್ಕು ತಯಾರಾಗಲು ಅವಕಾಶ ಇಲ್ಲ. ಬಹುಶಃ ಮೇಲಿನ ಹಲವಾರು ಕಾರಣಗಳ ಮಿಶ್ರಣದಿಂದಾಗಿ, ವಿಷ್ಣುಧ್ವಜವು ತುಕ್ಕು ಹಿಡಿಯದ ಸ್ಥಿತಿಗೆ ಬಂದಿರಲು ಸಾಧ್ಯ.

ಏನಿದ್ದರೂ, ಈ ಕಂಭವು ಪ್ರಾಚೀನ ಭಾರತದ ಕಬ್ಬಿಣ ಲೋಹವಿದ್ಯೆಯ ಕೌಶಲದ ಸಾಧನೆಯ ಸ್ಮಾರಕವಾಗಿ, ಇಂದಿನ ಪ್ರವಾಸಿ ಆಕರ್ಷಣೆಯಾಗಿ ನಿಂತಿದೆ. ಇದು ತನ್ನ ತುಕ್ಕು ಹಿಡಿಯದ ಗುಣದಿಂದಾಗಿ ಮುಂದಿನ ಹಲವು ಶತಮಾನಗಳ ಕಾಲ ಕುತೂಹಲ ಕೇಂದ್ರವಾಗಿ ನಿಂತೀತು. ✡



ಮಾರ್ಗರೆಟ್ ತನ್ನ ಮನೆಯ ವಾರದ ದಿನಸಿ ಖರೀದಿಗಾಗಿ ರಸಲ್ ಮಾರ್ಕೆಟಿಗೆ ಬಂದಿದ್ದಳು. ಚಿಕನ್, ತರಕಾರಿ ಎಲ್ಲ ಕೊಂಡು ಹೊರಗೆ ಬರುವಾಗ ಬಾಗಿಲ ಬಳಿ ಒಂದು ಪಂಜರದಲ್ಲಿ ಅತ್ಯಂತ ಆಕರ್ಷಕವಾಗಿದ್ದ ಒಂದು ಗಿಣಿಯನ್ನು ಕಂಡಳು. ಅದರ ಬೆಲೆ ವಿಚಾರಿಸಿದಾಗ ಅದನ್ನು ಮಾರುವಾತ ತುಸು ಹಿಂದೇಟು ಹಾಕಿದ. ಮಾರ್ಗರೆಟ್ ಪಟ್ಟು ಹಿಡಿದಳು. "ಬೆಲೆ ಎಷ್ಟಾದರೂ ತೆರುತ್ತೇನೆ" ಎಂದಳು. ಅಂಗಡಿಯವ ನಿಜವಾದ ವಿಷಯ ಹೇಳಿದ. "ಅದು ತುಸು ಪೋಲಿಬುದ್ಧಿ ಉಳ್ಳದ್ದು. ಇದಕ್ಕೆ ಮೊದಲು ವೇಶ್ಯೆಯ ಮನೆಯಲ್ಲಿ ಇದ್ದುದರಿಂದ ಅದರ ನಾಲಿಗೆ ಇನ್ನೂ ಹರಿತವಾಗಿದೆ. ಆದ್ದರಿಂದ ಸಭ್ಯರ ಮನೆಗೆ ಅದು ಯೋಗ್ಯವಲ್ಲ" ಎಂದ. ಮಾರ್ಗರೆಟ್ ಹಟ ಹಿಡಿದು ೫೦೦ ರೂಪಾಯಿ ತೆತ್ತು ಗಿಣಿಯನ್ನು ಠೀವಿಯಿಂದ ಮನೆಗೆ ತಂದಳು.

ವಿಶಾಲವಾದ ಮನೆಯಂಗಳಕ್ಕೆ ಬರುತ್ತಿದಂತೆ ಗಿಣಿ "ಆಹಾ! ಹೊಸ ಮನೆ! ಸುಂದರ ಮನೆ!" ಎಂದು ಉಲಿಯಿತು. ಮಾರ್ಗರೆಟಳಿಗೆ ಅದನ್ನು ಕೇಳಿ ಸಂತೋಷವಾಯಿತು. ಸಂಜೆ ಕಾಲೇಜಿನಿಂದ ಸುಂದರವಾಗಿ ಬೆಳೆದ ಅವಳ ಮೂವರು ಹೆಣ್ಣುಮಕ್ಕಳು ಬಂದಾಗ ಗಿಣಿ ಮತ್ತೆ "ಹೊಸ ಮನೆ! ಹೊಸ ಹುಡುಗಿಯರು! ಆಹಾ!" ಎಂದಾಗ ಮಾರ್ಗರೆಟಳಿಗೆ ಹಿಗ್ಗೋ ಹಿಗ್ಗು. ಇದಕ್ಕೋ ಗಿಣಿ ಮಾರುವವ ಇದನ್ನು ಮಾರಲು ಅಷ್ಟು ಹಿಂದೇಟು ಹಾಕಿದ ಅಂತಿಂಥ ಗಿಣಿಯಲ್ಲ ಇದು. ದುಬಾರಿ ಬೆಲೆ ತೆತ್ತಿದ್ದಕ್ಕೂ ಸಾರ್ಥಕವಾಯಿತು. ಅಂದುಕೊಂಡಳು.

ರಾತ್ರಿ ಮನೆಗೆ ಗಂಡ ಜಾನಿ ಸ್ವಲ್ಪ ತೂರಾಡುತ್ತ ಬಂದ. ಕೋಟನ್ನು ಹೆಗಲ ಮೇಲೆ ಹಾಕಿಕೊಂಡು ತನ್ನ ಟೈ ಸಡಿಲಮಾಡುತ್ತಿದ್ದಂತೆ ಗಿಣಿ ಆನಂದದಿಂದ ಒರಲಿತು, "ಹೊಸ ಮನೆ! ಹೊಸ ಹುಡುಗಿಯರು! ಆದರೆ ಗಿರಾಕಿ ಮಾತ್ರ ಅದೇ! ಹಲ್ಲೋ ಜಾನಿ ಹೇಗಿದ್ದೀಯ?"

ಜ. ಗ. ಶ್ರೀ

# ಮಾಲ್ಥಸ್ ಮಾರ್ಕ್ಸ್ ಮತ್ತು ಮಹಾತ್ಮಾ

## ಜನಸಂಖ್ಯಾ ಸಮಸ್ಯೆ : ಮೂರು ದೃಷ್ಟಿಕೋನಗಳು

ಮೂಲ ಮರಾಠಿ : **ಜ. ಶಂ. ಆಪ್ಟೆ**

ಸಂಗ್ರಹಾನುವಾದ : **ವಿಶ್ವನಾಥ ಕೋಳಿವಾಡ**

ಅಣುಸ್ಫೋಟ ಮತ್ತು ಜನಸಂಖ್ಯಾಸ್ಫೋಟಗಳಿಂದಾಗಿ ೨೦ನೆಯ ಶತಕವು ಜಾಗತಿಕ ಇತಿಹಾಸದಲ್ಲಿ ಕ್ರಾಂತಿಕಾರಕವೆನಿಸುವುದಿದೆ. ಈ ಶತಕದ ಪೂರ್ವಾರ್ಧದಲ್ಲಿ ರಶಿಯನ್ ರಾಜ್ಯಕ್ರಾಂತಿ, ಎರಡು ಜಾಗತಿಕ ಯುದ್ಧಗಳು, ಪರಮಾಣು ಬಾಂಬ್ ಸ್ಫೋಟ, ಭಾರತದ ಸ್ವಾತಂತ್ರ್ಯ ಪ್ರಾಪ್ತಿ, ಈ ಮಹತ್ವದ ಘಟನೆಗಳು ಜರುಗಿದವು.

ಉತ್ತರಾರ್ಧದಲ್ಲಿ ಆಫ್ರಿಕ ಮತ್ತು ಏಶಿಯಾಗಳಲ್ಲಿ ಅನೇಕ ಚಿಕ್ಕ, ದೊಡ್ಡ ರಾಷ್ಟ್ರಗಳು ಸ್ವತಂತ್ರವಾದವು. ಎರಡನೇ ಮಹಾಯುದ್ಧದಲ್ಲಿ ಭಸ್ಮವಾದ ಜಪಾನ್ ದೇಶವು ಔದ್ಯೋಗಿಕ ಕ್ಷೇತ್ರದಲ್ಲಿ ಸಾಹಸದಿಂದ ಮತ್ತೆ ಮುಂದೆ ಬಂದಿತು.

ಚೀನದ ಸಾಂಸ್ಕೃತಿಕ ಕ್ರಾಂತಿ, ಭಾರತ-ಚೀನ ಯುದ್ಧ, ಬಂಗ್ಲಾದೇಶ ನಿರ್ಮಾಣ, ವಿಯಟ್ನಾಮಿನ ಮುಕ್ತಿ ಸಂಗ್ರಾಮ ಮತ್ತು ಸಾಧನೆ, ಇಸ್ರೇಲಿನ ಪುನರುತ್ಥಾನ, ಅಣುಶಕ್ತಿಯ ವಿಧಾಯಕ ಮತ್ತು ವಿಧ್ವಂಸಕ ಪ್ರಯೋಜನದ ಬಗ್ಗೆ ನಡೆದ ವಾದ-ವಿವಾದಗಳು, ಚರ್ಚೆ ಪರಿಷತ್ತುಗಳು—ಒಪ್ಪಂದಗಳು ಮೊದಲಾದ ಇವೆಲ್ಲವೂ ಈ ಶತಕಕ್ಕೆ ಸಂಬಂಧಿಸಿದವು.

ಆದರೆ ಇವೆಲ್ಲವನ್ನೂ ವ್ಯಾಪಿಸಿ ಬಿಡುವ ವಿಶ್ವವನ್ನೇ ತೊಂದರೆಗೆ ಈಡು ಮಾಡುತ್ತಿರುವ ಜನಸಂಖ್ಯಾ ಬೆಳವಣಿಗೆಯು, ಜ್ವಲಂತವಾದ, ಜಟಿಲವಾದ, ಜೀವಂತವಾದ ಜಾಗತಿಕ ಸಮಸ್ಯೆಯು ನಿರ್ಣಾಯಕವೂ ಮಹತ್ವದ್ದೂ ಆಗಿವೆ.

೧೯೭೪ನ್ನು 'ವಿಶ್ವ ಜನಸಂಖ್ಯಾ ವರ್ಷ'ವೆಂದು ಆಚರಿಸಲಾಯಿತು. ಆ ವರ್ಷದ ಅಗಸ್ಟ್ ತಿಂಗಳಲ್ಲಿ ಪೂರ್ವ ಯುರೋಪದ ರುಮಾನಿಯಾದ ರಾಜಧಾನಿ ಬುಡಾಪೆಸ್ಟ್ ನಗರದಲ್ಲಿ ವಿಶ್ವ ಜನಸಂಖ್ಯಾ ಸಮ್ಮೇಳನವನ್ನು ನಡೆಸಲಾಯಿತು. ಈ ಸಮ್ಮೇಳನದಲ್ಲಿ 'ವಿಶ್ವ ಕ್ರಿಯಾ ಯೋಜನೆ' (World Plan of Action)ಯನ್ನು ತಯಾರಿಸಲಾಯಿತು.

ಈ ಸಮ್ಮೇಳನದ ನಂತರ ವಿಶ್ವದಾದ್ಯಂತ ವಿವಿಧ ದೇಶಗಳಲ್ಲಿ ಜನಸಂಖ್ಯಾ ಸಮಸ್ಯೆ ಕುರಿತು

ವಿವಿಧ ಹಂತಗಳಲ್ಲಿ ಚರ್ಚೆಗಳು, ಸಮ್ಮೇಳನಗಳು, ಅಭ್ಯಾಸ ಮಂಡಳಿಗಳು, ಯೋಜನೆಗಳು, ಕಾರ್ಯಕ್ರಮಗಳು, ಕ್ರಿಯಾ ಯೋಜನೆಗಳು ಮೊದಲಾದವುಗಳ ದೊಡ್ಡ ಮಹಾಪೂರವೇ ಬಂದಿತು. ಅದರೊಂದಿಗೆ 'ಜನಸಂಖ್ಯಾ ಸಮಸ್ಯೆ'ಯ ಪ್ರಥಮ ನಾಮೋಚ್ಚಾರ ಮತ್ತು ತತ್ವ ವಿಚಾರವನ್ನು ಮಾಡಿದ ಮಹಾ ಅರ್ಥಶಾಸ್ತ್ರಜ್ಞ ಮಾಲ್ಥಸ್‌ನ ಹೆಸರು ಎಲ್ಲೆಡೆ ಕೇಳಿಬರಹತ್ತಿತು.

## ಥಾಮಸ್ ಮಾಲ್ಥಸ್

ಇವನು ೧೪, ಫೆಬ್ರುವರಿ ೧೭೬೬ರಲ್ಲಿ ಇಂಗ್ಲಂಡಿನ ಡಾರ್‌ಕಿಂಗ್‌ನ ಹತ್ತಿರ ರೂಕರೆ ಎಂಬಲ್ಲಿ ಜನಿಸಿದನು. ಮಾಲ್ಥಸ್‌ನಿಗೆ ಒಟ್ಟು ಏಳು ಜನ ಸಹೋದರ ಸಹೋದರಿಯರು. ಅವರಲ್ಲಿ ೬ ಜನ ಸಹೋದರಿಯರು. ಇಂಗ್ಲಂಡಿನಲ್ಲಿ ಆಗಿನ ಕಾಲದಲ್ಲಿ ದೊಡ್ಡ ಕುಟುಂಬವೇ ಸಾಮಾಜಿಕ ರೂಢಿಯಾಗಿತ್ತು. ಥಾಮಸ್‌ನ ತಂದೆ ಆಕ್ಸ್‌ಫರ್ಡಿನಲ್ಲಿ ಕಲಿತವರಾಗಿದ್ದರು. ಹೀಗಾಗಿ ಶಿಕ್ಷಣದ ಬಗ್ಗೆ ತಮ್ಮದೇ ಆದ ವಿಚಾರವುಳ್ಳವರಾಗಿದ್ದರು. ಆದ್ದರಿಂದ ಥಾಮಸ್‌ನನ್ನು ಅವರು ಸಾರ್ವಜನಿಕ ಶಾಲೆಗೆ ಕಳಿಸಲಿಲ್ಲ.

ರೂಸೋ ಮತ್ತು ಡೇವಿಡ್ ಹ್ಯೂಮ್ ಅವರು ಥಾಮಸ್‌ನ ತಂದೆಯ ಸ್ನೇಹಿತರು.

೧೭೮೪ ರಲ್ಲಿ ಥಾಮಸ್ ಕೇಂಬ್ರಿಜ್ ವಿಶ್ವವಿದ್ಯಾಲಯದಿಂದ ಗಣಿತ ವಿಷಯದಲ್ಲಿ ಪದವೀಧರರಾದ ಒಂಬತ್ತನೆಯ ರ್‍ಯಾಂಗ್ಲರ್ ಎಂದು ಪರೀಕ್ಷೆಯಲ್ಲಿ ಉತ್ತೀರ್ಣನಾದ. ೧೭೯೧ ರಲ್ಲಿ ಎಂ. ಎ. ಆದಾಗ ಅವನಿಗೆ ೨೫ ವರ್ಷ. ಮುಂದೆ ವಿಶ್ವವಿದ್ಯಾಲಯದಲ್ಲಿ ಫೆಲೋಶಿಪ್ ದೊರೆಯಿತು.

ಥಾಮಸ್ ತನ್ನ ತಂದೆಯೊಂದಿಗೆ ಹಲವಾರು ವಿಷಯಗಳನ್ನು ಚರ್ಚಿಸುತ್ತಿದ್ದನು. ತಂದೆಯ ಕಾಲ್ಪನಿಕ, ಸೌಮ್ಯವಾದ ಜಗತ್ತಿನ ಬಗೆಗಿನ ವಿಚಾರಗಳನ್ನು ಥಾಮಸ್ ಮನ್ನಿಸುತ್ತಿದ್ದಿಲ್ಲ. ತಂದೆಯ ಆಗ್ರಹದ ಮೇರೆಗೆ ತನ್ನ ವಿಚಾರಗಳನ್ನೆಲ್ಲ ಆತ ಬರೆದಿಟ್ಟನು.

೧೭೯೭ ರಲ್ಲಿ ತಂದೆ ಮಕ್ಕಳ ಸಂವಾದವು ಒಂದು ಹೊಸ ವಿಷಯಕ್ಕೆ ದಾರಿ ಮಾಡಿಕೊಟ್ಟಿತು. ವಿಲಿಯಂ ಗಾಡ್‌ವಿನ್ ಬರೆದ 'Political Justice' ಎಂಬ ಗ್ರಂಥವು ಆಗ ಪ್ರಸಿದ್ಧವಾಗಿತ್ತು. ಗಾಡ್‌ವಿನ್‌ನ ಪಕ್ಷ ವಹಿಸಿ ತಂದೆ ವಾದಿಸಿದರೆ ಅದಕ್ಕೆ ವಿರುದ್ಧವಾಗಿ ಮಗ ವಾದಿಸುತ್ತಿದ್ದನು.

ಮಾಲ್ಥಸ್ ಗಾಳಿಗೋಪುರದಲ್ಲಿಯ ಚಿಂತಕನಲ್ಲ. ಅವನು ಒಂದು ಬಗೆಯ ರಾಜಕೀಯ ಪ್ರಚಾರ ಪುಸ್ತಕಗಳ ಕರ್ತೃವಾಗಿದ್ದ. ಅವನ ಗ್ರಂಥದ ಹೆಸರೂ ದೀರ್ಘವಾಗಿಯೇ ಇತ್ತು.

"An Essay on the principle of population as it affects the future of the improvement of the Society–with remarks on the speculation of Mr. Godwin, Mr. Condercet and other writers." ಇಷ್ಟುದ್ದ ತಲೆಕಟ್ಟುಳ್ಳ ಈ ಗ್ರಂಥದ ಮೇಲೆ ಲೇಖಕನೆಂದು ಮಾಲ್ಥಸ್‌ನ ಹೆಸರನ್ನು ಮಾತ್ರ ಮುದ್ರಿಸಿರಲಿಲ್ಲ.

ಮಾಲ್ಥಸ್ ಮತ್ತು ಅವನ ತಂದೆಯ ಮಧ್ಯದ ವಾದ-ವಿವಾದಗಳಿಗೆ ಈ ನಿಬಂಧವೇ ಪ್ರೇರಕ ಶಕ್ತಿಯಾಗಿತ್ತು. ಭೀಷಣವಾದ ಭವಿಷ್ಯದ ಭವಿಷ್ಯ ನುಡಿಯುವವರು ಮಾಲ್ಥಸ್‌ನಿಗಿಂತ ಮುಂಚೆಯೂ ಆಗಿಹೋಗಿದ್ದಾರೆ. ೧೭೬೩ರಲ್ಲಿ ನಾರ್‌ವಿಕ್‌ನ ಡಾ. ಜಾನ್ ಬ್ರುಕ್‌ಶೇರ್ ಎಂಬುವವನೂ, ೧೭೬೧ರಲ್ಲಿಯೇ ರಾಬರ್ಟ್ ವ್ಯಾಲೇಸ್ ಎಂಬವನೂ ಮಾನವತೆಯ ಭವಿಷ್ಯದ ಬಗ್ಗೆ ಬರೆದು ಇಟ್ಟಿದ್ದಾರೆ.

ಎಲ್ಲಿಯವರೆಗೆ ಸಕಲರಿಗೆ ಸಾಕಾಗುವಷ್ಟು ಆಹಾರ ಪೂರೈಕೆ ಇರುವುದೋ, ಅಲ್ಲಿಯವರೆಗೆ ಮಾನವನಿಗೆ, ಪ್ರಜೋತ್ಪಾದನೆಯೂ ಬೇಕೆನಿಸುತ್ತದೆ. ಆದರ್ಶವಾದ ಪ್ರಪಂಚವೊಂದನ್ನು ರಚಿಸಬೇಕೆಂದು ಯತ್ನಿಸುವವರನ್ನೆಲ್ಲ ಈ ಆಕ್ಷೇಪ

ಣೆಯು ವ್ಯಾಲೇಸ್‌ನ ಕಾಲದಿಂದ ಕಂಗೆಡಿಸುತ್ತ ಬಂದಿದೆ. ಆದರೆ ಯಾರೂ ವ್ಯಾಪಕವಾದ ಚರ್ಚೆಯನ್ನು ಈ ಬಗ್ಗೆ ಮಾಡಲಿಲ್ಲ, ಸ್ಪಷ್ಟೀಕರಣವನ್ನೂ ನೀಡಲಿಲ್ಲ.

ಈ ಆಕ್ಷೇಪಣೆಯ ವಿಸ್ತಾರವಾದ ಚರ್ಚೆಯನ್ನು ಕೈಕೊಂಡವನು ಮಾಲ್ಥಸ್‌ನೇ. ಅವನ ಜನಸಂಖ್ಯಾ ವಿಚಾರವು ಎರಡು ಸಿದ್ಧಾಂತಗಳನ್ನು ಆಧರಿಸಿದೆ:

(೧) ಮಾನವನ ಅಸ್ತಿತ್ವಕ್ಕೆ ಅನ್ನ-ಆಹಾರದ ಅವಶ್ಯಕತೆ ಇದೆ.

(೨) ಗಂಡು-ಹೆಣ್ಣಿನ ಇಚ್ಛೆಯು ಅವಶ್ಯಕವಾದುದೂ ಸದ್ಯದ ಸ್ಥಿತಿಯಲ್ಲಿ ಶಾಶ್ವತವಾದುದೂ ಆಗಿದೆ.

ಕಾಡು ಸ್ಥಿತಿಯಿಂದ ನಾಗರಿಕತೆಯವರೆಗೂ ಮಾನವ ಪ್ರಗತಿಯನ್ನು ಸಾಧಿಸಿದರೂ ಅವನ ವಾಸನೆ ಕುಂದಲಿಲ್ಲ. ಹೊಸ ರೀತಿ ನೀತಿಗಳಿಂದ ಹೆಚ್ಚುತ್ತಲೂ ಇದೆ. ಈ ವಾಸನೆಯ ಸಮಗ್ರ ನಾಶವೂ ಅಸಾಧ್ಯವೇ ಆಗಿದೆ. ಈ ಎರಡು ಗೃಹಿತ ಸಿದ್ಧಾಂತಗಳ ಆಧಾರದ ಮೇಲೆ ಕೆಳಕಂಡ ಎರಡು ವಿಧಾನಗಳನ್ನು ಹಾಗೂ ತತ್ವಗಳನ್ನೂ ಮಾಲ್ಥಸ್ ಮಂಡಿಸುತ್ತಾನೆ.

(೧) ಮಾನವನ ಉಪಜೀವನಕ್ಕಾಗಿ ಬೇಕಾಗುವ ಆಹಾರ ಪೂರೈಸುವ ಅವನ ಶಕ್ತಿಗಿಂತ ಜನಸಂಖ್ಯೆಯನ್ನು ಬೆಳೆಸಬಲ್ಲ ಅವನ ಶಕ್ತಿ ಅನಿಶ್ಚಿತ ಕಾಲದವರೆಗೂ ದೊಡ್ಡದಾಗಿದೆ.

(೨) ಅನಿಯಂತ್ರಿತ ಜನಸಂಖ್ಯೆ ಭೂಮಿತಿಯ ಶ್ರೇಣಿಯಿಂದ ಬೆಳೆಯುತ್ತಿರುತ್ತದೆ, ಆಹಾರಧಾನ್ಯ ಪೂರೈಕೆ, ಗಣಿತ ಶ್ರೇಣಿಯಿಂದ ಮಾತ್ರ ಬೆಳೆಯುತ್ತಿರುವುದು ಈ ಎರಡೂ ವಿಧಾನಗಳನ್ನು ಇನ್ನೂ ಸ್ಪಷ್ಟಪಡಿಸಲು ಮಾಲ್ಥಸ್ ಹೀಗೆ ಹೇಳುತ್ತಾನೆ.

"ಇಡೀ ಪ್ರಪಂಚದ ಜನಸಂಖ್ಯೆ ೧೦೦ ಇದೆ ಎಂದು ಹಿಡಿದರೆ ಮಾನವ ಜನಾಂಗವು ೧, ೨, ೪, ೮, ೧೬, ೩೨, ೬೪, ೧೨೮, ೨೫೬ ಈ ರೀತಿಯಾಗಿ ಬೆಳೆಯುವುದು. ಮತ್ತು ಆಹಾರ ಧಾನ್ಯದ ಪೂರೈಕೆ ೧, ೨, ೩, ೪, ೫, ೬, ೭, ೮, ೯ ಈ ರೀತಿ ಬೆಳೆಯುವುದು. ಜನಸಂಖ್ಯಾ ಬೆಳವಣಿಗೆ ಮತ್ತು ಆಹಾರ ಪೂರೈಕೆ ೨೫೬:೯ ಈ ಪ್ರಮಾಣದಲ್ಲಿ ಬರುವುದು. ೩೦೦ ವರ್ಷಗಳ ನಂತರ ಎರಡರ ನಡುವಿನ ಅಂತರ ಅಗಣ್ಯವೆನಿಸುವುದು. ಈ ಪ್ರಮಾಣದ ಎರಡೂ ಅಂಕಿಗಳಲ್ಲಿ ೨೫ ವರ್ಷ ಕಾಲಾವಧಿ ಇದೆ. ಸತತವಾಗಿ ಬರುವ ೨೫ ವರ್ಷಕ್ಕೊಮ್ಮೆ ಜನಸಂಖ್ಯೆ ಎರಡು ಪಟ್ಟು ಹೆಚ್ಚಾದರೆ, ಆಹಾರ ಧಾನ್ಯವು ಮಾತ್ರ ಅಷ್ಟೇ ಉಳಿಯುತ್ತದೆ. ಈ ಮೇಲೆ ಹೇಳಿದ ೯ ಸಂಖ್ಯಾಮಾನದಲ್ಲಿ ೨೨೫ ವರ್ಷದಲ್ಲಿ, ಜನಸಂಖ್ಯೆ ಆಹಾರ ಧಾನ್ಯಕ್ಕಿಂತಲೂ ೨೭ ಪಟ್ಟು ಹೆಚ್ಚಾಗಿರುವುದು.

ಈ ಬೆಳವಣಿಗೆಯ ಭಯಂಕರ ಪ್ರಮಾಣವು ಮಾಲ್ಥಸ್‌ನ ಚರ್ಚೆಯಲ್ಲಿ ಮೇಲಿಂದ ಮೇಲೆ ಉಲ್ಲೇಖವಾಗಿದೆ. ಪ್ರಾಣಿಗಳು ಹಾಗೂ ವನಸ್ಪತಿಗಳ ಸೃಷ್ಟಿಗೆ ಇದು ಬಹುಮಟ್ಟಿಗೆ ನಿಜವೂ ಇರುತ್ತದೆ. ಆದರೆ ಮಾನವ ಪ್ರಜೋತ್ಪಾದನಾ ವಿಷಯದಲ್ಲಿ ಅದನ್ನು ಬಹುಶಃ ಅನುಸರಿಸುವ ಪ್ರಮೇಯವಿಲ್ಲ. ಅನೇಕ ಬಗೆಯ ಜೀವಿಗಳು ಈ ಪ್ರಪಂಚದಲ್ಲಿವೆ. ಅವು ಅನಿರ್ಬಂಧಿತವಾಗಿ ಬೆಳೆಯುತ್ತ ಹೋದರೆ ಕೆಲವೇ ಸಹಸ್ರ ವರ್ಷಗಳಲ್ಲಿ ಈ ಭೂಮಿಯ ಮೇಲೆ ಲಕ್ಷಾವಧಿ ವಿಧದ ಜೀವಗಳ ಭಾರ ಹೆಚ್ಚಾಗಬಹುದು. ಆದರೆ ಅವುಗಳ ಬೆಳವಣಿಗೆ ನಿಯಮಿತವಾದ ಪ್ರಕ್ರಿಯೆಗೆ ಒಳಗಾಗಿವೆ. ಈ ನಿಯಮಿತಿಯಿಂದಾಗಿ ಪ್ರಾಣಿ ಹಾಗೂ ವನಸ್ಪತಿಗಳು ಕಡಿಮೆ ಪ್ರಮಾಣದಲ್ಲಿ ಬೆಳೆಯುತ್ತವೆ. ಆದರೆ ಮಾನವನು ತನ್ನ ಬುದ್ಧಿಶಕ್ತಿಯನ್ನು ಉಪಯೋಗಿಸಿ ತಾನೇ ಮಿತಿಯನ್ನು ಹಾಕಿಕೊಳ್ಳಬೇಕಾಗಿದೆ.

ಮಾಲ್ಥಸ್ ತನ್ನ ಜನಸಂಖ್ಯಾ ಸಿದ್ಧಾಂತವನ್ನು ಮೂರು ಸೂತ್ರಗಳಲ್ಲಿ ಮಂಡಿಸಿದ್ದಾನೆ:

೧) ಉಪಜೀವನದ ಸಾಧನಗಳನ್ನು ಅನುಸರಿಸಿ, ಜನಸಂಖ್ಯೆಯು ನಿರ್ದಿಷ್ಟ ಪ್ರಮಾಣದಲ್ಲಿ ಉಳಿಯುತ್ತದೆ.

೨) ಪರಿಣಾಮಕಾರಿಯಾದ ಉಪಾಯ-ಗಳಿಂದ ಅದು ಪ್ರತಿಬಂಧಿತವಾಗದಿದ್ದರೆ ಉಪ ಜೀವನದ ಸಾಧನಗಳು ಬೆಳೆದಂತೆ ಜನ ಸಂಖ್ಯೆಯೂ ಬೆಳೆಯುತ್ತದೆ.

೩) ಜನಸಂಖ್ಯೆಯು ಅಂತಃಶಕ್ತಿಯನ್ನೇ ಅಡಗಿಸುವ ಮತ್ತು ನಿರ್ವಾಹದ ಸಾಧನೆಗಳ ಮಂತದಲ್ಲಿ ಪರಿಣಾಮ ಮಾಡುವಂಥ ಉಪಾಯ ಈ ಎರಡೂ ಬಗೆಯಲ್ಲಿ ಹೊಂದಾಣಿಕೆಯಾಗದಿದ್ದರೆ ಅದರ ಪರಿಣಾಮ ನೈತಿಕ ಅಧಃಪತನ ಮತ್ತು ಕಷ್ಟ ಕಾರ್ಪಣ್ಯಗಳಲ್ಲಾಗುತ್ತದೆ.

ಜನಸಂಖ್ಯೆಯನ್ನು ನಿಯಂತ್ರಿಸುವ ಮತ್ತು ತಡೆಯುವ ಉಪಾಯಗಳು ಎರಡು ವಿಧವಾಗಿವೆ. (i) ವಿಧ್ವಂಸಕ, ಮತ್ತು (ii) ನಿಯಂತ್ರಣಾತ್ಮಕ.

(i) ವಿಧ್ವಂಸಕ—ಅಂದರೆ ಯುದ್ಧ, ಪಿಡುಗು, ಬರಗಾಲ ಇವುಗಳಿಂದ ಮರಣ ಪ್ರಮಾಣ ಹೆಚ್ಚಾಗುತ್ತದೆ.

(ii) ನಿಯಂತ್ರಣಾತ್ಮಕ ಉಪಾಯಗಳಿಂದ ಜನನ-ಪ್ರಮಾಣ ಕಡಿಮೆಯಾಗುತ್ತದೆ. ನೈತಿಕವಾಗಿ ನಿಯಂತ್ರಣ, ವಿಲಂಬಿತ ವಿವಾಹಗಳು.

ಮರಣ ಪ್ರಮಾಣ ಹೆಚ್ಚಿಸುವ ಉಪಾಯಗಳು ಅಮಾನುಷವಾದವುಗಳಾಗಿವೆ. ಕಡಿಮೆಯಾಗುತ್ತಿರುವ ಉತ್ಪಾದನೆ ಮತ್ತು ಮಿತಿಮೀರಿದ ಜನಸಂಖ್ಯೆ ಮುಂತಾದವುಗಳಿಗೆ ನಿಸರ್ಗವೇ ಕೈಕೊಳ್ಳುವ ಉಪಾಯ. ಇದರಲ್ಲಿ ಕ್ರೌರ್ಯವಿದೆ. ಮೊದಲು ಹುಟ್ಟಿಸಿ ಆಮೇಲೆ ಕೊಲ್ಲುವ ಈ ಪದ್ಧತಿ ಅಸಮರ್ಥನೀಯವಾಗಿದೆ. ಇಂಥವು ಉದ್ಭವಿಸದಿರಲು ಜನಸಂಖ್ಯಾ ನಿಯಂತ್ರಣ ಅವಶ್ಯ ಎಂದು ಮಾಲ್ಥಸ್ ಸೂಚಿಸಿದನು.

ಮಾಲ್ಥಸ್‌ನ ಈ ಸೂಚನೆಯನ್ನು ಆ ಕಾಲದಲ್ಲಿ ಯಾರೂ ಒಪ್ಪಲಿಲ್ಲ. ಜನನ-ಮರಣಗಳು ನಿಸರ್ಗದ ನಿಯಮಕ್ಕೆ ಒಳಪಟ್ಟ ಸಂಗತಿಗಳು. ನಿಸರ್ಗ ನಿಯಮವನ್ನು ನಿಷ್ಫಲಿತ ಮಾಡಬಾರದೆಂದು ಆಗಿನ ಧಾರ್ಮಿಕರು ವಾದಿಸಿದರು. ಮಾಲ್ಥಸ್‌ನ ಪ್ರಬಂಧ ಮತ್ತು ಗ್ರಂಥಗಳು ವ್ಯಾಪಕ ಟೀಕೆಗೆ ಅವಕಾಶಗಳನ್ನು ಕಲ್ಪಿಸಿದವು. ವಿರೋಧದ ಬಿರುಗಾಳಿಯೇ ಎದ್ದಿತು. ಅವ-ಹೇಳನ, ಅತಿರೇಕಕ್ಕೆ ಮುಟ್ಟಿತು. ಧಾರ್ಮಿಕ ಸನಾತನಿಗಳೂ ಸಾಮಾಜಿಕ ಧುರೀಣರೂ ಕೂಡಿಯೇ ಅವನನ್ನು ಟೀಕಿಸಿದರು. ಸತತವಾಗಿ ೩೦ ವರ್ಷಗಳವರೆಗೆ ಅವನ ಪ್ರಬಂಧದ ಖಂಡನೆ ನಡೆಯಿತು. ಅತ್ಯಂತ ಹೆಚ್ಚಿನ ಟೀಕೆ, ವಿಮರ್ಶೆ, ಹಾಗೂ ತೆಗಳಿಕೆಗೆ ಅವನು ಒಳಗಾಗಬೇಕಾಯಿತು.

ಮಾಲ್ಥಸ್‌ನ ಗ್ರಂಥವನ್ನು ಓದದೇ ವಿಮರ್ಶಿಸಿದವರು ಬಹಳ. ಅವನು ಕೊಟ್ಟ ಎಚ್ಚರಗಳನ್ನು ಕೇಳದೆಯೇ, ತಿಳಿದುಕೊಳ್ಳದೆಯೇ ತಿರಸ್ಕರಿಸ-ಲಾಗುತ್ತಿದೆ ಎಂಬುದು ಮಾಲ್ಥಸ್‌ನಿಗೆ ಗೊತ್ತಾ-ಯಿತು. ಆಗಿನ ಒಬ್ಬ ಅರ್ಥಶಾಸ್ತ್ರಜ್ಞ ಇದನ್ನು ಒಪ್ಪಿಕೊಂಡೂ ಇದ್ದನು.

ಮಾಲ್ಥಸ್‌ನ ಗ್ರಂಥ ಕೀಟ್ಸ್ ಮಹಾಕವಿಗೆ ಹಿಡಿಸಿತ್ತು. ಮಾಲ್ಥಸ್‌ನ ಪ್ರಭಾವ ಬುದ್ಧಿಜೀವಿಗಳ ಮೇಲೂ ಸಮಾಜ ಚಿಂತಕರ ಮೇಲೂ ಸಾಕಷ್ಟು ಬಿದ್ದಿತು. ಜಾನ್ ಸ್ಟೂವರ್ಟ್ ಮಿಲ್‌ನಂಥ ಉದಾರ ಮತವಾದಿ ರಾಜನೀತಿಜ್ಞನು ಮಾಲ್ಥಸ್‌ನ ವಿಚಾರಗಳನ್ನು ಹೊಗಳುತ್ತ ಅವನನ್ನು 'ಭವ್ಯಸಿದ್ಧಾಂತಿ' ಎಂದು ಕರೆಯುತ್ತಾನೆ.

ಜನಸಂಖ್ಯಾ ವಿಷಯವಲ್ಲದೇ ಅರ್ಥಶಾಸ್ತ್ರ ಮತ್ತು ಆರ್ಥಿಕ ಪ್ರಶ್ನೆಗಳಿಗೆ ಸಂಬಂಧಪಟ್ಟಂತೆಯೂ ಮಾಲ್ಥಸ್‌ನು ಹಲವಾರು ಪುಸ್ತಕಗಳನ್ನು ಬರೆದಿದ್ದಾನೆ. ಅರ್ಥಶಾಸ್ತ್ರಜ್ಞ ರಿಕಾರ್ಡೊನೊಂದಿಗೆ ಸತತವಾಗಿ ಪತ್ರ ವ್ಯವಹಾರವನ್ನಿರಿಸಿಕೊಂಡಿದ್ದನು.

"ಅಧಿಕ ಜನರ, ಅಧಿಕ ಹಿತವಾಗಬೇಕೆಂಬ ಕಳಕಳಿ ಅವನದಾಗಿತ್ತು. ಮಾನವನ ಬದುಕಿನ ಮಟ್ಟವನ್ನು ಎತ್ತರಿಸುವುದು ಯಾವುದೇ ಶಾಸ್ತ್ರಕ್ಕಿಂತಲೂ ಮಹತ್ವದ ಸಂಗತಿ" ಎಂದು ಅವನು ಬರೆದಿದ್ದನು. ಕೂಲಿಕಾರರ ಕಷ್ಟಕಾರ್ಪಣ್ಯಗಳ ವಿಷಯವಾಗಿ ಅವನಲ್ಲಿ ಮಾನವೀಯ ಅನುಕಂಪವಿತ್ತು.

"ಲೋಕಸಂಖ್ಯಾಶಾಸ್ತ್ರ (Demography) ದಲ್ಲಿ ಮಾಲ್ಥಸ್‌ನಿಗೆ ಮಹತ್ವದ ಸ್ಥಾನವಿದೆ,

ಸರ್ವೋಚ್ಚ ಸ್ಥಾನವಿದೆ. ಲೋಕಸಂಖ್ಯಾಶಾಸ್ತ್ರವು ಒಂದು ಶಾಸ್ತ್ರವಾಗಿ ತಳೆದ ವಿಕಾಸದಲ್ಲಿಯು ಅವನ ಕಾಣಿಕೆ ಬಹಳ ಸಮೃದ್ಧವಾದುದಾಗಿದೆ" ಎಂದು ಶಿಕ್ಯಾಗೋ ವಿಶ್ವವಿದ್ಯಾಲಯದ ಸಮಾಜ ಶಾಸ್ತ್ರಜ್ಞರೂ, ಲೋಕಸಂಖ್ಯಾತಜ್ಞರೂ ಆದ ಪ್ರಾಧ್ಯಾಪಕ ಡಾ. ಡೋನಾಲ್ಡ್ ಬ್ಯಾಗ್, ಮಾಲ್ಥಸ್‌ನ ಮೌಲ್ಯಮಾಪನ ಮಾಡಿದ್ದಾರೆ.

## ಕಾರ್ಲ್ ಮಾರ್ಕ್ಸ್

೧೪ ಮಾರ್ಚ್ ೧೯೮೩ ರಂದು ಕಾರ್ಲ್ ಮಾರ್ಕ್ಸ್‌ನ ಜನ್ಮ ಶತಾಬ್ದಿಯನ್ನು ಪ್ರಪಂಚದಾದ್ಯಂತ ಆಚರಿಸಲಾಯಿತು. ೧೯ನೆಯ ಶತಕದ ಅತಿಶ್ರೇಷ್ಠ ವಿಚಾರವಂತನೆಂದೂ ಸಾಮಾಜಿಕ ನೀತಿಶಾಸ್ತ್ರಜ್ಞನೆಂದೂ ಅವನ ಖ್ಯಾತಿ ಇದೆ. ಅವನ ವಿಚಾರ ಸರಣಿಯು ಪರ್ಜನ್ಯ ಪ್ರಪಂಚದಾದ್ಯಂತವೂ ಹಬ್ಬಿದೆ.

"ಜಗತ್ತಿನ ಕಾರ್ಮಿಕರೇ ಒಂದಾಗಿರಿ" ಎಂಬ ಘೋಷಣೆಯ ದೃಷ್ಟಾರನೂ ವರ್ಗರಹಿತ ಸಮಾಜದ ರಚನೆಯ ಕನಸನ್ನು ಕಂಡ ದಾರ್ಶನಿಕನೂ ಆದ ಮಾರ್ಕ್ಸ್‌ನು ಜನಸಂಖ್ಯಾ ಪ್ರಶ್ನೆಯ ಸಂಬಂಧದಲ್ಲಿ ಏನು ಹೇಳುತ್ತಾನೆಂಬುದನ್ನು ಈಗ ತಿಳಿಯೋಣ.

"ಪ್ರತ್ಯೇಕವಾದ, ಐತಿಹಾಸಿಕವಾದ ಉತ್ಪಾದನಾ ಪದ್ಧತಿಗೆ ತನ್ನದೇ ಆದ ಜನಸಂಖ್ಯಾ ನಿಯಮಗಳಿವೆ" ಎಂದು ಅವನು ತನ್ನ 'ದಾಸ್ ಕ್ಯಾಪಿಟಲ್' ಗ್ರಂಥದಲ್ಲಿ ಹೇಳಿದ್ದಾನೆ. ಅದರಲ್ಲಿ ಮಾಲ್ಥಸ್‌ನನ್ನು ಟೀಕಿಸಿದ್ದಾನೆ.

೧೭೯೮ ರಲ್ಲಿ ಸಿದ್ಧವಾದ ಮಾಲ್ಥಸ್‌ನ 'ಜನಸಂಖ್ಯಾ ಪ್ರಬಂಧ'ವು ಮೂಲ ಸ್ವರೂಪದಲ್ಲಿ ಜೇಮ್ಸ್ ಸ್ಟೂವರ್ಟ್, ಫ್ರಾಂಕಲಿನ್ ವ್ಯಾಲೇಸ್, ಮುಂತಾದವರ ಬಾಲಿಶ್ ಅನುಕರಣೆಯಾಗಿದ್ದು ಅದರಲ್ಲಿ ಮಾಲ್ಥಸ್‌ನ ಒಂದು ವಿಚಾರವೂ ಕೂಡ ಇರುವುದಿಲ್ಲ. "ಈ ಗ್ರಂಥದ ಬಗ್ಗೆ ಇಷ್ಟೊಂದು ಬೊಬ್ಬಾಟ ಒಂದು ವಿಶಿಷ್ಟ ಹಿತಾಸಕ್ತಿಯ ಅನುಕೂಲಕ್ಕಾಗಿ ನಡೆದ ಒಂದು ಘಟನೆಯಾಗಿದೆ." ಮಾರ್ಕ್ಸ್‌ನ ಈ ಟೀಕೆ ಅವಾಸ್ತವವಾದದ್ದೂ ಅತಿರೇಕದ್ದೂ ಎಂದು ಅನ್ನಿಸುತ್ತದೆ.

ಶ್ರಮಜೀವಿ ಕಾರ್ಮಿಕರ ಶೋಷಣೆ ಮತ್ತು ಅವರ ಮೇಲಿನ ದಬ್ಬಾಳಿಕೆಯತ್ತಲೇ ಎಲ್ಲ ಲೇಖನಗಳಲ್ಲೂ ಅವನ ಗಮನವಿರುತ್ತಿತ್ತು. "ಕಾರ್ಮಿಕರ ಶ್ರಮದಿಂದಲೇ ಬಂಡವಾಳದ ಸಂಚಯವಾಗುತ್ತದೆ. ಅದರೊಂದಿಗೆ ತಮ್ಮ ವರ್ಗದ್ದೇ ಮೇಲುಗೈಯಾಗುವಂಥ ಸಾಧನಗಳನ್ನೂ (ಬಂಡವಾಳಶಾಹಿಗಳು) ನಿರ್ಮಿಸುತ್ತಾರೆ. ಇದು ಸತತವಾಗಿಯೂ ಸಂಖ್ಯೆಯಲ್ಲಿ ಹೆಚ್ಚುತ್ತಿರುವ ವರ್ಗವಾಗಿರುತ್ತದೆ. ಇದು ಬಂಡವಾಳಶಾಹಿ ಉತ್ಪಾದನಾ ಪದ್ಧತಿಗೆ ಅನ್ವಯಿಸುವ ವಿಶಿಷ್ಟವಾದ 'ಜನಸಂಖ್ಯಾನಿಯಮ'ವಾಗಿದೆ.

"ನಿಜವೆಂದರೆ, ಪ್ರತ್ಯೇಕ ಉತ್ಪಾದನಾ ಪದ್ಧತಿಗೆ ಅವರದೇ ಆದ ಜನಸಂಖ್ಯಾ ನಿಯಮಗಳಿವೆ. ಜನಸಂಖ್ಯೆಯ ಸರ್ವಸಾಧಾರಣ ನಿಯಮವು ವನಸ್ಪತಿ ಮತ್ತು ಪ್ರಾಣಿಗಳಿಗೆ ಮಾತ್ರ. ಮನುಷ್ಯನು ಅವುಗಳಲ್ಲಿ ಹಸ್ತಕ್ಷೇಪ ಮಾಡದೇ




"ನಿಮಗೆಷ್ಟು ಸಲ ಹೇಳೂದ್ರಿ...? ಹಗಲಿನ ಮೀಟಿಂಗಿನಲ್ಲಿ ಸಾಹೇಬರು ಬರೇ ನೀರನ್ನೇ ಕುಡಿಯುತ್ತಾರೆ, ಅಂತಾ..."

ಇರುವವರೆಗೆ ಒಂದೆ ರೀತಿಯದ್ದಾಗಿರುತ್ತವೆ" ಎಂದು ಮಾರ್ಕ್ಸ್ ಹೇಳಿದ್ದಾನೆ.

ರಾಜಕೀಯ ಹಾಗೂ ವೈಚಾರಿಕ ಹಂತದಲ್ಲಿಂದ ಆರ್ಥಿಕ ತಳಹದಿಯ ಮೂಲವನ್ನು ಶೋಧಿಸುವ ಪ್ರಯತ್ನಗಳು ನಡೆಯುತ್ತಿವೆ. ಅರ್ಥವಾದದ ಬುನಾದಿಯು ಈ ಎರಡೂ ಪ್ರಸಂಗಗಳಿಂದ ನಿರ್ಮಿತವಾಗಿದೆ. ಮಾರ್ಕ್ಸ್‌ವಾದಿ ಸಾಹಿತ್ಯದಲ್ಲಿ ಉತ್ಪಾದನಾ ಕ್ಷೇತ್ರವು ಭೌತಿಕ ವಸ್ತುಗಳ ಉತ್ಪಾದನೆಗೆ ಮಾತ್ರ ಸೀಮಿತವಾಗಿರುತ್ತದೆ. ಈ ವಿಧಾನದಲ್ಲಿ ವೈಯಕ್ತಿಕ ಉತ್ಪಾದನೆ ಮತ್ತು ಶ್ರಮಶಕ್ತಿಗೆ ಸ್ಥಾನವೇ ಇಲ್ಲ. ಉತ್ಪಾದನಾ ಪದ್ಧತಿಯ ಬಗೆಗಿನ ಮಾರ್ಕ್ಸ್‌ನ ಸಂಕಲ್ಪನೆಯಲ್ಲಿ ಸ್ತ್ರೀ ಪುರುಷ ಬೇಧವೇ ಇಲ್ಲ ಎಂದು ಸ್ತ್ರೀ ಸ್ವಾತಂತ್ರ್ಯವಾದಿಗಳು ಟೀಕಿಸುತ್ತಾರೆ. ಅದು 'ಲಿಂಗ ನಿರಪೇಕ್ಷ ಸಿದ್ಧಾಂತ'ವೆಂಬ ಆಪಾದನೆ ಇದೆ.

ಜನ್ಮ, ಬಾಲ ಸಂಗೋಪನ ಹಾಗೂ ಸಮಾಜೀಕರಣದಲ್ಲಿ ಕುಟುಂಬ ವಹಿಸುವ ಪಾತ್ರಗಳನ್ನು ಮಾರ್ಕ್ಸ್ ಸಿದ್ಧಾಂತ ಕಡೆಗಣಿಸುತ್ತದೆ.

ಸ್ತ್ರೀ-ಪುರುಷರ ಪತಿ-ಪತ್ನಿ ಸಂಬಂಧ, ಕಾಮ-ವಾಸನೆ, ದಾಂಪತ್ಯ ಜೀವನ, ಸಂಗೋಪನ, ಹೆಣ್ಣಿನ ಸಾಮಾಜಿಕ ಜೀವನ ಇವುಗಳ ಬಗ್ಗೆ ಮಾರ್ಕ್ಸ್‌ವಾದದಲ್ಲಿ ಸ್ಥಾನವೇ ಇಲ್ಲ.

"ದಾಂಪತ್ಯ ಜೀವನದ ಕ್ರಿಯೆ ತಿಳುವಳಿಯಿಂದ ನಡೆಯಬೇಕೆಂದು ಅವನ ಮತವಾಗಿತ್ತು. ಪ್ರಜೋತ್ಪಾದನಾ ಪ್ರವೃತ್ತಿಯು ಜನತೆಯ ಮೂಲ ಪ್ರಜ್ಞೆಯಿಂದ ನಿಯಂತ್ರಿತವಾಗುವುದು. ನೈತಿಕವಾಗಿ ಹೆಚ್ಚು ಗ್ರಾಹ್ಯವಾದ ಸಂಗತಿ" ಎಂದು ಮಾರ್ಕ್ಸ್‌ನ ಮಿತ್ರ ಏಂಜಲ್ಸ್‌ನ ಮತ-ವಾಗಿದೆ.

"ಜನಸಂಖ್ಯೆಯಲ್ಲಿ ವರ್ಗರಚನೆಯನ್ನು ಮರೆ-ತರೆ ಜನಸಂಖ್ಯೆ ಒಂದು ಅಮೂರ್ತ ಸಂಗತಿಯಾಗಿ ಉಳಿಯುತ್ತದೆ" ಎಂದು ಮಾರ್ಕ್ಸ್ ಹೇಳಿದ್ದಾನೆ. ಜನಸಂಖ್ಯಾ ಸಮಸ್ಯೆಗೆ ಒಂದು ಐತಿಹಾಸಿಕ ವಿಶೇಷತ್ವ (historic specificity) ಇದೆ. ಅದರ ಬಗ್ಗೆ ಮಾರ್ಕ್ಸ್ ಸ್ಪಷ್ಟವಾದ ನಿಲುವನ್ನು ತಳೆಯುವುದಿಲ್ಲ. ಕಾರ್ಮಿಕರ ಆರ್ಥಿಕ ಉನ್ನತಿ-ಯಲ್ಲಿ ಮಾರ್ಕ್ಸ್‌ವಾದ ಬಹಳ ವರ್ಚಸ್ವಿ ಹಾಗೂ ಪರಿಣಾಮಕಾರಿ ಪಾತ್ರವನ್ನು ಖಂಡಿತವಾಗಿಯೂ ವಹಿಸಿದೆ. ಆದರೆ ಕಾರ್ಮಿಕರ ಕೌಟುಂಬಿಕ ಜೀವನದ ಮಟ್ಟವನ್ನು ಏರಿಸುವಲ್ಲಿ ಮರ್ಯಾದಿತ ಕುಟುಂಬದ ಮಹತ್ವದ ಬಗ್ಗೆ ಹಾಗೂ ಆ ಸಂಕಲ್ಪನೆಯ, ಪರಿಕಲ್ಪನೆಯ ಬಗ್ಗೆ ಅವನು ಯೋಚಿಸಲಿಲ್ಲ.

ಜನಸಂಖ್ಯಾ ಸಮಸ್ಯೆಯು ಜಾಗತಿಕ ಸಮಸ್ಯೆ-ಯಾಗಿದೆ. ಕೆಲ ಸಾಮ್ಯವಾದಿ ದೇಶಗಳಲ್ಲಿಯೂ ಈ ಸಮಸ್ಯೆ ಇದೆ. ಅದರ ಬಗ್ಗೆ ಕಾರ್ಯಕ್ರಮಗಳನ್ನೂ ಹಮ್ಮಿಕೊಂಡಿದೆ. ಹಂಗರಿ, ಪೋಲಂಡ್, ಕ್ಯೂಬಾ, ಯುಗೋಸ್ಲಾವಿಯಾ, ಚೀನ ಮುಂತಾದ ಸಾಮ್ಯವಾದಿ ದೇಶಗಳಲ್ಲಿ ಸ್ವಯಂಸೇವಾ ಸಂಸ್ಥೆಗಳಿದ್ದು ಅವು ಜನಸಂಖ್ಯಾ ನಿಯಂತ್ರಣದ ಕಾರ್ಯಕ್ರಮದಲ್ಲಿ ತೊಡಗಿವೆ. ಅವು 'ಅಂತಾರಾಷ್ಟ್ರೀಯ ನಿಯೋಜಿತ ಪಾಲಕತ್ವ ಒಕ್ಕೂಟ'ದ ಸದಸ್ಯತ್ವ ಹೊಂದಿವೆ. ಕುಟುಂಬ ನಿಯೋಜನವನ್ನು ಆಚರಿಸುವುದು ಚೀನ ದೇಶದ ನಾಗರಿಕರ ಸಂವಿಧಾನಿಕ ಕರ್ತವ್ಯವಾಗಿದೆ ಎಂದು ೧೯೮೨ರಲ್ಲಿ ಚೀನ ದೇಶದ ಸಂವಿಧಾನದ ೪೯ ನೇ ವಿಧಿಯು ಹೇಳುತ್ತದೆ. ರಶಿಯಾದಲ್ಲಿ ಮಾತ್ರ ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮಗಳಿಲ್ಲ. ಭಾರತದಲ್ಲಿಯ ಸಾಮ್ಯವಾದಿಗಳಿಂದ ಈಗ ಆಳಲ್ಪಡುತ್ತಿರುವ ರಾಜ್ಯಗಳಾದ ತ್ರಿಪುರಾ, ಪ. ಬಂಗಾಲಗಳಲ್ಲಿ ಕುಟುಂಬ ಕಲ್ಯಾಣ ಕೇಂದ್ರಗಳು ಸಂಪೂರ್ಣವಾಗಿ ಕೇಂದ್ರ ಸರಕಾರದ ಹಣ-ಕಾಸಿನ ನೆರವಿನಿಂದ ನಡೆಯುತ್ತವೆ ಎಂಬ ಸಂಗತಿ ಗಮನಾರ್ಹವಾಗಿದೆ.

## ಮಹಾತ್ಮಾ ಗಾಂಧಿ

ಮಹಾತ್ಮಾ ಗಾಂಧೀಯವರು ಯಾವುದೇ ಸಮಸ್ಯೆಯ ಬಗ್ಗೆಯೂ ತಮ್ಮದೇ ಆದ ದೃಷ್ಟಿ-ಕೋನವುಳ್ಳವರಾಗಿದ್ದರು. ಅದರಲ್ಲಿ ಜನಸಂಖ್ಯಾ ಸಮಸ್ಯೆಯೂ ಒಂದು. ಸಂತತಿ ನಿಯಮದ ಸಾಧನ

ಗಳ ಬಗ್ಗೆ ಅವರ ವಿರೋಧವಿತ್ತು. ನೈತಿಕ ಬ್ರಹ್ಮಚರ್ಯದ ಮಾರ್ಗವನ್ನು ಅವರು ಬೆಂಬಲಿಸಿದರು.

"ವಿಷಯ ವಾಸನೆಯಿಂದ ಮಾತ್ರ ಹತ್ತಿರ ಬರುವ ಪತಿಯಲ್ಲಿ 'ಇಲ್ಲ' ಎಂದು ಮಹಿಳೆಯರು ಸ್ಪಷ್ಟವಾಗಿ ಹೇಳಬೇಕು." ಎಂದು ಗಾಂಧೀಜಿ ಬರೆದಿದ್ದಾರೆ. ಮೂರು ನಾಲ್ಕು ಮಕ್ಕಳಿಗಿಂತ ಹೆಚ್ಚಿಗೆ ಇರುವುದು ಅನೈತಿಕವಾದುದು. ಅನಂತರ ಪತಿ ಪತ್ನಿಯರು ಪ್ರತ್ಯೇಕವಾಗಿರಬೇಕು ಎಂಬ ಆಶಯದ ಮಾತುಗಳನ್ನು ಅವರು ಕುಟುಂಬ ಯೋಜನೆಯ ಪ್ರವರ್ತಕಿ ಮಾರ್ಗರೆಟ್ ಸ್ಯಾಂಗರ್ ಎಂಬವರೊಂದಿಗಿನ ಸಂಭಾಷಣೆಯಲ್ಲಿ ಹೇಳಿದ್ದಾರೆ. ಈ ಸಲಹೆ ವ್ಯಾವಹಾರಿಕವಲ್ಲ. ಇದರಿಂದ ಘಟಸ್ಫೋಟವಾಗುತ್ತದೆ ಎಂದು ಸ್ಯಾಂಗರ್ ಅವರು ವಾದಿಸಿದರೂ ಅವರಿಬ್ಬರಲ್ಲಿ ಒಮ್ಮತವಾಗಲೇ ಇಲ್ಲ.

ಗಾಂಧೀಜಿಯ ದೃಷ್ಟಿಕೋನದ ಮೇಲೆ ವಿಷಯ ಸುಖದ ಕಲ್ಪನೆಯ ಪ್ರಭಾವ ಬಹಳವಾಗಿತ್ತು. ವಿವಾಹಾವಸ್ಥೆಯಲ್ಲಿ ಒತ್ತಾಯದ ಬ್ರಹ್ಮಚರ್ಯದ ವಿರುದ್ಧವಾಗಿದ್ದ ಮಾನಸಿಕ ತಜ್ಞರ ಅಭಿಪ್ರಾಯಗಳು ಅವರ ಮತವನ್ನು ಬದಲಿಸಲು ಶಕ್ತವಾಗಲಿಲ್ಲ.

"ನೀತಿ ಸಂಹಿತೆಯನ್ನು ಪಾಲಿಸುವುದು ಅವಶ್ಯ. ಐಷಾರಾಮ ಮತ್ತು ಅವಶ್ಯವಾದರೆ ಆರೋಗ್ಯವನ್ನೂ ತ್ಯಜಿಸುವ ನಿರ್ಧಾರ ಅವಶ್ಯ. ಆರೋಗ್ಯಕ್ಕಿಂತಲೂ ಮೌಲ್ಯ ಹೆಚ್ಚಿನದು" ಎಂಬುದು ಗಾಂಧೀಜಿಯ ನಿಲುವಾಗಿತ್ತು.

ಮಾರ್ಗರೆಟ್ ಸ್ಯಾಂಗರ್ ಮತ್ತು ಗಾಂಧೀಜಿ ಇವರಿಬ್ಬರ ಮಧ್ಯದ ವೈಷಮ್ಯ ಮೂಲಭೂತ ಸ್ವರೂಪದ್ದಾಗಿತ್ತು. ಫ್ರಾಯಿಡ್ ಮತ್ತು ಹೆವಲಾಕ್ ಎಲಿಸಿ ಇವರ ಮಾನಸಿಕ-ಲೈಂಗಿಕ ವ್ಯಾವಹಾರಿಕ ವಾದವನ್ನು ಒಳಗೊಂಡ ಉತ್ಕ್ರಾಂತಿಯನ್ನು ಸ್ಯಾಂಗರ್ ಬೆಂಬಲಿಸಿದರು. ಪ್ರೇಮಯುಕ್ತ ಕಾಮದ ಆಧ್ಯಾತ್ಮಿಕ ಎತ್ತರವನ್ನು ತಲಪುವುದು ಸ್ಯಾಂಗರ್‌ರ ಉದ್ದೇಶವಾಗಿತ್ತು.

"ಪತಿ-ಪತ್ನಿಯರಂತೆ ಇರದೆ, ಅಣ್ಣ-ತಂಗಿಯರಂತೆ ಇರಲು ವಿವಾಹಿತರಿಗೆ ಸ್ವಾತಂತ್ರ್ಯವಿದೆ. ಅಂದರೇನೆ ಅದರಿಂದ ವಿಶ್ವ ಸೇವೆ ಸಾಧ್ಯ. ಅವರ ಪ್ರೇಮ ಕೆಟ್ಟ ವಾಸನೆಯಿಂದ ಮುಕ್ತವೂ ಆಗುವುದು. ಕೃತ್ರಿಮ ಸಾಧನೆಗಳು ದುಷ್ಟ ವೃತ್ತಿಗೆ ಆಸ್ಪದ ಕೊಡುವವು. ಸಂತತಿ ನಿಯಮದ ಸಾಧನಗಳ ಬಳಕೆಯೆಂದರೆ ರೋಗಕ್ಕಿಂತಲೂ ಭೀಕರವಾದ ಅಪಚಾರ ಮಾಡಿದಂತೆ. ಬೆಳೆಯುತ್ತಿರುವ ಜನಸಂಖ್ಯೆ ಒಂದು ಸಮಸ್ಯೆಯೇನೋ ನಿಜ. ಆದರೆ ಕೃತ್ರಿಮ ಉಪಾಯಗಳಿಂದ ಅದನ್ನು ತಡೆಯುವುದು ಮಾತ್ರ ಒಳ್ಳೆಯದಲ್ಲ. ನಿಮ್ಮ ಸಾಧನೆಗಳು ಜನತೆಯ ನೈತಿಕ ಬೆಳವಣಿಗೆಗೆ ಅನುಕೂಲಕರವಾಗಿರಬೇಕು. ಆಹಾರ, ನಿದ್ದೆಯಂತೆ ಲೈಂಗಿಕ ಕ್ರಿಯೆಯೂ ಅನಿವಾರ್ಯ ಎಂದು ತಿಳಿಯುವುದು ಅಜ್ಞಾನದ ಪರಮಾವಧಿಯಾಗಿದೆ. ಜಗತ್ತಿನ ಸರ್ವತೋಮುಖ ಬೆಳವಣಿಗೆಗೆ ಪ್ರಜೋತ್ಪಾದನದ ನಿಯಂತ್ರಣವೂ ಅವಶ್ಯವೆನಿಸಬಹುದು. ಇದನ್ನು ತಿಳಿದುಕೊಂಡವನು ತನ್ನ ಕಾಮವಾಸನೆಯನ್ನು ನಿಯಂತ್ರಿಸುವನು. ತನ್ನ ಮಕ್ಕಳ ಸೌಖ್ಯಕ್ಕೆ ಅವಶ್ಯವಾದ ಜ್ಞಾನ ಕೊಡಲು ಸಿದ್ಧನಿರುವನು ಮತ್ತು ಭವಿಷ್ಯತ್ತಿನ ಜನಾಂಗಕ್ಕೆ ಲಾಭವನ್ನು ಕೊಡುವನು.

ಸ್ತ್ರೀ ಪುರುಷರ ಸಂಬಂಧಗಳು ಪರಸ್ಪರ ಪ್ರೀತಿದಾಯಕವೂ ಉಪಕಾರಿಯೂ ಆನಂದದಾಯಕವೂ ಆಗಿರಬಲ್ಲದೆಂದು ಎಂದೆಂದಿಗೂ ಗಾಂಧೀಜಿ ತಮ್ಮ ವೈಯಕ್ತಿಕ ಜೀವನದಲ್ಲೂ ಭಾವಿಸಲಿಲ್ಲ. ಲೈಂಗಿಕ ಸಂಬಂಧವೆಂದರೆ ವಿಕೃತ ಸಂಬಂಧವೆಂದೇ ಅವರ ನಿಶ್ಚಿತ ಮತವಾಗಿತ್ತು. 'ಮಕ್ಕಳು ಬೇಕಾದಾಗ ಮಾತ್ರ' ಸಂಭೋಗಾಸಕ್ತರಾಗಬೇಕೆಂದು ಅವರ ಮತವಾಗಿತ್ತು. "ಯಾವ ದಿವಸದಿಂದ ಬ್ರಹ್ಮಚರ್ಯ ಪಾಲಿಸಲು ನಿರ್ಧರಿಸಿದೆನೋ ಅಂದಿನಿಂದ ಸ್ವಾತಂತ್ರ್ಯ ಸುರುವಾಯಿತು. ನನ್ನ ಪತ್ನಿ ಸ್ವತಂತ್ರಳಾದಳು. ಪತಿ ಮತ್ತು ಯಜಮಾನ

ಎಂಬ ಆಕೆಯ ಮೇಲಿನ ನನ್ನ ಸತ್ತೆ ಕೊನೆಗೊಂಡಿತು," ಎಂದು ಅವರು ಹೇಳುತ್ತಾರೆ.

"ಜನಸಾಮಾನ್ಯರ ಸೇವೆಗಾಗಿ ನಿಮ್ಮ ಮೇಲೆಯೇ, ನೀವು ಹೇರಿಕೊಂಡ ಬಂಧನಗಳಿಂದ ನೀವು ಪಡೆದ ಸಿದ್ಧತೆ ಎಂದರೆ ಇಡೀ ಇತಿಹಾಸದಲ್ಲೇ ಅದ್ವಿತೀಯವಾದುದು." ಎಂದು ಗಾಂಧೀಜಿಯವರಿಗೆ ಎರಿಕ್ ಎರಿಕ್‌ಸನ್ ಹೇಳುತ್ತಾರೆ.

"ಈ ವಿಷಯದಲ್ಲಿ ಗಾಂಧೀಜಿ ಬಹಳ ತಪ್ಪು ಮಾಡಿದರು. ಅವರ ಧೋರಣೆ ವಿಫಲಕಾರಿಯಾಗಿದೆ, ಆತಂಕದಾಯಕವಾಗಿದೆ, ಮನೋದೌರ್ಬಲ್ಯದ ದಾರಿಯಾಗಿದೆ, ಎಲ್ಲ ಶಾರೀರಕ ಹಾಗೂ ಮಾನಸಿಕ ಜಾಡ್ಯಗಳ ಮೂಲವಾಗಿದೆ. ಕಾಮ ನಿಯಂತ್ರಣ ಪ್ರಶ್ನೆಯಿಂದ ಅವರು ಇಷ್ಟೇಕೆ ತ್ರಸ್ತರಾಗಿದ್ದಾರೆಂಬುದು ನನಗಂತೂ ತಿಳಿಯದು. ಅದು ಮಹತ್ವದ ಪ್ರಶ್ನೆ. ಅವರು ತಳೆದ ನಿಲುವು ವಿಚಿತ್ರವಾಗಿದೆ. ಅನೈಸರ್ಗಿಕವಾಗಿದೆ," ಎಂದು ಪಂಡಿತ ನೆಹರೂ ಬರೆದಿದ್ದಾರೆ.

"ಲೈಂಗಿಕತೆ ಶುದ್ಧ, ಸುಂದರ ಹಾಗೂ ಜೀವನಕ್ಕೆ ಪೋಷಕ ಎಂಬ ಮಾತುಗಳು ಗಾಂಧೀಜಿಯವರಿಗೆ ಎಂದಿಗೂ ಒಪ್ಪಿಗೆಯಾಗಲಿಲ್ಲ. ಇದಕ್ಕೆ ಕಾರಣ ಅವರ ತಂದೆಯವರ ನಿಧನ ಸಮಯದಲ್ಲಿ ಅವರಿಗಾದ ಕಟು ಅನುಭವ ನೀಡಿದ ಘಟನೆ," ಎಂದು ಮಾರ್ಗರೆಟ್ ಸ್ಯಾಂಗರ್ ಗಾಂಧೀಜಿಯ ಬಗ್ಗೆ ಹೀಗೆ ಹೇಳಿದ್ದಾರೆ.

"ಗಾಂಧೀಜಿಯರ ಈ ವಿಚಾರಗಳು ಹಾಗೂ ಮಾತುಗಳು ಸಾಮಾನ್ಯರಿಗೆ ನೀಗುವಂತಿರಲಿಲ್ಲ. ಜಯಪ್ರಕಾಶ ನಾರಾಯಣ ಮತ್ತು ಪ್ರಭಾವತಿಯಂಥವರು ಅವುಗಳನ್ನು ಒಪ್ಪಿಕೊಂಡು ಆಚರಣೆಯಲ್ಲೂ ತಂದರು. ಇವು ಅಪವಾದಗಳು."

ಜನಸಂಖ್ಯಾ ಸಮಸ್ಯೆಯ ವಿಷಯದಲ್ಲಿ ಗಾಂಧೀಜಿಯ ಮನಸ್ಸಿನಲ್ಲಿ ದ್ವಂದ್ವವಿದ್ದಿತು. ಇದು ಅವರ ವಿಚಾರಗಳ ಮೂಲಕ ವ್ಯಕ್ತವಾಗುತ್ತದೆ. "ಸಂತತಿ ನಿಯಂತ್ರಣದ ಬಗ್ಗೆ ಎರಡು ವಿಚಾರಗಳಿಲ್ಲ. ಸಂಯಮ ಮತ್ತು ಬ್ರಹ್ಮಚರ್ಯ ಅದಕ್ಕೆ ಅಪರಂಪರಾಗತವಾದ ಉಪಾಯಗಳು. ರಾಮಬಾಣದಿಂದ ಹಲವಾರು ಲಾಭಗಳಿವೆ. ಕೃತ್ರಿಮ ಸಾಧನಗಳು ಸಂಯಮಶೀಲತೆಯನ್ನು ನಷ್ಟ ಮಾಡುತ್ತವೆ. ಕಾರಣ ಜನಲಜ್ಜೆಯೂ ಹೆದರಿಕೆಯೂ ಇಲ್ಲದಂತಾಗುತ್ತದೆ. ಅತಿರೇಕ ಭೋಗದಿಂದ ನಪುಂಸಕತ್ವವೂ ಬರುತ್ತದೆ." ಅವರ ಈ ಚಿಂತೆ ಭಯ ಅನುಭವ ಸವ್ಯವಾಗಿದೆ.

ಅವರ ವಿಚಾರಗಳ ಪರಿಣಾಮ ಪ್ರಥಮ ಪಂಚವಾರ್ಷಿಕ ಯೋಜನೆಯ ಮೇಲೆ ಅಪ್ರತ್ಯಕ್ಷವಾಗಿ ಆಗಿರಬೇಕು. ಏಕೆಂದರೆ, ಭಾರತದ ೩೬ ಕೋಟಿ ಜನಸಂಖ್ಯೆ ನಿಯಂತ್ರಣಕ್ಕಾಗಿ ೬೫ ಕೋಟಿ ರೂಪಾಯಿಗಳನ್ನು ಮಾತ್ರ ನಿರ್ದಿಷ್ಟಪಡಿಸಲಾಯಿತು. ಆಗಿನ ಮುಂಬಯಿ ಸರಕಾರದ ಕುಟುಂಬ ನಿಯಂತ್ರಣ ಯೋಜನೆಯ ಕಾರ್ಯಕ್ರಮಗಳು ಬಳಕೆಗೆ ಬರಲೇ ಇಲ್ಲ. ಕಾರಣ ಅವುಗಳು ಕಾನೂನುಜನ್ಯವಾಗಿರಲಿಲ್ಲ.

ಮಾಲ್ಥಸ್, ಮಾರ್ಕ್ಸ್ ಮತ್ತು ಗಾಂಧಿ ಇವರು ಈ ಮೂರು ದಶಕಗಳಲ್ಲಿಯ ಮಹಾವ್ಯಕ್ತಿಗಳು. ಅವರೆಲ್ಲರ ಜನಸಂಖ್ಯಾ ನಿಯಂತ್ರಣದ ವಿಚಾರಗಳನ್ನು ಇಲ್ಲಿ ನೋಡಲಾಗಿದೆ.

ಮಾರ್ಕ್ಸ್‌ನನ್ನು ಮನ್ನಿಸುವ ಹಲವಾರು ದೇಶಗಳಲ್ಲಿಯೂ ಜನಸಂಖ್ಯಾ ನಿಯಂತ್ರಣ ಯೋಜನೆಗಳಿವೆ; ಗಾಂಧೀಜಿಯವರನ್ನು ಮನ್ನಿಸುವ ಭಾರತದಲ್ಲೂ ಇವೆ. ಇವು ಆಯಾ ದೇಶಗಳು ಮಾಲ್ಥಸ್‌ನಿಗೆ ಅರ್ಪಿಸಿದ ಶ್ರದ್ಧಾಂಜಲಿ ಎಂದೇ ಹೇಳಬೇಕು. ಮಾಲ್ಥಸ್‌ನ ವಿಚಾರಗಳು ಕನಿಷ್ಟಪಕ್ಷ ಬರಲಿರುವ ೧೦೦ ವರ್ಷಗಳವರೆಗೆ ಸುಸಂಗತವಾಗಿಯೇ ಉಳಿಯುವವು, ಏಕೆಂದರೆ, ಅವುಗಳಲ್ಲಿಯೇ ಜಗತ್ತಿನ ಕಲ್ಯಾಣವಿದೆ. ✡





# ಲಿಪ್‌ಸ್ಟಿಕ್

## ನಿಮ್ಮ ಸ್ವಭಾವವನ್ನು ಪರಿಚಯಿಸುತ್ತದೆಯೆ?

ಸತ್ಯನಾರಾಯಣ ಹೆಚ್ಚಾರ್

ಇಂದಿನ ಈ ನವನಾಗರಿಕತೆಯ ಪ್ರಪಂಚದಲ್ಲಿ ಸ್ತ್ರೀಯರು ಹೆಚ್ಚು ಹೆಚ್ಚು ಅಲಂಕಾರಪ್ರಿಯರಾಗುತ್ತಿದ್ದಾರೆ. ಅವರು ಅನೇಕ ರೀತಿಯ ಅಲಂಕಾರ ಸಾಮಗ್ರಿಗಳನ್ನು ಉಪಯೋಗಿಸುತ್ತಾರೆ. ಉದಾಹರಣೆಗೆ ತಲೆಗೆ ಸುಗಂಧ ಮಿಶ್ರಿತ ಎಣ್ಣೆ, ಶಾಂಪೂ ಇತ್ಯಾದಿ. ಮುಖಕ್ಕೆ ಸ್ನೋ, ಪೌಡರ್, ಕಣ್ಣಿಗೆ ಕಾಡಿಗೆ, ಹುಬ್ಬಿಗೆ ಬಣ್ಣ, ಕೈ ಬೆರಳುಗಳಿಗೆ ಬಣ್ಣ, ತುಟಿಗೆ ಬಣ್ಣ (ಲಿಪ್‌ಸ್ಟಿಕ್) ಇತ್ಯಾದಿಗಳು. ಜೊತೆಗೆ ಅವರು ಬಟ್ಟೆ ಬರೆಗಳನ್ನು ಸಹ ಎಚ್ಚರಿಕೆಯಿಂದ ಆಯ್ಕೆಗಳನ್ನು ಮಾಡಿಕೊಳ್ಳುತ್ತಾರೆ. ಉದಾ: ಸೀರೆಯ ಬಣ್ಣದ್ದೇ ಅಥವಾ ಅದಕ್ಕೆ ಸರಿಹೊಂದುವ ಬಣ್ಣದ ರವಿಕೆ, ಅದಕ್ಕೆ ಸರಿಹೊಂದುವ ಬಳೆ, ಕುಂಕುಮ, ಚಪ್ಪಲಿಗಳು ಇತ್ಯಾದಿ. ಒಟ್ಟಿನಲ್ಲಿ ಅವರು ತಮ್ಮ ಅಲಂಕಾರದಲ್ಲಿ ತಮ್ಮ ವ್ಯಕ್ತಿತ್ವ ಎದ್ದು ಕಾಣುವಂತೆ ರೂಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇದು ಒಂದು ರೀತಿಯ ಸೌಂದರ್ಯ ಪ್ರದರ್ಶನವೆನ್ನೋಣವೆ?

ಒಬ್ಬ ಪುರುಷ ಒಂದು ಹೆಣ್ಣಿನ ಕಡೆಗೆ ಆಕರ್ಷಿಸಲ್ಪಡಬೇಕಾದರೆ ಅದು ಅವಳ ಸೌಂದರ್ಯದಿಂದ. ಅವಳ ಸೌಂದರ್ಯದ ಪ್ರಮುಖ ಆಕರ್ಷಣೆ ಅವಳ ಅಲಂಕಾರ. ಅದರಲ್ಲೂ ಅವಳ ಅಲಂಕಾರದಲ್ಲಿ ಅವಳು ಉಪಯೋಗಿಸಿರುವ ತುಟಿ ಬಣ್ಣ. ಅದರ ಪ್ರಮಾಣ ಕಣ್ಣಿಗೆ ಹೆಚ್ಚು ಆಕರ್ಷಣೀಯವಾಗಿರುತ್ತದೆ. ಒಂದು ವೇಳೆ ಒಬ್ಬ ಹೆಂಗಸು, ಸಾಮಾನ್ಯವಾಗಿ ಎಲ್ಲರೂ ಉಪಯೋಗಿಸುವ ಬಣ್ಣದ ಲಿಪ್‌ಸ್ಟಿಕ್‌ಗಿಂತ ಬೇರೆಯದಾಗಲೀ, ಅಥವಾ ಎಲ್ಲರೂ ಉಪಯೋಗಿಸುವ ಪ್ರಮಾಣಕ್ಕಿಂತ ಸ್ವಲ್ಪ ಹೆಚ್ಚಾಗಿ ಉಪಯೋಗಿಸಿದಲ್ಲಿ ಅಂಥ ಹೆಂಗಸಿನೆಡೆಗೆ ಪುರುಷರು ಹೆಚ್ಚು ಆಕರ್ಷಿತರಾಗುತ್ತಾರೆ. ಹಾಗಾದರೆ ಈ 'ಲಿಪ್‌ಸ್ಟಿಕ್'ನಲ್ಲಿ ಅಂಥ ಆಕರ್ಷಕ ಗುಣವಿದೆಯೆ?

'ಹೌದು' ಎನ್ನುತ್ತಾರೆ ಬ್ರಿಟನ್ನಿನ ಮಹಿಳಾ ಮನೋವಿಜ್ಞಾನಿಯೊಬ್ಬರು. ಇದರ ಜೊತೆಗೆ ಒಬ್ಬ ಹೆಂಗಸು ಉಪಯೋಗಿಸುವ 'ಲಿಪ್‌ಸ್ಟಿಕ್'ನ ಬಣ್ಣ, ಪ್ರಮಾಣ ಇತ್ಯಾದಿಗಳಿಂದ ಆ ಹೆಂಗಸಿನ ಗುಣ, ಸ್ವಭಾವಗಳನ್ನು ಹೇಳಬಹುದೆಂದು ಈ ವಿಜ್ಞಾನಿಯ ಅಭಿಪ್ರಾಯ. ಅವರು ತಿಳಿಯಪಡಿಸಿರುವ ಅನೇಕ ಕುತೂಹಲಕರ ವಿಷಯಗಳಿಂದ ನಾವೂ ಸ್ವಲ್ಪ ನಮ್ಮ ನಿಮ್ಮ ವ್ಯಕ್ತಿತ್ವವನ್ನು ತಿಳಿಯೋಣವೆ?

೧. ನೀವು ನಿಮ್ಮ ತುಟಿಗೆ ಹಚ್ಚಿರುವ ಲಿಪ್‌ಸ್ಟಿಕ್ ನೀವು ಟೀ ಅಥವಾ ಕಾಫಿ ಕುಡಿಯುವಾಗ, ನೀವು ಕುಡಿಯುತ್ತಿರುವ ಲೋಟಕ್ಕೆ

ಅಂಟಿಕೊಂಡಿದೆಯೆ? ಅಥವಾ ನೀವು ನಿಮ್ಮ ಪ್ರಿಯಕರ ಅಥವಾ ಗಂಡನೊಂದಿಗೆ ನಡೆಸುವ ಸರಸ ಸಲ್ಲಾಪ ಕಾಲದಲ್ಲಿ ನಿಮ್ಮ ತುಟಿಯ ಬಣ್ಣ ಅವನ ಅಂಗಿಗೆ ಮೆತ್ತಿಕೊಂಡಿದೆಯೆ? ಅಥವಾ ನೀವು ಸೇದುವ ಸಿಗರೇಟ್ (ಅಭ್ಯಾಸ ಇರುವವರಿಗೆ ಮಾತ್ರ ಅನ್ವಯ) ತುದಿಗೆ ನಿಮ್ಮ ತುಟಿ ಬಣ್ಣ ಮೆತ್ತಿಕೊಂಡಿದೆಯೆ? ಹಾಗಾದರೆ ನೀವು ಬಹಳ ಉತ್ಸಾಹಿಗಳು, ವಿಲಾಸ ಪ್ರಿಯರು, ಕಾಮುಕಿಗಳು, ಬಹಳ ಉತ್ತೇಜಿತರಾಗುವವರು ಹಾಗೂ ಉತ್ತೇಜನ ಕೊಡುವಂಥ-ವರಾಗಿರುತ್ತೀರಿ. ನೀವು ಇನ್ನೊಬ್ಬರಿಂದ ಅದರಲ್ಲೂ ಗಂಡಸರಿಂದ ಹೊಗಳಿಸಿಕೊಳ್ಳುವುದನ್ನು ಇಷ್ಟಪಡುತ್ತೀರಿ ಎಂದರೆ ತಪ್ಪಾಗಲಾರದು.

೨. ನಿಮ್ಮ ತುಟಿಗೆ ಹಚ್ಚಿರುವ ಬಣ್ಣ ನಿಮಗೊಬ್ಬರಿಗೆ ಮಾತ್ರ ಕಾಣುತ್ತಿದೆಯೆ? ಅದು ಇನ್ನೊಬ್ಬರಿಗೆ ಕಾಣಿಸಲು ಆಶಿಸುವುದಿಲ್ಲವೆ? ಹಾಗಾದರೆ ನೀವು ಅಂತರ್ಮುಖಿಗಳು. ಹೊರ ಪ್ರಪಂಚದ ಬಗ್ಗೆ ಹೆಚ್ಚು ಕಾಳಜಿ ಇಲ್ಲ. ಇನ್ನೊಬ್ಬರಲ್ಲಿ ವಿಶ್ವಾಸ ಕಡಿಮೆ, ಹೆದರಿಕೆ ಜಾಸ್ತಿ. ಜೊತೆಗೆ ಪ್ರೀತಿ, Romance ಇವುಗಳಿಂದ ಮೈಲು ದೂರ.

೩. ನೀವು ನಿಮ್ಮ ತುಟಿಗೆ 'ಲಿಪ್‌ಸ್ಟಿಕ್' ಹಚ್ಚುವಾಗ, ಹೆಚ್ಚು ವೇಳೆ ತೆಗೆದುಕೊಳ್ಳದೆ, ಅವಸರವಸರವಾಗಿ, ಅಲಕ್ಷ್ಯದಿಂದ, ಬೇಕಾಬಿಟ್ಟಿಯಾಗಿ, ನಿಮ್ಮ ಸೀರೆ, ಕುಂಕುಮ ಇತ್ಯಾದಿಗಳಿಗೆ ಹೊಂದಿಕೊಳ್ಳದೇ ಇರುವಂಥ ಯಾವುದೋ ಒಂದು ಬಣ್ಣದ 'ಲಿಪ್‌ಸ್ಟಿಕ್'ನ್ನು ಲೇಪಿಸಿಕೊಳ್ಳುತ್ತೀರಾ? ಹಾಗಿದ್ದಲ್ಲಿ ನೀವು ಬಹು ಚಂಚಲ ಸ್ವಭಾವದವರು, ಶೀಘ್ರ ಸ್ವಭಾವಿ, ಆವೇಗಿಗಳಾಗಿರುತ್ತೀರಿ. ನೀವು ಇನ್ನೊಬ್ಬರಿಗೆ ಸಲಹೆ, ಸೂಚನೆಗಳನ್ನು ಅವರಿಗೆ ಬೇಕಿರಲಿ ಬಿಡಲಿ ಕೊಡಲು ಮುಂದೆ ಬರುತ್ತೀರಿ.

೪. ನೀವು 'ಲಿಪ್‌ಸ್ಟಿಕ್'ನ್ನು ಹಚ್ಚಲು ಆಯ್ಕೆ ಮಾಡುವಾಗ ಬಹಳ ನಿಧಾನವಾಗಿ ನಿಮ್ಮ ಅಲಂಕಾರಕ್ಕೆ ತಕ್ಕಂತಹ ಬಣ್ಣವನ್ನು ಹುಡುಕಿ ತೆಗೆದುಕೊಂಡು, ಅದನ್ನು ಲೇಪಿಸಿಕೊಳ್ಳುವಾಗ ಬಹು ಜಾಣ್ಮೆಯಿಂದ ತುಟಿಯ ಪ್ರತಿ ರೇಖೆಗಳನ್ನು ಕೂಲಂಕಷವಾಗಿ ಅವಲೋಕಿಸಿ, ಗೆರೆಗಳಿಗೆ ತಕ್ಕಂತೆ ಲೇಪಿಸಿಕೊಳ್ಳುವವರಾಗಿದ್ದರೆ, ನೀವು ಆತ್ಮ ವಿಶ್ವಾಸಿಗಳು, ಬಹು ನಿಧಾನಿಗಳು. ಯಾವ ಕೆಲಸ ಮಾಡಬೇಕಾದರೂ ಯೋಚಿಸಿ ಮಾಡುತ್ತೀರಿ; ಆಲಸಿಗಳಲ್ಲ. ಜೊತೆಗೆ ಧೈರ್ಯಶಾಲಿಗಳೂ ಆಗಿರುತ್ತೀರಿ.

೫. ನಿಮಗೆ ನಿಮ್ಮಲ್ಲಿರುವ ಹಳೇ 'ಲಿಪ್‌ಸ್ಟಿಕ್' ಸಾಕೆ? ಅದನ್ನು ಹಚ್ಚಿಯೇ ತೃಪ್ತಿ ಪಡುತ್ತೀರಾ? ಹೊಸ ಹೊಸ ಬಣ್ಣದ, ಮಾದರಿಯ ಲಿಪ್‌ಸ್ಟಿಕ್ ಪಡೆಯಲು ಆಸೆಯಿಲ್ಲವೇ? (ಹಣದ ಅಡಚಣೆ ಬಿಟ್ಟು) ಅಂದರೆ ನೀವು ಸ್ವಲ್ಪ ಮಂದ ಬುದ್ಧಿಯವರು. ಸಮಯ ಪ್ರಜ್ಞೆಯಿಲ್ಲದ ಗಡಿಬಿಡಿಯ ಹಾಗೂ ಮರೆಗುಳಿ



ಹೆಂಗಸರೆ?

೬. ನಿಮ್ಮ ಅಲಂಕಾರದ ಮೇಜಿನ ತುಂಬಾ ಹಳೆಯ 'ಲಿಪ್‌ಸ್ಟಿಕ್' ಡಬ್ಬಿಗಳು ತುಂಬಿ ಕೊಂಡಿವೆಯೆ? ನೀವು ಬಹಳ ಆಶಾವಾದಿಗಳೂ ಭಾವುಕರೂ ಆಗಿರುತ್ತೀರಿ, ನಿಮಗೆ ಹಳೆಯ ನೆನಪುಗಳನ್ನು ಮೆಲಕು ಹಾಕುವುದರಲ್ಲಿ ಬಹಳ ಆನಂದವಾಗುತ್ತದೆ.

೭. ನಿಮ್ಮ ತುಟಿಯ ಮೇಲೆ ನೀವು ಲಿಪ್ ಸ್ಟಿಕ್ಕನ್ನು ಚುಕ್ಕೆ ಚುಕ್ಕೆಯ ರೂಪದಲ್ಲಿ ಲೇಪಿಸಲು ಇಚ್ಛಿಸುತ್ತೀರಾ? (ಈ ರೀತಿ ಹಚ್ಚುವುದು ಬಹಳ ಅಪರೂಪ) ಹಾಗಾದರೆ ನಿಮ್ಮನ್ನು ಬಹುಬೇಗ ವಶಮಾಡಿಕೊಳ್ಳಬಹುದು. ನೀವು ಬಹು ಭಾವು ಕರು, ನಿಮಗೆ ಸ್ನೇಹಿತರು ಜಾಸ್ತಿ.

೮. ನಿಮ್ಮ ತುಟಿಯ ತುದಿಯಲ್ಲಿ ಲಿಪ್‌ಸ್ಟಿಕ್ ಮಣ್ಣೆನೋಪಾದಿಯಲ್ಲಿ ಮೆತ್ತಿಕೊಂಡಿದೆಯೆ? ಹಾಗಿದ್ದಲ್ಲಿ ನೀವು ಅಂಜುಕುಳಿ ಸ್ವಭಾವ ದವರು. ನಿಮ್ಮಲ್ಲಿ ಆತ್ಮಸ್ಥೈರ್ಯ ಕಡಿಮೆ. ನಿಮಗೆ ಸ್ನೇಹಿತರು ಕಡಿಮೆ. ನೀವು ಸುರಕ್ಷಿತ-ರಲ್ಲವೆಂಬ ಭಾವನೆ ನಿಮ್ಮ ಮನಸ್ಸಿನಲ್ಲಿರುತ್ತದೆ. ಆದರೂ ನೀವು ಸುರಕ್ಷಿತ ಎಂದು ತೋರ್ಪಡಿಸಿ ಕೊಳ್ಳಲು ಸಾಹಸ ಮಾಡುತ್ತೀರಿ.

೯. ನಿಮ್ಮಲ್ಲಿ ಒಂದೇ 'ಲಿಪ್‌ಸ್ಟಿಕ್' ಇದೆಯೆ? ಇದನ್ನು ನೀವು ಜಾಗರೂಕರಾಗಿ, ಮಿತವ್ಯಯ ದಿಂದ ಲೇಪಿಸಿಕೊಳ್ಳುತ್ತೀರಾ? ಹಾಗಿದ್ದಲ್ಲಿ ನಿಮ್ಮದು ಬಹು ಚೌಕಾಸಿ ಸ್ವಭಾವ, ಜಿಪುಣರೂ ಆಗಿರಬಹುದು, ಜಾಗರೂಕರೂ ಹೌದು. ಮಾತನಾಡುವಾಗಲೂ ಎಷ್ಟು ಬೇಕೋ ಅಷ್ಟು ಮಾತ್ರ ಆಡುತ್ತೀರಿ. ಬಹು ವಿನಯಶೀಲರಾಗಿರು ತ್ತೀರಿ.

೧೦. ನಿಮ್ಮ ಅಲಂಕಾರ ಸಾಮಗ್ರಿಗಳ ಸಮೂಹದಲ್ಲಿ 'ಲಿಪ್‌ಸ್ಟಿಕ್'ದೇ ಹೆಚ್ಚು ಭಾಗ-ವಿದೆಯೆ? ಅವುಗಳಲ್ಲಿ ವಿವಿಧ ಬಣ್ಣಗಳಿವೆಯೇ? ಅಂತಾದರೆ ನೀವು ಚಂಚಲ ಸ್ವಭಾವದವರು. ಬಹಳ ಬದಲಾವಣೆಗಳನ್ನು ನಿರೀಕ್ಷಿಸುತ್ತೀರಿ, ಮಾರ್ಕೆಟ್‌ನಲ್ಲಿ ಯಾವ ಹೊಸ ರೀತಿಯ ಪದಾರ್ಥ ಕಂಡರೂ ಅದನ್ನು ಪಡೆಯಬೇಕೆಂಬ ಸ್ವಭಾವ ದವರು. ಅತಿ ಆಸೆಯೂ ನಿಮ್ಮಲ್ಲಿರುತ್ತದೆ.

ನಿಮ್ಮಲ್ಲಿ ಒಂದೂ 'ಲಿಪ್‌ಸ್ಟಿಕ್' ಡಬ್ಬಿಯೇ ಇಲ್ಲವೆ? ಎಂದೂ ಅದನ್ನು ನೀವು ಉಪಯೋ-ಗಿಸಿಯೇ ಇಲ್ಲವೆ? ಅಯ್ಯೋ ಪಾಪ, ಬೇಜಾರು ಮಾಡಿಕೊಳ್ಳಬೇಡಿ, ನಿವು ದೃಢ ಸ್ವಭಾವದವರು, ಧೈರ್ಯವಂತರು, ಆಶಾವಾದಿಗಳು, ಗುರಿ ಮುಟ್ಟಲು ಸಂಕಲ್ಪಮಾಡಿ ಅದನ್ನು ಸಾಧಿಸುವ ಧೈರ್ಯ ಸ್ಥೈರ್ಯ ನಿಮ್ಮಲ್ಲಿದೆ.

ಈಗ ನೀವೇ ನಿಮ್ಮ ಗುಣ ಸ್ವಭಾವದ ಪರಿಚಯ ಮಾಡಿಕೊಳ್ಳಬಹುದಲ್ಲವೆ? ✿



"ಹೆಂಗಸರು ಶೃಂಗಾರಕ್ಕಾಗಿ ಅಷ್ಟೊಂದು ಕಾಲವನ್ನೇಕೆ ವ್ಯಯ ಮಾಡುತ್ತಾರೆ?!" ಎಂದು ಒಬ್ಬ ಆಶ್ಚರ್ಯ ವ್ಯಕ್ತಪಡಿಸಿದ. ಇನ್ನೊಬ್ಬ ಅನುಭವಿ ನಗುತ್ತಾ,

"ಏಕೆಂದರೆ ಪುರುಷನ ದರ್ಶನಶಕ್ತಿ ವಿಚಾರಶಕ್ತಿಗಿಂತ ಹೆಚ್ಚಿರುತ್ತದೆ, ಅದಕ್ಕೆ" ಎಂದು ಹೇಳಿದನಂತೆ.

- ಎಸ್. ವಿಶ್ವನಾಥ

೮೬

# ವೈದಿಕ ಬೈಗಳು -ದ್ರಾಪೆ

ದ್ರಾಬೆ, ದ್ರಾಪೆ ಎಂಬ ಬೈಗಳ ಮಾತೊಂದು, ಹೆಚ್ಚಾಗಿ ಕರಾವಳಿ ಕರ್ನಾಟಕದಲ್ಲಿ ರೂಢಿಯಲ್ಲಿದೆ. ಎಲ್ಲ ಬೈಗಳ ಮಾತುಗಳಂತೆ ಇದೂ ಅಸ್ಪಷ್ಟವಾದ ಅರ್ಥದ್ದು. ಗೋಪಾಲಕೃಷ್ಣ ಅಡಿಗರು ಅದನ್ನು ತಮ್ಮ ಕಾವ್ಯದಲ್ಲಿ ಉಪಯೋಗಿಸಿ ಶಾಶ್ವತಗೊಳಿಸಿದ್ದಾರೆ. ಒಟ್ಟಾರೆ ಅದಕ್ಕೆ ದರಿದ್ರ, ನಾಚಿಕೆಗೆಟ್ಟ, ಹಿಂದಿಪ್ಪೋತ ಇತ್ಯಾದಿ ಅರ್ಥವನ್ನು ಊಹಿಸಬಹುದು. ಸಾಹಿತ್ಯ ಪರಿಷತ್ ಕೋಶದಲ್ಲಿ ಈ ಶಬ್ದ, ತಮಿಳು, ತೆಲುಗುಗಳಲ್ಲಿಯೂ ತುಸು ಉಚ್ಚಾರಭೇದದೊಡನೆ ಇದೆ ಯೆಂದು ಹೇಳಿ, ಅದು ಸಂಸ್ಕೃತ ದ್ರಾಪದಿಂದ ಬಂದದ್ದು ಎಂದಿದೆ. ಈ ಪದದ ಬೆನ್ನು ಹತ್ತಿ ಹೋದಾಗ ಅದು ವೇದಕಾಲದಷ್ಟು ಹಿಂದೆ ಹೋಗುತ್ತದಲ್ಲದೆ ಗ್ರೀಕಿನಲ್ಲಿಯೂ ಶಬ್ದ ಬಂಧು ಗಳನ್ನು ಹೊಂದಿದ್ದು ತಿಳಿಯಿತು. ಅದರ ಧಾತ್ವರ್ಥ (ದ್ರಾ) ಧಡಪಡಿಸುವುದು, ತಿರಿಯುವುದು, ಬಡತನದಲ್ಲಿರುವುದು, ಗರಜಿಯಲ್ಲಿರುವುದು ಇತ್ಯಾದಿ. ಜಡೆಗಟ್ಟಿದ ಕೂದಲಿನ ಶಿವನಿಗೆ ದ್ರಾಪಿ ಎಂಬ ಹೆಸರಿದೆ. ಶಿವನು ತಿರುಕನಾಗಿ ಓಡಾಡುವುದರಿಂದ ಈ ಹೆಸರು ಇದೆ. ಯಜುರ್ವೇದದ ವಾಜಸನೇಯ ಸಂಹಿತೆಯಲ್ಲಿ (೧೬,೪೭) ರುದ್ರನನ್ನು ಕುರಿತ "ದ್ರಾಪೇ, ಅಂಧಸಸ್ಪತೇ, ದರಿದ್ರ, ನೀಲಲೋಹಿತ" ಎಂದು ಆರಂಭವಾಗುವ ಮಂತ್ರವೊಂದಿದೆ. ಆದ್ದರಿಂದ ಈ ಯುಗದ ದರಿದ್ರ ದ್ರಾಪೆಗಳೂ ಒಳ್ಳೇ ಕಂಪನಿಯಲ್ಲಿದ್ದಾರೆ ಎನ್ನಬಹುದು!

ಹಲ್ಕಾ ಮನುಷ್ಯ, ಹಲ್ಕಾ ಮಾಲು, ಹಲ್ಕಟ್ ಹುಡುಗಿ, ಹಲ್ಕ ಆಗಿಹೋಯಿತು— ಎಂದು ಬಯ್ಯುವುದುಂಟು. ಇದರಲ್ಲಿಯೂ ಭಾಷೆಗಳು ಶಬ್ದಗಳನ್ನು ಎರವಲು ಪಡೆಯುವಾಗ ಮಾಡಿಕೊಳ್ಳುವ ಅರ್ಥವ್ಯತ್ಯಾಸ ಕಂಡುಬರುತ್ತದೆ. **ಹಲಕಾ** ಎಂದರೆ ಹಿಂದಿಯಲ್ಲಿ **ಹಗುರ** ಎಂದು ಅರ್ಥ. ಬಂಗಾಲಿ, ಮರಾಠಿಗಳಲ್ಲಿಯೂ ಅದೇ ಅರ್ಥದಲ್ಲಿ ಹಲ್ಕಾ ಪ್ರಯೋಗವಾಗುತ್ತದೆ. ತೂಕದಲ್ಲಿ ಕಡಿಮೆ, ಆದ್ದರಿಂದ ಯೋಗ್ಯತೆಯಲ್ಲಿ ಕೊರತೆ, ಸುಲಭ ಇತ್ಯಾದಿ ಅರ್ಥಗಳೊಡನೆ ಒಳ್ಳೆ (ಅರ್ಥಗಳಲ್ಲಿಯೂ ಉದಾ:—ಹಲಕೀ ಮುಸಕಾನ್ = ನಸು ನಗೆ) ಈ ಪದದ ಬಳಕೆ ಅಲ್ಲಿ ಇದೆ. ನಮ್ಮ **ಹಗುರ** ಶಬ್ದಕ್ಕಿರುವ ಎಲ್ಲ ಅರ್ಥಗಳೂ ಹಿಂದಿಯಲ್ಲಿ **ಹಲಕಾಕ್ಕೆ** ಇದೆಯೆನ್ನೋಣ. ಆದರೆ ಅದೇ ಶಬ್ದ ಕನ್ನಡಕ್ಕೆ ಬಂದಾಗ ಹಿಂದಿಯಲ್ಲಿ ಅದಕ್ಕಿರುವ ಕೆಟ್ಟ ಅರ್ಥಗಳು ಮಾತ್ರ ಬಂದವಲ್ಲದೆ ಆ ಕೆಟ್ಟ ಅರ್ಥಗಳಿಗೆ ಹೆಚ್ಚಿನ ಬಲವೂ ಬಂದಿದೆ. ಹಲ್ಕ ಆಗಿ ಹೋಯಿತು ಎನ್ನುವಾಗ ನಾವು ಅವಮಾನವನ್ನು ಕುರಿಯುತ್ತೇವೆ (ಅವ-ಮಾನ ಎಂದರೂ ಅಳತೆ ಕಡಮೆ ಎಂದೇ ಅರ್ಥ ತಾನೇ!) ಹಲ್ಕಟ್. ಹುಡುಗಿ ಎನ್ನುವಾಗ ಅವಳ ಚಾರಿತ್ರ್ಯಕ್ಕೇ ನಾವು ಹೆಸರಿಡುತ್ತೇವೆ.

**ಕಲಿ** ಎಂಬ ಶಬ್ದಕ್ಕೆ ಹಲವು ಇಷ್ಟಾನಿಷ್ಟ ಅರ್ಥಗಳು ಉಂಟು. ಆದರೆ ಯಾರಿಗೂ ಗೊತ್ತಿಲ್ಲ ಅನ್ನುವಂತಿಲ್ಲದ್ದು ಅದರ ದುಷ್ಟಾರ್ಥವೇ. ಹೀಗೆ **ಕಲಿಯುಗವೊಂದಿದೆ**; ಅವನಿಗೆ **ಕಲಿ** ಹಿಡಿದಿದೆ ಎನ್ನುತ್ತೇವೆ. ಅಮಂಗಲ, ಅನಿಷ್ಟ, ಅವಲಕ್ಷಣ, ದುರ್ದೈವದ ಸ್ವರೂಪದ್ದು ಕಲಿ. ಕಲಿ ಶಬ್ದದ ಈ ಅರ್ಥಗಳನ್ನು ಶೋಧಿಸುತ್ತ ಹೋದರೆ ನಾವು ಪುನಃ ಅಥರ್ವವೇದಕ್ಕೆ ಮುಟ್ಟುತ್ತೇವೆ. ಆ ವೇದದ ಒಂದು (೭, ೧೦೯, ೧) ಸೂಕ್ತದಲ್ಲಿ ಪಗಡೆಯಾಟದ ಸಂದರ್ಭದಲ್ಲಿ **ಕಲಿ**ಯ ಸುದ್ದಿ ಬರುತ್ತದೆ. ಕಲಿ ಎಂದರೆ ಇಲ್ಲಿ ಪಗಡೆಯಾಟದ ದಾಳದಲ್ಲಿ **ಒಂದು** ಚುಕ್ಕೆ ಇರುವ ಮುಖ. ದಾಳ ಒಗೆದಾಗ ಈ ಮುಖ ಮೇಲಾಗಿ ಬಿದ್ದರೆ ಆಟ ಕಳೆದು

ಕೊಂಡಂತೆ. ಹಿಂದೆ ಪಗಡೆಯಲ್ಲಿ ದಾಳವಾಗಿ ತಾರಿ ಮರದ ಬೀಜಗಳನ್ನು ಬಳಸುತ್ತಿದ್ದರು. ಅದಕ್ಕೂ **ಕಲಿ** ವೃಕ್ಷವೆಂದು ಹೆಸರು. ಪಗಡೆಯಲ್ಲಿ ಪಟ್ಟುಹಿಡಿದು ಒಂದಂಕೆ ಬೀಳುವುದಕ್ಕೆ ಒಂದು ದುಷ್ಟ ದೇವತೆ ಕಾರಣವೆಂದು ನಂಬಿಗೆ ಹುಟ್ಟಿ ಆ ದೈವಕ್ಕೆ **ಕಲಿ**ಯೆಂದು ಹೆಸರಿಡಲಾಯಿತು. ಅವನೇ **ಕಲಿಪುರುಷ.** ಒಂದಂಕಿ ಬಿದ್ದು ಸೋತಷ್ಟೂ ಆಡುತ್ತ ಹೋಗುವ ಹುಚ್ಚು ಕೂಡ ಕಲಿಯೇ. ನಳರಾಯನಿಗೆ, ಧರ್ಮರಾಜನಿಗೆ ಕಲಿ ಹಿಡಿಯಿತೆಂದರೆ ಇದೇ; ಕಲಿ ಶಬ್ದ ಬಹುಶಃ ಕಲ್ (ಎಣಿಸು) ಧಾತುವಿನಿಂದ ಹುಟ್ಟಿದೆ. ಕಲಿಯೆಂಬುದು ಎಣಿಕೆಯಲ್ಲಿ ಒಂದನೇ ಅಂಕೆಯಾದ್ದರಿಂದ ಅದಕ್ಕೆ ಆ ಹೆಸರು. ಮೇಲೆ ಹೇಳಿದ ಅಥರ್ವ ಮಂತ್ರದಿಂದ ಪಗಡೆ (ಅಕ್ಷ)ಯಲ್ಲಿ ಜಯವನ್ನು ಕೋರುವವನು ಕಲಿಯ ದಯೆ ದೊರಕಿಸಲು ಹೋಮ ಮಾಡುತ್ತಾನೆ.

ಸಂಸ್ಕೃತ **ದ್ಯೂತ**ದಿಂದ **ಜೂದು, ಜೂಜು, ದ್ಯೂತಕಾರ**ದಿಂದ ಜುಗಾರ-ಜುಗಾರಿ ಬಂತು. ದ್ಯೂತ್ ಶಬ್ದ ಹುಟ್ಟಿದ್ದು **ದಿವ್** ಧಾತುವಿನಿಂದ. ಅದು ಋಗ್ವೇದದಷ್ಟು ಹಳೆಯದು (ಅಕ್ಷೈರ್ಮಾ ದೀವ್ಯಂ ಕೃಷಿಂ ಇತ್ ಕೃಷಸ್ವ = ಅಕ್ಷಗಳಿಂದ (ಜೂಜು) ಆಡಬೇಡ, ಕೃಷಿ ಮಾಡು ಎಂದು ಋಗ್ವೇದ ಉಪದೇಶಿಸುತ್ತದೆ). ಈ ದಿವ್ (=ಜೂಜಾಡು) ಧಾತು ವೈದಿಕ ಸಂಸ್ಕೃತದಲ್ಲಿ ಮಾತ್ರವಲ್ಲ, ಪ್ರಾಚೀನ ಇರಾಣಿನ ಜೆಂದ್ ಮತ್ತು ಮಧ್ಯ ಯುರೋಪಿನ ಲಿಥುವೇನಿಯನ್ ಭಾಷೆಯಲ್ಲಿ ಸಂವಾದಿ ಧಾತುಗಳನ್ನು ಹೊಂದಿದೆ. ಜೂಜಿನ ಚಟ ಎಷ್ಟು ಹಳೆಯದೆಂದು ಇದು ತೋರಿಸುತ್ತದೆ. ಆರ್ಯರು ಬೇರೆ ಬೇರೆ ದಿಕ್ಕಿಗೆ ಚದರುವ ಮುಂಚೆಯೇ ಅದು ಅವರಿಗೆ ಅಂಟಿತ್ತು.

ಕವಡೆ ಅಥವಾ ದಾಳದಿಂದ ಆಡದೆ ಬೇರೊಂದು ಬಗೆಯ ಜೂಜು ಈಗ ಸಾರ್ವತ್ರಿಕವಾಗಿರುವ **ಲಾಟರಿ.** ಲಾಟರಿ ಇಟಾಲಿಯನ್ ಭಾಷೆಯಿಂದ ಬಂದದ್ದಾದರೂ ಜರ್ಮನ್ ಮೂಲದ್ದು. ಅದೇ ಮೂಲದ ಇಂಗ್ಲೀಷಿನ ಲಾಟ್ ಶಬ್ದ ಕಡ್ಡಿ ಅಥವಾ ಹುಲ್ಲಿನ ತುಣುಕನ್ನು ಒಂದು ಕಟ್ಟಿನಿಂದ ಅಥವಾ ರಾಶಿಯಿಂದ ಹೊರಗೆಳೆಯುವ ಅಥವಾ ಚೆಲ್ಲುವ ಮೂಲಕ ಯಾವು-ದೊಂದು ಸಂದೇಹಗ್ರಸ್ತ ವಿಷಯವನ್ನು ನಿರ್ಧರಿಸುವುದು ಎಂದರ್ಥ. ಈಗ ಕಾಗದದ ತುಣುಕುಗಳಲ್ಲೊಂದನ್ನು ಎತ್ತುವ ಮೂಲಕ ಹೀಗೆ ಮಾಡುವುದರಿಂದ ನಾವು ಲಾಟರಿ ಎತ್ತುವುದು ಎನ್ನುತ್ತೇವೆ. ಅವರು ಒಗೆಯುವುದು ಎಂಬರ್ಥದ cast ಶಬ್ದ ಬಳಸುತ್ತಾರೆ. ಲಾಟರಿ ಪದ್ಧತಿ ನಮ್ಮಲ್ಲಿಯೂ ಇತ್ತು ಎಂಬುದಕ್ಕೆ ಗುಟಿಕಾ ಪಾತ ಎಂಬ ಸಂಸ್ಕೃತ ಶಬ್ದ ಸಾಕ್ಷಿ ಕೊಡು-ತ್ತದೆ. ನಮ್ಮಲ್ಲಿ ಸಂದಿಗ್ಧ ವಿಷಯಗಳನ್ನು ನಿರ್ಣಯಿಸಲು ಗುಟಿಕೆ(ಗುಳಿಗೆ)ಗಳನ್ನು ಕವಡೆಗಳಂತೆ ಒಗೆಯುವ ಪದ್ಧತಿ ಇದ್ದಿರಬೇಕು. ಗುಳಿಗೆ ಒಗೆಯುವುದರಿಂದ ಆಗುವ ತೀರ್ಮಾನ ಯಾವಾಗಲೂ ಅನಿಶ್ಚಿತವಾಗಿರುವುದರಿಂದ ಗುಳಿಗೆ ಒಗೆಯುವುದು ಎಂಬ ಪದಪುಂಜಕ್ಕೆ ಕನ್ನಡದಲ್ಲಿ ಇನ್ನೊಂದು ಅರ್ಥ ಕವಲೊಡೆದಿದೆ. ಅದೆಂದರೆ ಅಂದಾಜಿನಿಂದ ಏನಾದರೊಂದು ಹೇಳುವುದು—ಸರಿಯಾದರೆ ಆಯಿತು ಇಲ್ಲದಿದ್ದರೆ ಇಲ್ಲ. ಗುಳಿಗೆ ಒಗೆದು ನೋಡಿದ ಅಂದರೆ ಅಂದಾಜಿನಿಂದ ಕಲ್ಲು ಬೀರಿದ. ಹೀಗೆ ನಿಶ್ಚಯವಾಗಿ ವಿಷಯ ಗೊತ್ತಿಲ್ಲದೆ ಏನೋ ಊಹಾತ್ಮಕವಾಗಿ ಆಡುವ ಮಾತಿಗೆ **ಗುಳಿಗೆ** ( = ಸುಳ್ಳು) ಎಂಬರ್ಥ ಬಂತು.

ಲಾಟರಿಗೆ ಕರಾವಳಿಯಲ್ಲಿ ಗೋವಾ ಲಾಟರಿ ಕಾಲದಲ್ಲಿ (ಸ್ವಾತಂತ್ರ್ಯಪೂರ್ವದಲ್ಲಿ) **ಸೋಡ್ತಿ** ಎಂಬ ಹೆಸರಿತ್ತು. ಅದು ಪೋರ್ತುಗೀಸ್ ಭಾಷೆಯಿಂದ ಬಂದದ್ದು (ಗೋವೆಯಲ್ಲಿ ಪೋರ್ತುಗೀಸರಲ್ಲವೇ ಲಾಟರಿ ನಡೆಸುತ್ತಿದ್ದದ್ದು?) ಪೋರ್ತುಗೀಸಿನ Sorte ಲ್ಯಾಟಿನ್ನಿನಿಂದ ಬಂದ ಪದ. ಅರ್ಥ ಲಾಟರಿ ಎಂದೇ.

**ಸಾ. ನೆಂ.**



# ಚಿತ್ರಜಗತ್ತಿನ ಮಾಂತ್ರಿಕ ಸ್ಟೀವನ್ ಸ್ಪೀಲ್‌ಬರ್ಗ್

**ಕೆ. ಎ. ರಹೀಮ್**

ಹೈವೆಯಲ್ಲಿ ಕಾರೊಂದು ವೇಗವಾಗಿ ಹೋಗುತ್ತಿದೆ. ಬಸ್ಟ ಯುವಕ–ಮಾರಾಟಗಾರ–ಚಾಲಕ ಸ್ಥಾನದಲ್ಲಿ ಕುಳಿತಿದ್ದಾನೆ. ದೂರದ ಪ್ರಯಾಣ. ಆತನೂ ಏಕಾಂಗಿ. ನೇರವಾದ ನಿರ್ಜನ ರಸ್ತೆ. ಆಗೊಮ್ಮೆ ಈಗೊಮ್ಮೆ ಎದುರಾಗುವ ಕಾರುಗಳು, ಬಸ್ಸುಗಳು.

ಇದ್ದಕ್ಕಿದ್ದಂತೆಯೆ ಕಾರಿನ ಹಿಂದೆ ದೈತ್ಯಾಕಾರದ ಲಾರಿಯೊಂದು ಬೆನ್ನಟ್ಟಿದಂತೆ ಕಾಣಿಸುತ್ತದೆ. ಹನ್ನೆರಡು ಜತೆ ಟಯರುಗಳುಳ್ಳ ಲಾರಿ. ಅದನ್ನು ತನ್ನ ಕಾರಿನ ಮಿರರಿನಲ್ಲಿ ನೋಡಿದ ಈತನ ಎದೆ ನಗಾರಿಯಾಗುತ್ತದೆ. ಸರಿ ಕಾರಿಗೂ-ಲಾರಿಗೂ ಮುಂದೋಟದ ಪೈಪೋಟಿ. ಮೊದಮೊದಲು ತಮಾಷೆಯೆಂಬಂತೆ ಪ್ರಾರಂಭವಾದ ಘಟನೆಗಳು ನಂತರ ಗಂಭೀರ ಸನ್ನಿವೇಶಗಳಾಗುತ್ತವೆ. ಕಾರು ಚಾಲಕನ ಪ್ರಾಣಕ್ಕೆ ಸಂಚಕಾರವೊಡ್ಡುವ ರೀತಿಯಲ್ಲಿ ಲಾರಿ ಮುಂದೋಡಿ ನೋಡ ನೋಡುತ್ತಿದ್ದಂತೆಯೆ ಪಕ್ಕದ ಪ್ರಪಾತಕ್ಕುರುಳಿಬಿಡುತ್ತದೆ.

ಚೇಸ್‌ನ ಪತ್ತೇದಾರಿಯ ಹಾಗೆ ಅನಿಸುತ್ತದಲ್ಲವೆ? ಅಲ್ಲ, ಇದು 'ಡ್ಯುಯೆಲ್' ಎಂಬ ಆಂಗ್ಲ ಟಿವಿ ಚಿತ್ರ. ಇದು ಬಿಡುಗಡೆಯಾದಾಗ ಅಮೇರಿಕ-ಯುರೋಪುಗಳಲ್ಲಿ ಅಪಾರ ಪ್ರಶಂಸೆ, ಅಗಾಧ ಪ್ರಸಿದ್ಧಿ ಗಳಿಸಿತು. ಚಿತ್ರದಲ್ಲಿದ್ದ ದೈತ್ಯ ಗಾತ್ರದ ಲಾರಿಯನ್ನು ಮುಳುಗಿಸಿಬಿಡುವಷ್ಟು ಹಣ ಸಂಪಾದಿಸಿತು. ಹದಿನಾರು ದಿನಗಳ ಚಿತ್ರೀಕರಣ ಮತ್ತು ಮೂರು ಲಕ್ಷ ಡಾಲರ್ ವೆಚ್ಚದ ಈ ಚಿತ್ರದ ಗಳಿಕೆಯೆಷ್ಟು ಗೊತ್ತೇ? ಒಂದು ಕೋಟಿ ಡಾಲರುಗಳಿಗೂ ಹೆಚ್ಚು.

'ಡ್ಯುಯೆಲ್' ಚಿತ್ರವನ್ನು ನಿರ್ದೇಶಿಸಿದ್ದಾತ ಸ್ಟೀವನ್ ಸ್ಪೀಲ್‌ಬರ್ಗ್. ಆಗ ಆತನ ವಯಸ್ಸು ಕೇವಲ ೨೧ ವರ್ಷ! ಅದು ಆತನ ಮೊಟ್ಟ ಮೊದಲ ಚಿತ್ರ ಕೂಡ.

ಚಿಕ್ಕಂದಿನಿಂದಲೇ ತನ್ನ ಸುತ್ತಲ ಪ್ರಪಂಚವನ್ನು, ಅದರ ನೂರಾರು ಅದ್ಭುತಗಳನ್ನು, ನಿಗೂಢ ರಹಸ್ಯಗಳನ್ನು ವೀಕ್ಷಿಸಿ ಅಚ್ಚರಿಪಟ್ಟು, ಊಹೆ ಕನಸು ಕಲ್ಪನೆಗಳ ಜಗತ್ತಿನಲ್ಲಿಯೇ ವಿಹರಿಸಿದ ಹುಡುಗ ಸ್ಪೀಲ್‌ಬರ್ಗ್. ಇನ್ನೂ ಹತ್ತರೊಳಗಿನ ಮುಗ್ಧಾವಸ್ಥೆಯಲ್ಲೇ ಕೈಗೊಂದು

ಮೂವಿ ಕ್ಯಾಮರಾ ಸಿಕ್ಕಾಗ ಆತನೇನು ಮಾಡಿದ ಗೊತ್ತೆ? ನೇರ ಅಡಿಗೆ ಮನೆಗೆ ಹೋದ. ತಾಯಿಗೆ ಗ್ಯಾಸ್ ಒಲೆಯ ಮೇಲೆ ಪ್ರೆಶರ್ ಕುಕರ್ ಇಡಲು ಹೇಳಿದ. ಅದರೊಳಗಿನ ಆಹಾರ ಬೇಯುವುದನ್ನು ಚಿತ್ರಿಸುವ ಬಯಕೆ ಆತನಿಗೆ. ಬಹಳ ಹೊತ್ತಿನ ವರೆಗೂ ಅದು ಒಲೆಯ ಮೇಲೆ ಇರಗೊಟ್ಟ ಆತ ಕೊನೆಗೆ ಪ್ರೆಶರ್ ಕುಕರ್ ಸ್ಫೋಟಗೊಳ್ಳುವುದನ್ನೂ ಸೆಲ್ಯುಲಾಯ್ಡಿನಲ್ಲಿ ಸೆರೆ ಹಿಡಿದ. ಆಗ ಆತನ ವಯಸ್ಸು ಕೇವಲ ೧೧ ವರ್ಷ. ಅಮೆಚ್ಯೂರ್ ಫಿಲ್ಮ್ ಮೇಕರ್ಸ್ ಸ್ಪರ್ಧೆಯಲ್ಲಿ ಆತನ ನಲವತ್ತು ನಿಮಿಷಗಳ ಯುದ್ಧ ಸಂಬಂಧಿತ ಚಿತ್ರ 'ಎಸ್ಕೇಪ್ ಟು ನೋ ವ್ಹೇರ್' ಗೆದ್ದಾಗ ಸ್ಪೀಲ್‌ಬರ್ಗ್ ೧೩ ವರ್ಷದ ಹುಡುಗ! ಮರುವರ್ಷ ನೂರವಲವತ್ತು ನಿಮಿಷ ಗಳ 'ಫೈರ್ ಲೈಟ್' ಎಂಬ ಮಹತ್ವಾಕಾಂಕ್ಷೆಯ ಚಿತ್ರ ನಿರ್ಮಿಸಿದ.

'ಡ್ಯುಯೆಲ್'ನ್ನು ದೂರದರ್ಶನಕ್ಕಾಗಿ ಚಿತ್ರಿಸಿದ ಚಿತ್ರನಿರ್ಮಾಪಕರಿಗೆ ಅಂಥ ಭರವಸೆಯೇನೂ ಇದ್ದಿರಲಿಲ್ಲ. ಕೇವಲ ೫೫ ದಿನಗಳಲ್ಲಿ ಚಿತ್ರ ಮುಗಿಸಿಕೊಡುವುದಾಗಿ ಮಾತು ಕೊಟ್ಟಿದ್ದ ಜನಪ್ರಿಯತೆಯ ತುತ್ತ ತುದಿಯೇರಿದ ಸ್ಪೀಲ್‌ಬರ್ಗ್. ಈ ಚಿತ್ರದಲ್ಲಿ ಆ ಯುವಕ ಕಾರು ಚಾಲಕ ಮಾರಾಟಗಾರನೊಬ್ಬನೇ ನಟ. ಬೇರೆ ನಟ ನಟಿ ಯಾರೂ ಇಲ್ಲ. ನಾಯಕನಂತೂ ಇಲ್ಲವೇ ಇಲ್ಲ. ಬೆನ್ನಟ್ಟಿದ ಲಾರಿಯ ಚಾಲಕನನ್ನೂ ತೋರಿಸುವುದಿಲ್ಲ—ಅಷ್ಟೇ ಅಲ್ಲ ಅದು ಪ್ರಪಾತಕ್ಕುರುಳಿದಾಗಲೂ ಅದರೊಳಗೆ ಯಾರೂ ಕಾಣುವುದಿಲ್ಲ. ಅಲ್ಲಿ ಸ್ಪೀಲ್‌ಬರ್ಗ್ ತೋರಿಸುವುದು ಹರಿದ ಶರ್ಟಿನ ಚೂರು, ತಿರುಗುತ್ತಿರುವ ಲಾರಿಯ ವೀಲ್‌ಗಳನ್ನು ಮಾತ್ರ.

೧೯೭೦ ರ ದಶಕದಲ್ಲಿ ಅತ್ಯಧಿಕ ಮಾರಾಟವಾದ ಕೃತಿ ಪೀಟರ್ ಬೆಂಚ್‌ಲೀಯ ಕಾದಂಬರಿ 'ಜಾಸ್'. ಅದನ್ನಾಧರಿಸಿ ಚಿತ್ರವೊಂದನ್ನು ನಿರ್ದೇಶಿಸಲು ಸ್ಪೀಲ್‌ಬರ್ಗ್ ಆಹ್ವಾನಿಸಲ್ಪಟ್ಟ. ಆಗ ಆತನ ವಯಸ್ಸು ೨೭ ವರ್ಷಗಳು. ಅತ್ಯಂತ ಕಿರಿ ವಯದ ನಿರ್ದೇಶಕನಾದ ಸ್ಪೀಲ್‌ಬರ್ಗ್ ಬಗ್ಗೆ, ಆತ ಚಿತ್ರೀಕರಣ ಮುಗಿಸಲು ೧೫೦ ದಿನಗಳು ಬೇಕು ಎಂದಾಗ, ನಿರ್ಮಾಪಕರು ಬಂಡವಾಳದ ಕುರಿತು ಯೋಚಿಸುವಂತಾಯಿತು. ೪೦ ಲಕ್ಷ ಡಾಲರುಗಳ ಮೊದಲಿನ ಅಂದಾಜು ವೆಚ್ಚ ಒಮ್ಮೆಲೆ ೮೦ ಲಕ್ಷಗಳಿಗೇರಿದಾಗ ಚಿತ್ರ ನಿರ್ಮಾಣವನ್ನು ಕೈಬಿಡುವ ಯೋಚನೆಯೂ ಅವರಿಗೆ ಬಂತು. ಚಿತ್ರಕ್ಕಾಗಿ ನಿರ್ಮಿಸಲಾಗಿದ್ದ ಕೃತಕ ಶಾರ್ಕ್‌ನ್ನು ಪ್ರದರ್ಶನಕ್ಕಿಟ್ಟು ಹಣ ಸಂಗ್ರಹಿಸುವ ಯೋಚನೆಯೂ ನಿರ್ಮಾಪಕರಿಗಿತ್ತು. ಹಾಗೂ ಹೀಗೂ ಚಿತ್ರ ಪೂರ್ಣವಾಗಿ ತೆರೆ ಕಂಡಾಗ ನಿರ್ಮಾಪಕರಿಗೆ ಅಚ್ಚರಿ. ಅದ್ಭುತ ಯಶಸ್ಸಿನೊಂದಿಗೆ ಅಪಾರ ಹಣವೂ ಬಂತು. ಅಮೇರಿಕದಲ್ಲಂತೂ ಚಿತ್ರ ಮನೆಮಾತಾಯಿತು. ಅಂದಿಗೆ ೪೦ ವರ್ಷಗಳ ಹಿಂದೆ 'ಗಾನ್ ವಿತ್ ದಿ ವಿಂಡ್' ಸ್ಥಾಪಿಸಿದ್ದ ದಾಖಲೆಯನ್ನು ೧೯೭೨ರಲ್ಲಿ 'ಗಾಡ್‌ಫಾದರ್' ಮುರಿಯಿತಲ್ಲದೇ ಮತ್ತೆ ಈ ದಾಖಲೆಯನ್ನು ಮುರಿಯುವಂಥ ಚಿತ್ರ ಬರಲು ೪೦ ವರ್ಷಗಳೇ ಬೇಕಾಗಬಹುದೇನೋ ಎಂದುಕೊಂಡಿದ್ದರು ಜನ ಆದರೆ ೧೯೭೫ರಲ್ಲಿ 'ಜಾಸ್' ಹಿಂದಿನ ಎಲ್ಲಾ ದಾಖಲೆಗಳನ್ನು ಮುರಿದು ಹೊಸ ವಿಕ್ರಮ ಸ್ಥಾಪಿಸಿತ್ತು. ಜಗತ್ತಿನಾದ್ಯಂತ ಪ್ರೇಕ್ಷಕರ ಎದೆ ನಡುಗಿಸಿದ 'ಜಾಸ್'ನಿಂದಾಗಿ ಸ್ಪೀಲ್‌ಬರ್ಗ್ ಬೆಳಗಾಗುವುದರೊಳಗಾಗಿ ಪ್ರತಿ ಅಮೇರಿಕನ್ನನ ನಾಲಿಗೆ ಮೇಲೆ ನಲಿದ; ಜಗತ್ತಿನಾದ್ಯಂತ ಮನೆಮಾತಾದ.

ಬಾಹ್ಯಾಕಾಶಯಾನದ, ಹಾರುವ ತಟ್ಟೆಗಳ ವಿಷಯವುಳ್ಳ 'ಕ್ಲೋಸ್ ಎನ್‌ಕೌಂಟರ್ಸ್ ಆಫ್ ದಿ ಥರ್ಡ್ ಕೈಂಡ್' ಸ್ಪೀಲ್‌ಬರ್ಗ್‌ನ ಹಿರಿಮೆಗೆ ಇನ್ನೊಂದು ಹೆಗ್ಗುರುತಾಯಿತು. 'ಗುರುತಿಸಲಾಗದ ಹಾರಾಡುವ ವಸ್ತುಗಳು' (Unidentified Flying Objects–ಅಥವಾ UFO-ಯುಫೋಗಳು) ಸಾವಿರಾರು ವರ್ಷಗಳಿಂದ ಕುತೂಹಲ ಕೆರಳಿಸಿದ್ದಾವಷ್ಟೆ. ಯುಫೋ

ಗಳನ್ನು ಕೇವಲ ಭ್ರಮೆ, ದೃಷ್ಟಿದೋಷ ಅಥವಾ ಇನ್ನೇನೇನೋ ಕಾರಣ ಹೇಳಿ ತಳ್ಳಿಹಾಕ ಲಾಗದು. ಅಮೇರಿಕದಲ್ಲಿ ಯುಫೋಗಳ ಬಗ್ಗೆ ವೈಜ್ಞಾನಿಕ ಅಧ್ಯಯನ ನಡೆಸಲು ಡಾ. ಅಲೆನ್ ಹೈನೆಕ್ ಅವರ ಮೇಲ್ವಿಚಾರಣೆಯಲ್ಲಿ ಆರಂಭ ವಾದ ಅನ್ವೇಷಣಾ ಯೋಜನೆಗಳು ಬಿದ್ದು ಹೋದುದರ ಹಿಂದಿರುವ ರಹಸ್ಯ ದೊಡ್ಡದು. ಅಮೇರಿಕ ಸರಕಾರ ಯುಫೋಗಳ ಬಗ್ಗೆ ತಳೆದ ಧೋರಣೆಯನ್ನು ಖಂಡಿಸಿ ಡಾ. ಹೈನೆಕ್ ಬಹಳ ಬರೆದರು. 'ಕ್ಲೋಸ್ ಎನ್‌ಕೌಂಟರ್ಸ್...' ಚಿತ್ರಕ್ಕೆ ಯುಫೋಗಳ ಬಗ್ಗೆ ಡಾ. ಹೈನೆಕ್ ಅನೇಕ ವಿವರಗಳನ್ನು ಒದಗಿಸಿದರು. ಅನಂತ ಆಕಾಶದಲ್ಲಿ ಮಾನವೇತರ ಜೀವಿಗಳ ಅಸ್ತಿತ್ವ ವನ್ನು ಒಪ್ಪುವ ಸ್ಪೀಲ್‌ಬರ್ಗ್, ಬಾಹ್ಯಾಕಾಶ ಜೀವಿಗಳ ಹಾಗೂ ಮನುಷ್ಯರ ನಡುವೆ ಈ



"ಥೂ...ನಿಮ್ಮ ಮನೆ ಹಾಳಾಗಾ. ಈವತ್ತು ಲೋಕಸಭೆಯಲ್ಲಿ ವಿಶೇಷ ಏನು ಅದ್ರೆ, ವೈಜಯಂತಿಮಾಲಾಳ ಚಾಯನಾ ಸ್ಕಿಲ್ ಸಾಡಿ ಮತ್ತು ಸ್ಲೀವ್-ಲೆಸ್ ಬ್ಲೌಜ್ ಅಂತೀರಲ್ಲಾ..."

ವರೆಗೆ ಅಸಾಧ್ಯವಾಗಿರುವ ಸಂಪರ್ಕಕ್ಕೆ ಕಾರಣ ಸಂಪರ್ಕ ಮಾಧ್ಯಮದ ಅಭಾವ ಎನ್ನುತ್ತಾನೆ. 'ಕ್ಲೋಸ್ ಎನ್‌ಕೌಂಟರ್ಸ್...'ನ ಕತೆಯನ್ನು ಬರೆದ ಸ್ಪೀಲ್‌ಬರ್ಗ್, ಅಂಥ ಸಂಪರ್ಕಕ್ಕಾಗಿ ಸಂಗೀತ ಮತ್ತು ಬೆಳಕನ್ನು ಮಾಧ್ಯಮವನ್ನಾಗಿ ಮಾಡಿಕೊಳ್ಳುವ ಸಾಧ್ಯತೆಯನ್ನು ಮುಂದಿಡು ತ್ತಾನೆ. ಚಿತ್ರದ ಅಂತ್ಯದಲ್ಲಿ ಬಾಹ್ಯಾಕಾಶ ಜೀವಿಗಳು ನೇರವಾಗಿ ಮಾನವರನ್ನು ಭೇಟಿ ಮಾಡುತ್ತವೆ. ಬಾಹ್ಯಾಕಾಶ ಜೀವಿಗಳ ಕಲ್ಪ ನೆಯ ಒಂದು ರಮ್ಯ ಕಥಾನಕದ 'ಕ್ಲೋಸ್ ಎನ್‌ಕೌಂಟರ್ಸ್...' ಬಿಡುಗಡೆಯಾದಾಗ ಅಮೋಘ ಯಶಸ್ಸು ಗಳಿಸಿತು. ೨೫ ಕೋಟಿ ಡಾಲರುಗಳನ್ನು ಸಂಪಾದಿಸಿತು. ಆ ನಂತರ ಸ್ಪೀಲ್‌ಬರ್ಗ್‌ನ ಒಂದೊಂದು ಚಿತ್ರ ಬಿಡುಗಡೆ ಯಾದಾಗಲೂ ಚಿತ್ರದ ಆದಾಯವನ್ನು ಕೊಂಡೊಯ್ಯಲು ಎಷ್ಟು ಟ್ರಕ್ಕುಗಳು ಬೇಕಾಗ ಬಹುದು ಎಂಬ ಚರ್ಚೆ ಹಾಲಿವುಡ್ಡಿನಲ್ಲಿ ಆರಂಭ ವಾಯಿತು.

'ಸ್ಟಾರ್ ವಾರ್ಸ್' ಖ್ಯಾತಿಯ ಹಾಲಿವುಡ್ಡಿನ ಇನ್ನೊಬ್ಬ ನಿರ್ದೇಶಕ ಜಾರ್ಜ್ ಲ್ಯೂಕಾಸ್‌ಗಾಗಿ ಸ್ಪೀಲ್‌ಬರ್ಗ್ ನಿರ್ದೇಶಿಸಿದ 'ರೈಡರ್ ಆಫ್ ದಿ ಲಾಸ್ಟ್ ಆರ್ಕ್'ದು ಇನ್ನೊಂದು ಅದ್ಭುತ ಯಶಸ್ಸಿನ ಕಥೆ. ಅದು ಅಪಾರ ಜನಪ್ರಿಯತೆಯ ಜತೆಜತೆಗೆ ಸ್ಪೀಲ್‌ಬರ್ಗ್‌ನ ಹೆಸರನ್ನು ಅಂತಾ ರಾಷ್ಟ್ರೀಯ ಮಟ್ಟದಲ್ಲಿ ದಂತಕಥೆಯನ್ನಾಗಿಸಿ ಬಿಟ್ಟಿತು.

'ಎಕ್ಸ್‌ಟ್ರಾ ಟೆರೆಸ್ಟ್ರಿಯಲ್' ಸ್ಪೀಲ್‌ಬರ್ಗ್‌ನ ಇನ್ನೊಂದು ಮಹಾನ್ ಚಿತ್ರ ೧೯೮೨ರ ವಿಮ ರ್ಶಕ ಮಂಡಲಿಯ ಪ್ರಶಸ್ತಿ ಪಡೆದ ಈ ಚಿತ್ರದ ನಿರ್ಮಾಣ ವೆಚ್ಚ ಎರಡು ಕೋಟಿ ಡಾಲರುಗಳು. ಬಿಡುಗಡೆಯಾಗಿ ಮೊದಲ ವಾರದಲ್ಲೇ ಅದರ ಗಳಿಕೆ ಎಂಟು ಕೋಟಿ ಡಾಲರುಗಳಿಗೂ ಹೆಚ್ಚು!

ಸ್ಪೀಲ್‌ಬರ್ಗ್ ಸೋಲನುಭವಿಸಬೇಕಾದ ಪ್ರಸಂಗವೂ ಇಲ್ಲದಿಲ್ಲ. ಆತ ನಿರ್ಮಿಸಿದ '೧೯೪೧' ಚಿತ್ರ ಗಲ್ಲಾಪೆಟ್ಟಿಗೆಯಲ್ಲಿ ಸೋತಿತು.

ಆದರೆ ಈ ಚಿತ್ರದಲ್ಲಿ ಯುದ್ಧದ ಬಗ್ಗೆ ಲಕ್ಷಾಂತರ ಯುವಕರ ಮನೋಭಾವದ ಪ್ರತಿಬಿಂಬವಿದೆ. ಯುದ್ಧದ ಬಾಲಿಶತನ, ಅರ್ಥವಿಲ್ಲದ ಈ ಯುದ್ಧಗಳಿಂದ ಮಾನವ ಕಲ್ಯಾಣಕ್ಕೆ ದೊಡ್ಡ ಪೆಟ್ಟು ಬೀಳುತ್ತದೆಂಬ ಉದಾತ್ತ ಸಂದೇಶವನ್ನು ಸ್ಪೀಲ್‌ಬರ್ಗ್ ಮಾರ್ಮಿಕವಾಗಿ ನೀಡಿದ್ದಾನೆ. ಯುದ್ಧದ ಅನಾಹುತದಲ್ಲಿ ಬಹಳಷ್ಟು ನಷ್ಟ ಅನುಭವಿಸಿದ ಪ್ರಜೆಯೊಬ್ಬ "ಪ್ರಪಂಚದಲ್ಲಿ ಇನ್ನೆಂದಿಗೂ ಯುದ್ಧಗಳಾಗದಿರಲಿ, ಶಾಂತಿ ನೆಲೆಸಲಿ ಎಂದು ಹಾರೈಸಿ ಈ ಹೂಗೊಂಚಲನ್ನು ಇರಿಸುತ್ತೇನೆ" ಎಂದು ಹೇಳಿ ತನ್ನ ಮನೆಯ ಬಾಗಿಲಿಗೆ ಪುಷ್ಪಗುಚ್ಛವಿರಿಸಿ ಮೊಳೆ ಹೊಡೆಯುತ್ತಾನೆ. ಮೊಳೆ ಹೊಡೆಯುತ್ತಿರುವಂತೆಯೆ ಇಡೀ ಮನೆ ಜಾರಿ ಗುಡ್ಡದ ಕೆಳಗಿನ ಹಳ್ಳಕ್ಕೆ ಕುಸಿಯುತ್ತದೆ.

ಬರ್ಗ್ ನಿರ್ದೇಶನದ 'ಜಾಸ್', 'ಕ್ಲೋಸ್ ಎನ್‌ಕೌಂಟರ್ಸ್...' 'ರೈಡರ್ಸ್ ಆಫ್ ದಿ ಲಾಸ್ಟ್ ಆರ್ಕ್' ಮತ್ತು 'ಎಕ್ಸ್‌ಟ್ರಾ ಟೆರೆಸ್ಟ್ರಿಯಲ್' ಚಿತ್ರಗಳು ಚಲನಚಿತ್ರ ಇತಿಹಾಸದಲ್ಲಿ ಅಭೂತಪೂರ್ವ ಯಶಸ್ಸು ಗಳಿಸಿದ ನಾಲ್ಕು ಕೃತಿಗಳು. ವಿಶ್ವದಾಖಲೆ ಸ್ಥಾಪಿಸಿ, ಸ್ಪೀಲ್‌ಬರ್ಗ್‌ನನ್ನು ಜಗತ್ತಿನ ಯಶಸ್ವೀ ನಿರ್ದೇಶಕನನ್ನಾಗಿಸಿದವು. ಜಾರ್ಜ್ ಲ್ಯೂಕಾಸ್‌ನ 'ಸ್ಟಾರ್ ವಾರ್ಸ್' ಮತ್ತು 'ದಿ ಎಂಪಾಯರ್ ಸ್ಟ್ರೈಕ್ಸ್ ಬ್ಯಾಕ್' ಮಾತ್ರ ಆ ಮಟ್ಟಕ್ಕೇರಿವೆ.

"ಚಿತ್ರವೊಂದರ ಅಳಿವು-ಉಳಿವು ಪ್ರಶಸ್ತಿ-ಪುರಸ್ಕಾರಗಳ ಮೇಲೆ ನಿಂತಿಲ್ಲ, ಹಣ ಕೊಟ್ಟು ನೋಡುವ ಸಹೃದಯ ಪ್ರೇಕ್ಷಣೆಯ ಮನ್ನಣೆಯ ಮೇಲೆ ನಿಂತಿದೆ," ಎನ್ನುವ ಸ್ಪೀಲ್‌ಬರ್ಗ್ "ಕತೆಯೊಂದನ್ನು ಪರದೆಯ ಮೇಲಿಳಿಸುವ ಕಲಾತ್ಮಕ ವಿಧಾನವನ್ನು ಅರಿತಿರುವ ಕೆಲವೇ ನಿರ್ದೇಶಕರಲ್ಲೊಬ್ಬ"ನೆಂಬ ಖ್ಯಾತಿಗೂ ಪಾತ್ರ.

ಸ್ಪೀಲ್‌ಬರ್ಗ್‌ನ ಇತ್ತೀಚಿನ ಚಿತ್ರ 'ಇಂಡಿಯಾನಾ ಜೋನ್ಸ್ ಆ್ಯಂಡ್ ದಿ ಟೆಂಪಲ್ ಆಫ್ ಡೂಮ್' ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಗಳಿಕೆಯ ಇತಿಹಾಸದಲ್ಲಿ ದಾಖಲೆಯನ್ನೇ ನಿರ್ಮಿಸಿತು. ಆದರೆ ಭಾರತದಲ್ಲಿ ಮಾತ್ರ ಆ ಚಿತ್ರ ವಿವಾದದ ಅಲೆಗಳನ್ನೆಬ್ಬಿಸಿತು. ಸ್ಪೀಲ್‌ಬರ್ಗ್‌ನನ್ನಷ್ಟೆ ಅಲ್ಲ, ಆ ಚಿತ್ರದಲ್ಲಿ ಮಾಂತ್ರಿಕನ ಪಾತ್ರವಹಿಸಿದ ಹಿಂದಿ ನಟ ಅಮರೀಶ ಪುರಿ ಮತ್ತು ರೋಶನ್ ಸೇಠರನ್ನು ದೇಶದ್ರೋಹಿಗಳೆಂದು ಭಾರತದ ಕೆಲವು ಪತ್ರಿಕೆಗಳು ಜರಿದುವು. ಆದರೆ ಅದರಲ್ಲಿ ಮಾಂತ್ರಿಕನ ಪಾತ್ರ ವಹಿಸಿರುವ ಅಮರೀಶ ಪುರಿ ಆ ಚಿತ್ರದ ಚಿತ್ರೀಕರಣದಲ್ಲಿ ಭಾಗವಹಿಸುತ್ತಿದ್ದಾಗ ಅನಿರ್ವಚನೀಯ ಅನುಭವ ಪಡೆದೆನೆಂದು ಹೇಳುತ್ತಾನೆ.

"ಸ್ಪೀಲ್‌ಬರ್ಗ್‌ನ ಚಿತ್ರದಲ್ಲಿ ನಟಿಸುವುದು ಅತ್ಯಪರೂಪಕ್ಕೊಮ್ಮೆ ಕೆಲವೇ ಅದೃಷ್ಟವಂತರ ಪಾಲಿಗೆ ಒದಗುವ ಸದವಕಾಶ" ಎಂಬುದು ಸ್ಪೀಲ್‌ಬರ್ಗ್‌ನ ನಟ-ನಟಿಯರ ಅಭಿಪ್ರಾಯ.

ಸ್ಪೀಲ್‌ಬರ್ಗ್‌ನಿಗೆ ತನ್ನ ಚಿತ್ರದ ಆದಾಯದ ಕಡೆಗೆ ಎಂದೂ ಗಮನವಿಲ್ಲ. ಹಣ ಗಳಿಕೆಗಿಂತ ಚಿತ್ರ ಎಷ್ಟರ ಮಟ್ಟಿಗೆ ತನ್ನ ಕಲ್ಪನೆಗಳನ್ನು ಒಳಗೊಂಡಿದೆ ಎಂಬುದು ಆತನಿಗೆ ಮುಖ್ಯವಾಗುತ್ತದೆ. ಇಂದಿಗೂ ಹೊಸ ವಿಷಯ ಎಲ್ಲಿಂದಲೇ ಬರಲಿ ಅದನ್ನು ಸ್ವೀಕರಿಸುವ, ಅರಿಯುವ ವ್ಯಕ್ತಿ ಆತ. ಹಾಲಿವುಡ್ ಜನರ ದೃಷ್ಟಿಯಲ್ಲಿ ಸ್ಪೀಲ್‌ಬರ್ಗ್ ಒಬ್ಬ ಮಾಂತ್ರಿಕ. ಅಮೇರಿಕದ ಸ್ವಚ್ಛಂದ ಚಿಂತನಾ ಸ್ವಾತಂತ್ರ್ಯದ ಪ್ರತಿಪಾದಕನಾಗಿರುವ ಆತನಿನ್ನೂ ೪೦ ರೊಳಗಿನ ವಿಚಾರವಂತ, ಅವಿವಾಹಿತ. ✡



ನುಡಿ ಜಾಣ್ಮೆಯಿಲ್ಲದ ಕವಿತೆ ತಾನದು ನೋಡೆ ಮುಡಿಮೊಲೆಯಿಲ್ಲದ ಪೆಣ್ಣ ಪಿಡಗಿನಂತೆ.

-ಬಾಹುಬಲಿ

ಲೋಭದಿಂ ಕೌರವನು ಲಾಭವನು ಪಡೆದಿಹನೆ ? -ಸರ್ವಜ್ಞ

# ಹಂಗೇರಿಯನ್ ಕಥೆ

ಮೂಲ : **ಡಸ್ಸೋ ಕೆಲ್ಲರ್**

ಕನ್ನಡಕ್ಕೆ : **ಕುಂವಿ**

ಎರ್ನ್ಯೋಜೆಪ್ ಈ ಶತಮಾನದ ಪ್ರಸಿದ್ಧ ಹಂಗೇರಿಯನ್ ಬರಹಗಾರ. ಆತನ ಪ್ರತಿಯೊಂದು ಬರಹವೂ ಅಷ್ಟೇ ಆಹ್ಲಾದಕರವಾಗಿ ತಮಾಷೆಯಾಗಿ ಓದಿಸಿಕೊಳ್ಳುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ. ಆ ವೃದ್ಧಾಪ್ಯದಲ್ಲೂ ಜೆಪ್ ಪ್ರತಿ ಆದಿತ್ಯವಾರ ಸಂಜೆಯು ನಾಟಕ ಪ್ರದರ್ಶನಕ್ಕೆ ತಪ್ಪದೆ ಹಾಜರಾಗುತ್ತಿದ್ದ. ತನ್ನೆರಡು ಕಣ್ಣುಗಳು ಪೂರ್ತಿ ಮುಚ್ಚಿಕೊಳ್ಳುವಂತೆ ಬಣ್ಣದ ಚಾಳೀಸನ್ನು ಧರಿಸುತ್ತಿದ್ದ. ಯಾರಾದರೂ ಹತ್ತಿರ ಮಾತಾಡುವಾಗ ತನ್ನೊಂದು ಕೈಯನ್ನು ಕಿವಿಯ ಪಕ್ಕ ಅಡ್ಡ ಹಿಡಿದು ಮಾತಾಡುತ್ತಿದ್ದ, ಮಾತುಕೇಳುತ್ತಿದ್ದ ಆತನಿಗೆ ಸರಿಯಾಗಿ ಕಿವಿ ಕೇಳಿಸುತ್ತಿರಲಿಲ್ಲ. ಆತನ ಕೈಯಲ್ಲಿ ಯಾವಾಗಲೂ ಕೋಲು ಇರುತ್ತಿತ್ತು. ಆತನ ಬದುಕಿನ ಕೊನೆ ದಿನಗಳಲ್ಲಿ ಆ ಪ್ರಮುಖ ಸಾಹಿತಿಯೊಂದಿಗಿನ ಅನುಭವವೊಂದು ನನ್ನ ನೆನಪಿನಂಗಳದಲ್ಲಿ ಸದಾ ಹಚ್ಚ ಹಸಿರಾಗಿದೆ. ಅದು ನೆನಪಾದಾಗಲೆಲ್ಲ ನನಗೆ ನಗದೆ ಇರಲು ಸಾಧ್ಯವಾಗುವುದೇ ಇಲ್ಲ.

ಆ ದಿನ ನನಗೆ ತುಂಬ ಹಸಿವಾಗಿತ್ತು. ಮೊಲ್ನಾರ್ ಹೋಟಲ್ಲಿಗೆ ಹೋಗಿ ಒಂದು ಕುರ್ಚಿ ಮೇಲೆ ಕೂತಿದ್ದೆ. ಆಗ ನನಗಾದ ಸಂತೋಷಕ್ಕೆ ಮೇರೆಯೇ ಇರಲಿಲ್ಲ. ಯಾಕೆಂದರೆ ಪಕ್ಕದ ಕುರ್ಚಿಯಲ್ಲಿಯೇ ನನ್ನ ಪ್ರಿಯ ಸಾಹಿತಿ ಎರ್ನ್ಯೋಜೆಪ್ ಸುಖಾಸೀನನಾಗಿದ್ದ. ವೇಯಿಟರ್ ಆ ಕಡೆ ಹೋಗುವುದನ್ನೇ ಕಾಯುತ್ತ ಕೂತಿದ್ದವನಂತೆ, ನನಗೊಂದು ರಹಸ್ಯ ಹೇಳಲಿರುವವನಂತೆ ಎರ್ನ್ಯೋಜೆಪ್ ಮೆಲ್ಲಗೆ ನನ್ನ ಹತ್ತಿರ ಸರಿದು ತನ್ನ ಕೊರಳ ಪಟ್ಟಿಯನ್ನು ಗಟ್ಟಿಯಾಗಿ ಹಿಡಿದು ಗಂಟಲು ಸರಿಪಡಿಸಿಕೊಂಡ. ನನಗೆ ಒಂದು ಕ್ಷಣ ಗಾಬರಿಯಾಯಿತು. "ನೋಡಪ್ಪಾ! ನಿನಗೊಂದು ತೀರ ಮುಖ್ಯವಾದ ವಿಷಯ ಹೇಳಬೇಕೆಂದಿರುವೆ" ಎಂದು ಪಿಸುನುಡಿದ.

"ಹೇಳಿರಿ!" ಎಂದೆ ನಾನು.

"ಕೋಪಿಸಿಕೊಳ್ಳದಿದ್ರೆ ನಿನ್ಗೆ ನಾನೊಂದ್ಮಾತು ಹೇಳ್ತಿನಿ... ಕೋಪಿಸಿಕೊಳ್ಳೊದಿಲ್ಲಂತ ಮಾತು ಕೊಡ್ತೀಯಾ?"

"ಹಾಗೇ ಆಗ್ಲಿ... ಹೇಳಿ ಪರವಾ ಇಲ್ಲ" ಎಂದೆ ನಗುತ್ತ. ಮೇಲ್ನೋಟಕ್ಕೆ ನಾನು ಆಡಿದ್ದು ಸರಳ ಮಾತಾಗಿರಬಹುದು. ಆದರೆ ಒಳಗೆ ಒಂಥರಾ ಕಸಿವಿಸಿ. ನಾಡಿನ ಸುಪ್ರಸಿದ್ಧ ಸಾಹಿತಿಯೊಂದಿಗೆ ನನ್ನ ಪರಿಚಯ ಈ ರೀತಿಯಾಗಬಹುದೆಂದು ನಾನು ಕನಸಿನಲ್ಲೂ ಊಹಿಸಿರಲಿಲ್ಲ.

"ಆಯ್ತು... ಮೊದಲು ನೀನು ಊಟ ಮುಗಿಸು."

"ಪರವಾಗಿಲ್ಲ ಈಗ್ಲೆ ಹೇಳಿ ಸಾರ್ ಅದೇನೂ ಅಂತ," ಎಂದೆ. ಸಾಹಿತಿಯ ಅಂತರಂಗದಲ್ಲಿ ನಿಗೂಢವಾಗಿ ಉಳಿದಿದ್ದ ಆ ಸಸ್ಪೆನ್ಸ್ ನನ್ನೊಳಗೆ ಭಯಂಕರವಾಗಿ ಬೆಳೆದಿತ್ತು.

"ಅಷ್ಟು ಅವಸರವೇನೂ ಮಾಡಬೇಕಿಲ್ಲ...... ಸಾಕಷ್ಟು ಸಮಯ ಇದೆ. ಊಟ ಮುಗಿಸಿದ ನಂತರ ಹೇಳೋದು ಕೇಳೋದು ಮಾಡೋಣ."

"ಸರಿ... ನಿಮ್ಮಿಷ್ಟ"

ಸಪ್ಲಾಯರ್ ಊಟದ ತಟ್ಟೆ ತಂದು ಮುಂದಿಟ್ಟ, ಅವಸರವಸರದಿಂದ ಊಟ ಮುಗಿಸಿದೆ. ನನ್ನ ಹೆಮ್ಮೆಯ ಸಾಹಿತಿ ಹೇಳ

ಲಿರುವ ಸಂಗತಿ ಕೇಳಲು ಎಲ್ಲಿಲ್ಲದ ತವಕ ನನ್ನೆದೆಯಲ್ಲಿ ಶುರುವಾಗಿತ್ತು. ಪ್ರತಿಯೊಬ್ಬ ಮನುಷ್ಯ ನನ್ನು ಅಸಾಧ್ಯವಾದ ಅನುಮಾನದಿಂದ ನೋಡುವಂಥ ಸೂಕ್ಷ್ಮ ಸಂವೇದನಾಶೀಲ-ಮನುಷ್ಯನಾತ ಎಂಬುದನ್ನು ಬರಹಗಳ ಮೂಲಕ ತಿಳಿದುಕೊಂಡಿದ್ದೆ. ನಾನು ತಿಳಿದುಕೊಂಡಂತೆ ಆತನ ತಂದೆ ಸಾಮಾನ್ಯ ಶಿಕ್ಷಕ ಎಂಬುದಂತೂ ನಿಜ. ತಂದೆಯ ಗುಣ ಈತನಲ್ಲಿ ಸಹಜವಾಗಿಯೇ ಬಂದಿದ್ದಿರಬಹುದು. ಕೇಳುವವರು ಸಿಕ್ಕರೆ ಧಾರಾಳವಾಗಿ ಸಲಹೆಗಳನ್ನೂ ಉಪದೇಶಗಳನ್ನೂ ಉಚಿತವಾಗಿ ನೀಡುವವರು, ಆದರೆ ಕೇಳುವವರು ಸಿಕ್ಕಬೇಕಲ್ಲ!

ನಾವಿಬ್ಬರೂ ಊಟ ಮಾಡಿ ಮುಗಿಸಿದೆವು.

ಆತ, ನೆಮ್ಮದಿಯಿಂದ, ಹೆಗಲ ಮೇಲೆ ಹಾಕಿಕೊಂಡಿದ್ದ ಬಟ್ಟೆಯಿಂದ ಕೈ, ಬಾಯಿ ಒರೆಸಿಕೊಂಡ. ಆತ ಹೇಳಬಹುದಾದ ಸಂಗತಿ ಕೇಳಲು ನಾನೂ ಸಿದ್ಧನಾಗಿ ಕುರ್ಚಿಗಾತು ಕೂತುಕೊಂಡೆ.

"ನೋಡು ಯುವಗೆಳೆಯ, ಅಕಾಕ್ಸಾ ಬೀದಿಯಲ್ಲಿರುವ ಥಿಯೇಟರಿನಲ್ಲಿ ಒಂದು ಒಳ್ಳೆಯ ಇಂಗ್ಲಿಷ್ ಫಿಲಂ ಬಂದಿದೆ. ನನ್ ಜೊತೆ ಯಾಕೆ ನೀನು ಬರಬಾರದು? ನಿನ್ನ ಟಿಕೆಟ್ನ ನಾನೇ ತೆಗೆಸ್ತೀನಿ. ಸ್ವಲ್ಪೊತ್ತು ಹಾಯಾಗಿ ಸಿನಿಮಾ ನೋಡಿ ಕಾಲ ಕಳೆಯೋಣ" ಎಂದು ನುಡಿದ ನನ್ನ ಅಭಿಮಾನದ ಲೇಖಕ.

"ಥಾಂಕ್ಯೂ ವೆರ್ರಿ ಮಚ್ ಸಾರ್, ಆದರೆ... ಆ...ದ...ರೆ...ನೀವು ನನಗೆ ಒಂದು ಮುಖ್ಯವಾದ ಸಂಗತಿ ಹೇಳಲು ಯೋಚಿಸಿದ್ದಿರಿ" ಅಂತ ನಾನಂದೆ.

"ಹೌದಂತ ತಿಳಿದುಕೋ... ಸಿನಿಮಾ ನೋಡಿ-ಯಾದ ನಂತರ ಆ ಸಂಗತಿ ತಿಳಿದುಕೊಳ್ಳಬಹು-ದಲ್ಲವೆ...? ಮೊದಲೆ ನಿನಗೆ ಆ ವಿಷಯ ಹೇಳಿ ನಿನ್ನ ನೆಮ್ಮದೀನ ಹಾಳುಮಾಡೋಕೆ ನನಗಿಷ್ಟವಿಲ್ಲ... ಬಾ... ಹೋಗೋಣ... ಸಿನಿಮಾಕ್ಕೆ ಹೊತ್ತಾಯ್ತು."

ಅದಕ್ಕೆ ಉತ್ತರವಾಗಿ ಏನನ್ನು ನುಡಿಯು-ವುದೋ, ನನಗೊಂದೂ ತಿಳಿಯಲಿಲ್ಲ. ಮೌನ ಧರಿಸಿ ಅವರೊಂದಿಗೆ ಹೆಜ್ಜೆ ಹಾಕಿದೆ. ದಾರಿಯಲ್ಲಿ ತಾವು ಬರೆದಿದ್ದ ಒಂದು ಅಪ್ರಕಟಿತ ಕಥೆ ಬಗ್ಗೆ ನನ್ನ ಹತ್ತಿರ ಹೇಳುತ್ತ ನಡೆಯತೊಡಗಿದರು ಅವರು. ಕಥೆಯ ಬಹಳಷ್ಟು ಭಾಗವನ್ನು ಫ್ರೆಂಚ್ ಭಾಷೆಯಲ್ಲಿ ಹೇಳತೊಡಗಿದರು. ನನಗೆ ಫ್ರೆಂಚ್ ಭಾಷೆ ತಿಳಿಯದೆಂದು ಆತನಿಗೂ ಗೊತ್ತಿರದೆ ಇಲ್ಲ. ಅದಕ್ಕೆಂದೇ ಆತ ನನಗೆ ಕಥೆಯ ಬಗ್ಗೆ ಹೇಳುತ್ತಿರಬಹುದೆಂದು ಕೊಂಡೆ. ವಿಚಿತ್ರವಾದ ಮನುಷ್ಯ ಎರ್ನೋಜೆಪ್ ಅನ್ನಿಸಿತು ನನಗೆ.

ಆ ಸಿನಿಮಾ ನನಗೆ ಎಳ್ಳಷ್ಟೂ ಅರ್ಥವಾಗಲಿಲ್ಲ. ಅಷ್ಟಕ್ಕೂ ನನ್ನ ಲಕ್ಷ್ಯ ಆ ಸಿನಿಮಾ ಬಗ್ಗೆ ಇದ್ದರೆ ತಾನೇ ಇಷ್ಟವೆನಿಸುವುದು. ಆತ ನನ್ನ ಬಳಿ ಅದಾವ ವಿಷಯ ಕುರಿತು ಪ್ರಸ್ತಾಪಿಸಲು ಲೆಕ್ಕ ಹಾಕಿರಬಹುದು ಎಂದು ಥಿಯೇಟರಿನಲ್ಲಿರುವಷ್ಟು ಕಾಲ ಯೋಚಿಸಿದೆ. ಈ ಮೊದಲು ಯಾವಸಂದರ್ಭದಲ್ಲಾದರೂ ನನ್ನ ಈ ಪ್ರಿಯ ಸಾಹಿತಿಯ ಬಗ್ಗೆ ಕೆಟ್ಟದ್ದಾಗಿ ಯೋಚಿಸಿದ್ದೇನೆಯೋ ಎಂದು ಯೋಚಿಸಿದೆ. ಹಾಗೆ ಯೋಚಿಸಿದ ಸಂದರ್ಭ ನನ್ನ ಬದುಕಿನ ಈ ವರೆಗಿನ ಯಾವ ಹಾಳೆಯಲ್ಲಿ ಸಿಕ್ಕಲಿಲ್ಲ.

ಸಿನಿಮಾ ಬಿಟ್ಟಿದ್ದಾಯಿತು. ಜನಸಮೂಹ ಭೇದಿಸಿಕೊಂಡು ಇಬ್ಬರೂ ದಾರಿ ಹಿಡಿದು ಹೊರಟೆವು. ಅಕಾಕ್ಸಾ ಬೀದಿಯಗುಂಟ ಸೀಳು ಹಾದಿ ತಲಪುವವರೆಗೆ ಆ ಸಿನಿಮಾ ಕುರಿತಂತೆ ಎರ್ನೋಜೆಪ್ ತನ್ನ ಅಭಿಪ್ರಾಯ ವ್ಯಕ್ತಪಡಿಸುತ್ತಲೇ ಇದ್ದರು. ತುಂಬ ಸಹನೆಯಿಂದ ಆತನ ಪ್ರತಿ ಮಾತನ್ನೂ ಕೇಳುತ್ತ ಸಾಗಿದ್ದೆ ನಾನು. ಚಿತ್ರವಿಮರ್ಶೆ ಮಾತುಗಳು ಮುಗಿದ ನಂತರ ನಾನು ತೀರ ಸಂಕೋಚದಿಂದ ಹೀಗೆ ಕೇಳಿದೆ:

"ನನ್ನ ಹತ್ರ ನೀವು ಅದಾವುದೋ ಬಹು ಮುಖ್ಯ ವಿಷಯ ಪ್ರಸ್ತಾಪಿಸಬೇಕೆಂದಿದ್ದಿರಿ...?"

"ಅಂಥ ತೀರಾ ಮುಖ್ಯವಾದ ವಿಷಯವೇನಲ್ಲ ಬಿಡು. ಸುಮ್ಮನೆ ಯಾಕೆ ತಲೆ ಕೆಡಿಸಿಕೊಳ್ಳುತ್ತಿ" ಅವರು ಮಾತಿನ ಗತಿ ಬದಲಿಸುತ್ತ ನುಡಿದರು. "ಮೊದಲೇ ಈ ವಿಷಯ ಕುರಿತಂತೆ ನಿನ್ನಂಥೋರ ಬಳಿ ಪ್ರಸ್ತಾಪಿಸದಿದ್ದರೆ ಚೆನ್ನಾಗಿತ್ತೋ ಏನೋ... ಅಲ್ಲದೆ ನೀನು ನನಗೆ ತುಂಬ ಮೆಚ್ಚುಗೆಯಾದ ಹುಡುಗ" ಎಂದು ನನ್ನ ಹೆಗಲ ಮೇಲೆ ನಿಸ್ಸಂ-ಕೋಚವಾಗಿ ಕೈಹಾಕಿ ಸಾಗಿದರು ಆತ.

ಆತನ ಈ ಮಾತಿನಿಂದ ನನಗೆ ನಿಜಕ್ಕೂ ನಿರಾಸೆಯಾಯಿತು. ಆದರೂ ಧೈರ್ಯ ತಂದುಕೊಂಡು ಮತ್ತೆ ಪ್ರಸ್ತಾಪಿಸಿಯೇಬಿಟ್ಟೆ.

"ಅದಾವ ಸಂಗತಿಯೋ... ನನಗೆ ಕೇಳಬೇಕೆಂಬಾಸೆ!"

ಆತ ನನ್ನ ಕೈಯನ್ನು ತನ್ನ ಕೈಲಿ ಹಿಡಿದುಕೊಂಡು ಸವರಿ ಉಸಿರುಬಿಟ್ಟು ಸಸ್ಪೆನ್ಸನ್ನು ಮತ್ತಷ್ಟು ಜಟಿಲಗೊಳಿಸಿದರು.

"ಹಾಗೋ! ಅಂಥ ವಿಷಯವನ್ನು ಹೇಳುವ ಕೇಳುವ ಮೊದಲು ನಾವಿಬ್ಬರೂ ಒಂದು ಕಪ್ ಕಾಫಿ ಕುಡಿದರೆ ಚೆನ್ನಾಗಿರ್‍ತದೋ ಏನೋ" ಎಂದರು. ನನಗಿವತ್ತು ನಿಜವಾಗಲೂ ತೀರ ಮುಖ್ಯವಾದ ಕೆಲಸ ಇತ್ತು. ಅದು ಮೋಲಿನ್‌-ರೇಗ್ ಹತ್ತಿರ.

"ಸಾರಿ; ಸಾರ್ ಮೋಲಿನ್‌ರೇಗ್ ಹತ್ತಿರ ನನಗೆ ಸ್ವಲ್ಪ ಕೆಲಸ ಇದೆ... ನಾನು ಹೋಗಬೇಕು"

"ಹೋಗ್ಲಿ... ಆ ಕಡೆಗೇ ಹೋದರಾಯಿತು... ಕಾಫಿ ಕುಡಿಯಲು ಯಾವ ಹೋಟಲ್ಲಾದ್ರೇನು" ಅಂತ ಆತ ಮತ್ತೆ ನನ್ನ ಹೆಗಲ ಮೇಲೆ ಕೈಹಾಕಿ "ಕಾಫಿ ಕುಡೀತ ಅಲ್ಲೇ ಮಾತಾಡೋಣ" ಅಂದರು.

ಆದರೆ ಅಲ್ಲೂ ನನಗೆ ಅಗಾಧವಾದ ನಿರಾಸೆ ಕಾದಿತ್ತು. ಕಾಫಿ ಕುಡಿದಾದ ನಂತರ ರೆಸ್ಟೋ-ರೆಂಟು ಮುಚ್ಚುವವರೆಗೆ ನಾವಿಬ್ಬರೂ ಅಲ್ಲೆ ಕೂತಿದ್ದೆವು. ಆದರೆ ಆ ವಿಷಯವನ್ನು ಸಾಹಿತಿ ಪ್ರಸ್ತಾಪಿಸಲೇ ಇಲ್ಲ.

ನಾವು ಕೂತಿದ್ದ ಟೇಬಲ್ ಸುತ್ತಮುತ್ತ ಸೇರುತ್ತಿದ್ದ ಚಿತ್ರಕಾರರೊಂದಿಗೆ ಕಿರಿಯ ಬರಹಗಾರರೊಂದಿಗೆ ತಮಾಷೆಯಿಂದ ತನ್ನ ಬದುಕಿನ ಅನುಭವಗಳನ್ನೂ ಹಂಚಿಕೊಂಡರು. ತಾನು ಬಾಲ್ಯಾವಸ್ಥೆಯಲ್ಲಿ ಮಾಡುತ್ತಿದ್ದ ತುಂಟತನಗಳ ಬಗ್ಗೆ: ಬರೆದ, ಬರೆಯಲಿರುವ ಕಥೆ ನಾಟಕಗಳ ಬಗ್ಗೆ ರಸವತ್ತಾಗಿ ಮಾತಾಡುತ್ತ ಕಾಲ ತಳ್ಳಿದರು ಎರ್ನ್ಸೋಜೆಪ್. ನಾವು ಅಲ್ಲಿಂದ ಏಳುವ ಹೊತ್ತಿಗೆ ಬೆಳ್ಳಿಚುಕ್ಕಿ ಆಕಾಶದಲ್ಲಿ ಮೂಡಿತ್ತು... ನನ್ನೊಳಗೆ ಚೈತನ್ಯ ಇಮುರಿ ಹೋಗಿತ್ತು.

ಹೇಳದೇ ಇದ್ರೆ ಏನಾಯಿತು? ಇಷ್ಟಕ್ಕೂ ಮುಳುಗಿ ಹೋಗುವುದಾದರೂ ಏನು? ಅದೂ ಅಲ್ಲದೆ ಹೇಳಬೇಕಾಗಿರುವ ವಿಷಯ ಕೇಳಲು ಇಂಪಾದ ವಿಷಯವೇನೂ ಅಲ್ಲದಿರಬಹುದು ಎಂದು ನನ್ನಷ್ಟಕ್ಕೆ ನಾನು ಸಮಾಧಾನಪಟ್ಟುಕೊಂಡೆ. ನಿದ್ದೆ ಕವಿದು ಆಕಳಿಕೆ ತೂಕಡಿಕೆ ಪ್ರಾರಂಭವಾಯಿತು ನನಗೆ. ಹೀಗೆ ನಡೆಯುತ್ತ ಇಬ್ಬರೂ ವೋಕ್ಸೋ ಗಾನ್ ಬೀದಿಯ ತುದಿಯನ್ನು ಸೇರಿಕೊಂಡೆವು. ನಮ್ಮ ನಮ್ಮ ದಾರಿಗಳು ಬೇರೆಯಾಗಲಿರುವ ಕೂಡು ರಸ್ತೆ ಅದು.

"ಸರಿ: ಈಗ ಆ ವಿಷಯವನ್ನು ಹೇಳಲೇನು?" ಇದ್ದಕ್ಕಿದ್ದಂತೆ ಆತ ಕೇಳಿದರು.

"ಹೇಳಿ!" ಎಂದು ಕೂತೂಹಲ ವ್ಯಕ್ತಪಡಿಸಿದೆ.

"ನೋಡಪ್ಪಾ" ಎಂದು ಪ್ರಾರಂಭಿಸಿದರು. ಇತ್ತೀಚೆಗೆ ಎಲ್ಲೋ ನಾನು ಪ್ಲಾಸ್ಟಿಕ್ ಸರ್ಜರಿ ಕುರಿತಂತೆ ಯಾವುದೋ ಪತ್ರಿಕೇಲಿ ಓದಿದೆ. ಎಳ್ಳಷ್ಟೂ ನೋವಾಗದಂತೆ ಸರ್ಜರಿ ನಡೆಸುತ್ತಾರಂತೆ. ಹೆದರಿಕೊಳ್ಳಬೇಕಾಗಿಯೇ ಇಲ್ಲ. ಯಾವ ಕಾರಣಕ್ಕೂ ಸಿಟ್ಟಿಗೇಳಬಾರದು. ಹೀಗೆ ಕಿವಿ ತೆರೆದುಕೊಂಡು ಇಂಥ ಇಕ್ಕಟ್ಟು ಬೀದಿಗಳಲ್ಲಿ ತಿರುಗುವುದು ಒಳ್ಳೆಯದೂ ಅಲ್ಲ. ನಿನ್ನ ಜಾಗದಲ್ಲಿ ನಾನಿದ್ದಿದ್ದರೆ ಎಂದೋ ಪ್ಲಾಸ್ಟಿಕ್ ಸರ್ಜರಿ ಮಾಡಿಸಿಕೊಂಡು ಬಿಡುತ್ತಿದ್ದೆ. ನನ್ ಮಾತು ನಂಬು. ಅದೇನು ಅಂಥ ದೊಡ್ಡ ಆಪರೇಶನ್ನೇನೂ ಅಲ್ಲ. ಕಿವಿಗಳನ್ನೂ ನೋವಾಗದಂತೆ ಕೊಯ್ದು ಹೊಲಿದುಬಿಡುತ್ತಾರಂತೆ ನೋಡು. ಆಗ ನಿನ್ನ ಈ ಮುಖ ನೋಡಲು ತುಂಬಾ ಮುದ್ದಾಗಿರ್‍ತದೆ. ಇದೇ ನೋಡು ನಾನು ನಿನಗೆ ಹೇಳಬೇಕೆಂದಿದ್ದ ಮುಖ್ಯವಾದ ಸಂಗತಿ."

ಕೆಲವು ಕ್ಷಣಗಳವರೆಗೆ ಪ್ರತಿಯಾಗಿ ಏನು ನುಡಿಯಬೇಕೋ ತಿಳಿಯದೆ ಮ್ಲಾನವದನನಾದೆ. "ನಿಮಗೆ ನನ್ನ ಧನ್ಯವಾದಗಳು ಸಾರ್. ನಿಮ್ಮ ಅಮೂಲ್ಯ ಸಲಹೆ ಕುರಿತಂತೆ ನಾನು ತಪ್ಪದೆ ಆಲೋಚಿಸುತ್ತೇನೆ" ಎಂದು ನುಡಿದೆ. ನಂತರ ಆತ ನನ್ನ ಕೈ ಕುಲುಕಿ ಸಿಳ್ಳೆಹಾಕುತ್ತ ಮಾರ್ಗರೆಟ್ ಐಲೆಂಡ್ ಕಡೆ ನಡೆದು ಕರಗಿ ಹೋದರು. ✲

# ಮದ್ಯಪಾನಿಗಳಿಗೊಂದು ಆಶಾಕಿರಣ

ಗೀತಾ ದೇಶಾಯಿ

ಮದ್ಯಪಾನವು ಅನಾದಿಕಾಲದಿಂದಲೂ ಮಾನವನನ್ನು ಅಧೋಗತಿಗಿಳಿಸುವ ಅನಿಷ್ಟ ವ್ಯಸನಗಳಲ್ಲೊಂದು. ಈ ವ್ಯಸನಕ್ಕೆ ತುತ್ತಾದವನು ಶಾರೀರಿಕವಾಗಿಯೂ ಮಾನಸಿಕವಾಗಿಯೂ ದುರ್ಬಲನಾಗುವುದು ನಿಃಸಂದೇಹ. ಹಾಗಿದ್ದರೂ ಬಡ ಕೂಲಿಕಾರನಿಂದ ಮೊದಲುಗೊಂಡು ಸಿರಿವಂತ ಉದ್ಯಮಿಗಳು, ಖ್ಯಾತ ನಟನಟಿಯರು, ರಾಜಕಾರಣಿಗಳು, ವಿದ್ಯಾರ್ಥಿಗಳು–ಹೀಗೆ ಸಮಾಜದ ಎಲ್ಲ ವರ್ಗದ ಜನರನ್ನು ಮದಿರಾ–ಮೋಹಿನಿ ಆಕರ್ಷಿಸುತ್ತಾಳೆ. ಇದರ ದುಷ್ಪರಿಣಾಮುಗಳು ಗೊತ್ತಿದ್ದರೂ ಇತ್ತೀಚೆಗೆ ಮದ್ಯಪಾನಕ್ಕೆ ಸಾಮಾಜಿಕ ಪ್ರತಿಷ್ಠೆ ಲಭಿಸಿರುವುದು ಒಂದು ದೊಡ್ಡ ದುರಂತ! ನೌಕರಿಯಲ್ಲಿ ಪ್ರಮೋಶನ್ ದೊರಕಿದಾಗ ಅಥವಾ ದೊರಕಿಸಲು ಸಹೋದ್ಯೋಗಿಗಳಿಗೆ, ಮೇಲಧಿಕಾರಿಗಳಿಗೆ ತೀರ್ಥಪ್ರಾಶನ ಮಾಡಿಸುವುದು, ವಾಣಿಜ್ಯೋದ್ಯಮಿಗಳು ತಮ್ಮ ಉತ್ಪಾದನೆಗಳ ಪ್ರಚಾರಕ್ಕಾಗಿ ಡ್ರಿಂಕ್ಸ್ ಪಾರ್ಟಿಗಳನ್ನೇರ್ಪಡಿಸುವುದು, ಚುನಾವಣೆಗಳಲ್ಲಿ ರಾಜಕಾರಣಿಗಳು ಹೆಂಡದ ಹೊಳೆ ಹರಿಸುವದು ಸರ್ವೇಸಾಮಾನ್ಯವಾಗಿದೆ. ಇಂಥ ಪಾರ್ಟಿಗಳಲ್ಲಿ ಮದ್ಯವನ್ನು ಮುಟ್ಟದ ವ್ಯಕ್ತಿ ಜತೆಗಾರರಿಂದ ಅಪಹಾಸ್ಯಕ್ಕೆ ಗುರಿಯಾಗಬಹುದೆಂಬ ಭೀತಿಯಿಂದ ದಾಕ್ಷಿಣ್ಯಕ್ಕೊಳಗಾಗಿ ಸ್ವಲ್ಪವಾದರೂ ಮದ್ಯ ಸೇವಿಸಲೇಬೇಕಾಗುತ್ತದೆ. ಮುಂದೆ ಅದೇ ಚಟವಾಗಿ ಪರಿಣಮಿಸಿ ಆ ವ್ಯಕ್ತಿ ಮದ್ಯದ ದಾಸನಾಗಿಬಿಡುತ್ತಾನೆ.

ಕುಡಿತದ ಚಟ ಒಮ್ಮೆ ಅಂಟಿತೆಂದರೆ ಅದರ ರಾಕ್ಷಸ ಬಾಹುಗಳಿಂದ ಬಿಡುಗಡೆ ಹೊಂದುವುದು ಕಷ್ಟ. ಆದರೆ ಕೆಲವು ಮದ್ಯಪಾನಿಗಳಿಗೆ ತಾವು ಕುಡಿಯುವುದು ತಪ್ಪು, ಇದರಿಂದ ತಾವು ಮುಕ್ತರಾಗಬೇಕು ಎಂದು ಅನಿಸುತ್ತಿರುತ್ತದೆ. ಈ ರೀತಿ ಮದ್ಯದ ವ್ಯಸನದಿಂದ ಮುಕ್ತರಾಗಬೇಕೆಂಬ ಪ್ರಾಮಾಣಿಕ ಇಚ್ಛೆ ಇರುವಂಥ ವ್ಯಕ್ತಿಗಳಿಗೆ ಮಾರ್ಗದರ್ಶನ ನೀಡಲು ಸ್ಥಾಪಿಸಲಾದ ಸಂಸ್ಥೆ ಆಲ್ಕೊಹಾಲಿಕ್ ಅನಾನಿಮಸ್-ಅನಾಮಿಕ ಮದ್ಯಪಾನಿ ಅಥವಾ ಎ.ಎ. ಸಂಸ್ಥೆ ಈ ಸಂಸ್ಥೆ ೧೯೩೫ರಷ್ಟು ಹಿಂದೆಯೇ ನ್ಯೂಯಾರ್ಕಿನ ಒಬ್ಬ ಸ್ಟಾಕ್ ಬ್ರೋಕರ್ ಹಾಗೂ ಓಹಾಯೋದ ಸರ್ಜನ್ ಒಬ್ಬರು ಸೇರಿ ಸ್ಥಾಪಿಸಿದ್ದರು. ಮುಂದೆ ಈ ಸಂಸ್ಥೆಯ ಮಹತ್ವವನ್ನರಿತು ಪ್ರಪಂಚದಾದ್ಯಂತ ಇಂಥ ಸಂಘಟನೆಗಳು

ತಲೆಯೆತ್ತಿದವು. ಇಂದು ೯೨ ದೇಶಗಳಲ್ಲಿ ಈ ಸಂಸ್ಥೆಗಳು ಕಾರ್ಯಮಾಡುತ್ತಿದ್ದು ೧೦ ರಿಂದ ೧೫ ಲಕ್ಷ ಸದಸ್ಯರಿದ್ದಾರೆ.

ಭಾರತದಲ್ಲಿ ಮುಂಬಯಿಯಲ್ಲಿ ೧೯೫೭ರಲ್ಲಿ ಈ ಸಂಸ್ಥೆ ಸ್ಥಾಪಿಸಲ್ಪಟ್ಟಿತು. ಅದರ ೫೪ ಶಾಖೆಗಳು ದೇಶದ ಬೇರೆ ಬೇರೆ ಭಾಗಗಳಲ್ಲಿ ಕೆಲಸ ಮಾಡುತ್ತಿವೆ. ಶಿಕ್ಷಣ, ಆರ್ಥಿಕ ಸ್ಥಿತಿ, ವಯಸ್ಸು, ಜಾತಿ ಇತ್ಯಾದಿ ಯಾವುದನ್ನೂ ಈ ಸಂಸ್ಥೆ ಗಣನೆಗೆ ತೆಗೆದುಕೊಳ್ಳದೆ ಎಲ್ಲರಿಗೂ ಮುಕ್ತ ಪ್ರವೇಶಾವಕಾಶವನ್ನಿತ್ತಿದೆ. ಆದರೆ ಸದಸ್ಯನಾಗಬಯಸುವವನಲ್ಲಿ ಒಂದೇ ಒಂದು ಅರ್ಹತೆ ಇರುವದವಶ್ಯ. ಅದೆಂದರೆ ಮದ್ಯಪಾನವನ್ನು ಬಿಡಬೇಕೆನ್ನುವ ಪ್ರಾಮಾಣಿಕ ಕಳಕಳಿ. ಕುಡಿತದಿಂದ ಮುಕ್ತರಾಗಲು ವರ್ಷಾನುಗಟ್ಟಲೆ ಪ್ರಯತ್ನಿಸಿ ಹತಾಶರಾದವರನ್ನು ಈ ಸಂಸ್ಥೆ ಬರಮಾಡಿಕೊಂಡು ಅವರಿಗೆ ಅಭಯಹಸ್ತ ನೀಡಿ, ಕುಡಿಯದೆ ಸುಖಜೀವನ ನಡೆಸುವುದು ಸಾಧ್ಯವೆಂಬುದನ್ನು ತೋರಿಸಿಕೊಡುತ್ತದೆ. ಈ ಸಂಸ್ಥೆಯ ಕಾರ್ಯವೈಖರಿ ಹೀಗಿದೆ:

ಆಲ್ಕೊಹಾಲಿಕ್ ಅನಾನಿಮಸ್-ಹೃದಯ ಪರಿವರ್ತನೆಯ ಆಧಾರದ ಮೇಲೆ ರಚಿತವಾದ ಸಂಸ್ಥೆ. ನಿರ್ದಿಷ್ಟಪಡಿಸಿದ ದಿವಸ ಎಲ್ಲ ಸದಸ್ಯರು ಒಂದೆಡೆ ಸೇರಿ ಮದ್ಯಪಾನದ ತಮ್ಮ ಸಿಹಿ-ಕಹಿ ಅನುಭವಗಳನ್ನು ಹೇಳುತ್ತಾರೆ. ಹಾಗೆಯೇ ಈ ವ್ಯಸನದಿಂದ ಪೂರ್ಣ ಮುಕ್ತರಾದವರು ತಾವು ಯಾವ ಯಾವ ಉಪಾಯಗಳನ್ನು ಯೋಜಿಸಿ, ಮದ್ಯವನ್ನು ಸಂಪೂರ್ಣವಾಗಿ ತೊರೆಯಲು ಸಾಧ್ಯವಾಯಿತೆಂಬುದನ್ನು ವಿವರಿಸುತ್ತಾರೆ. ಹಾಗೂ ಇದರಿಂದ ಕಳೆದುಹೋದ ತಮ್ಮ ಕುಟುಂಬದ ನೆಮ್ಮದಿ ಮತ್ತೆ ಲಭಿಸಿರುವುದನ್ನು ಸೋದಾಹರಣವಾಗಿ ನಿರೂಪಿಸುತ್ತಾರೆ. ಇವನ್ನೆಲ್ಲ ಕೇಳಿದಾಗ ಒಬ್ಬನಿಗೆ ಸಾಧಿಸಿದ್ದು ತನಗೂ ಏಕೆ ಸಾಧಿಸಲಾಗುವುದಿಲ್ಲ ಎಂಬ ವಿಚಾರ ಇನ್ನೊಬ್ಬ ಕುಡುಕನ ಮನಸ್ಸಿನಲ್ಲಿ ಸುಳಿದು ಅವನೂ ಆ



ದಿಸೆಯಲ್ಲಿ ಪ್ರಯತ್ನಿಸತೊಡಗುತ್ತಾನೆ. ಹೀಗೆ ವಿಚಾರಗಳ ಕೊಡುಕೊಳ್ಳುವಿಕೆಯಿಂದ ಸದಸ್ಯರಲ್ಲಿ ಮಾನಸಿಕ ಸಿದ್ಧತೆ ಉಂಟಾಗಿ ಅವರು ಕಾರ್ಯಪ್ರವೃತ್ತರಾಗುತ್ತಾರೆ.

ಈ ಸಂಸ್ಥೆಯಿಂದ ಪ್ರಯೋಜನ ಪಡೆದ ಸದಸ್ಯರ ಅನುಭವಗಳನ್ನು ಕೇಳಿದರೆ ಈ ಸಂಸ್ಥೆ ನಿಜವಾಗಿಯೂ ಮದ್ಯಪಾನಿಗಳಿಗೊಂದು ಆಶಾಕಿರಣವಾಗಿದೆಯೆಂದೆನಿಸದಿರದು. ಸದಸ್ಯರ ಅಭಿಪ್ರಾಯಗಳನ್ನು ಅವರ ಮಾತುಗಳಲ್ಲೇ ಕೇಳಿ:

"ಏ.ಏ. ಸಂಘಟನೆಯಲ್ಲಿ ಬಂದ ನಂತರ ನಮಗೆ ನಮ್ಮಂಥವರೇ ಸ್ನೇಹಿತರು ದೊರಕಿದರು. 'ಕುಡುಕ' ಎಂದು ಸಮಾಜ ನಮ್ಮನ್ನು ನಿಕೃಷ್ಟವಾಗಿ ಕಂಡಿದ್ದರೂ, ಕುಡಿಯುವದರಿಂದ ನಾವು ಅನುಭವಿಸಿದ ಸಮಸ್ಯೆಗಳನ್ನೇ ಈ ಸಂಸ್ಥೆಯ ಸದಸ್ಯರೂ ಅನುಭವಿಸಿದ್ದರಿಂದ ಅವರು ನಮ್ಮನ್ನು ಸಹಾನುಭೂತಿಯಿಂದ ನೋಡಿ, ಸರಿಯಾದ ಮಾರ್ಗದರ್ಶನ ನೀಡಿದರು. ಅಂತೆಯೇ ನಾವು ಈ ಸಂಸ್ಥೆಯ ಸಭೆಗಳಿಗೆ ತಪ್ಪದೆ ಹಾಜರಾಗಿ ಅಲ್ಲಿಯ ನಿಯಮಗಳನ್ನು ಪಾಲಿಸಿದೆವು. ಇದರಿಂದ ನಮ್ಮ ಮೊದಲಿನ ಆಚಾರ-ವಿಚಾರ ಹಾಗೂ ವ್ಯಕ್ತಿತ್ವದಲ್ಲಿ ಆಮೂಲಾಗ್ರ ಬದಲಾವಣೆ ಕಂಡುಬಂದಿದೆ. ನಮ್ಮ ಹಳೆಯ ಜೀವನವನ್ನು ಒಂದು ಕೆಟ್ಟ ಸ್ವಪ್ನವೆಂದು ಮರೆತು ಹೊಸ ಬಾಳು ಸಾಗಿಸಲು ಸಾಧ್ಯವಾಗಿದೆ. ಈ ಪವಾಡ ಹೇಗೆ ಜರುಗಿತು ಎನ್ನುತ್ತೀರಾ? 'ಇದೊಂದು ದಿನ ನಾನು ಮದ್ಯವನ್ನು ಮುಟ್ಟುವುದಿಲ್ಲ'— ಎಂದು ಪ್ರತಿದಿನ ಪ್ರತಿಜ್ಞೆ ಮಾಡಿ ಅದರಂತೆ ನಡೆದರೆ ಕ್ರಮೇಣ ನಾವು ಮದ್ಯವಿಲ್ಲದೆ ಸುಖಮಯವಾದ ಸಂಸಾರ ಜೀವನವನ್ನು ಅನುಭವಿಸಬಹುದಾಗಿದೆ."

ಹೀಗೆ ಮಾನವನ ಸಂಕಲ್ಪಶಕ್ತಿಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂಬುದಕ್ಕೆ ಈ ಸದಸ್ಯರ ಅನುಭವ ನಿದರ್ಶನವಾಗಿದೆ.

ಏ. ಏ. ಸಂಸ್ಥೆ ಸ್ವಯಂಸೇವಾ ಸಂಸ್ಥೆಯಾದರೂ ಕೆಲವು ನಿಬಂಧನೆಗಳನ್ನು ಇಟ್ಟುಕೊಂಡಿದೆ. ಅವು ಈ ಯಾವುವೆಂದರೆ: ೧) ನಮ್ಮ ಸಂಸ್ಥೆಗೆ ಯಾವುದೇ ಪದಾಧಿಕಾರಿಗಳಿಲ್ಲ. ಸದಸ್ಯರ ಮುಖಾಂತರ ವ್ಯಕ್ತವಾಗುವ ಅಭಿಪ್ರಾಯಗಳೇ ಮಾರ್ಗದರ್ಶಕ ಸೂತ್ರಗಳು. ಇಲ್ಲಿ ವ್ಯಕ್ತಿಗಿಂತ ತತ್ವಕ್ಕೆ ಹೆಚ್ಚು ಪ್ರಾಧಾನ್ಯ. ೨) ಅನಾಮಿಕತೆ ನಮ್ಮ ಸಂಸ್ಥೆಯ ಅಧ್ಯಾತ್ಮಿಕ ಅಡಿಗಲ್ಲು. ಜಾಹೀರಾತುಗಳ ಮೂಲಕ ಸಂಸ್ಥೆ ತನ್ನ ಪ್ರಚಾರ ಮಾಡಬಯಸುವುದಿಲ್ಲ. ೩) ಏ. ಏ. ಸಂಸ್ಥೆಯ ಪ್ರತಿಯೊಂದು ಶಾಖೆಯೂ ಸ್ವತಂತ್ರವಾಗಿ ಕಾರ್ಯ ನಿರ್ವಹಿಸಬಲ್ಲದು. ಆದರೆ ತನ್ನ ಸದಸ್ಯರಿಗೆ ಸರಿಯಾದ ಮಾರ್ಗದರ್ಶನ ನೀಡುವುದು ಆಯಾ ಶಾಖೆಯ ಪ್ರಮುಖ ಕರ್ತವ್ಯವಾಗಿದೆ. ೪) ಈ ಸಂಸ್ಥೆ ಬೇರೆ ಯಾವುದೇ ವಿಷಯದ ಬಗ್ಗೆ ತನ್ನ ಅಭಿಪ್ರಾಯ ವ್ಯಕ್ತಪಡಿಸುವದಿಲ್ಲವಾದುದರಿಂದ ಈ ಸಂಸ್ಥೆಯ ಹೆಸರನ್ನು ರಾಜಕೀಯದಲ್ಲಾಗಲಿ, ಬೇರೆ ಯಾವುದೇ ಸಂದರ್ಭದಲ್ಲಾಗಲೀ ಎಳೆಯಲಾಗದು.

ಈ ರೀತಿ ಇಂದಿನ ಜಾಹೀರಾತುಯುಗದಲ್ಲಿ ಪ್ರಸಿದ್ಧಿಯಿಂದ ದೂರವಾಗಿ ಮಾನವನ ಹೃದಯ ಪರಿವರ್ತನೆ ಹಾಗೂ ಸಂಕಲ್ಪಶಕ್ತಿಯ ಮೇಲೆ ಭರವಸೆಯಿಟ್ಟು ಆಲ್ಕೊಹಾಲಿಕ್ ಅನಾನಿಮಸ್ ಸಂಸ್ಥೆ ಕಾರ್ಯನಿರ್ವಹಿಸುತ್ತಿದೆ. ಜನರಲ್ಲಿಯ ಪಾನಾಸಕ್ತಿಯನ್ನು ಕಡಿಮೆ ಮಾಡಲು ಸರಕಾರವು ಪಾನಪ್ರತಿಬಂಧವನ್ನು ಜಾರಿಗೊಳಿಸಿದರೆ ಕಳ್ಳಭಟ್ಟಿಗಳು ತಲೆಯೆತ್ತಿ ನರಬಲಿಗೆ ಕಾರಣವಾಗುತ್ತವೆ. ಆದುದರಿಂದ ಏ. ಏ. ಯಂಥ ಸ್ವಯಂ-ಸೇವಾ ಸಂಸ್ಥೆಗಳು ಹೆಚ್ಚು-ಹೆಚ್ಚಾಗಿ ಅಸ್ತಿತ್ವಕ್ಕೆ ಬಂದಲ್ಲಿ ಸಮಾಜದ ಹಾಗೂ ಕುಟುಂಬದ ನೆಮ್ಮದಿಯನ್ನು ಹಾಳು ಮಾಡುತ್ತಿರುವ ಮದಿರಾ ರಾಕ್ಷಸನ ಹಾವಳಿಯನ್ನು ಸ್ವಲ್ಪ ಮಟ್ಟಿಗಾದರೂ ತಡೆಗಟ್ಟಬಹುದು. ✡



# ಆಡಾಡ್ತಾ ಅಪಘಾತವಾದೀತು....

-ಎಚ್. ಎಸ್. ಸಿದ್ಧಗಂಗಪ್ಪ

ಅಪಘಾತಗಳು ಆಕಸ್ಮಿಕವಾಗಿ ಕ್ಷಣಮಾತ್ರದಲ್ಲಿ ಉಂಟಾಗುವಂಥವು. ಪ್ರತಿಯೊಬ್ಬನೂ ತನ್ನ ಜೀವಿತದ ಅವಧಿಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಸಂದರ್ಭದಲ್ಲಿ, ಒಂದಲ್ಲ ಒಂದು ಕಾರಣದಿಂದ ಅಪಘಾತಕ್ಕೆ ತುತ್ತಾಗುತ್ತಾನೆ. ಅವು ಸಾಮಾನ್ಯವಾಗಿರಬಹುದು, ತೀವ್ರ ಸ್ವರೂಪದ್ದಾಗಿರಬಹುದು. ಅವುಗಳಿಂದ ಉಂಟಾಗುವ ದೈಹಿಕ ಹಾಗೂ ಮಾನಸಿಕ ತೊಂದರೆಗಳು ತಾತ್ಕಾಲಿಕವಾಗಿರಬಹುದು, ದೇಹದ ಮೇಲೆ ಶಾಶ್ವತವಾದ ಗಾಯದ ಗುರುತನ್ನುಂಟುಮಾಡಬಹುದು. ವಾಹನಗಳಿಂದ, ಯಂತ್ರಗಳಿಂದ, ಪ್ರಾಕೃತಿಕ ವೈಪರೀತ್ಯದಿಂದ, ಪ್ರಾಣಿಗಳಿಂದ, ಬೆಂಕಿ ನೀರು, ಇತ್ಯಾದಿಗಳಿಂದ ಅಪಘಾತಗಳು ಉಂಟಾಗುತ್ತವೆ. ಆದರೆ ಬಹುತೇಕ ಅಪಘಾತಗಳಿಗೆ ನಮ್ಮ ನಿರ್ಲಕ್ಷ್ಯ ಮನೋಭಾವ, ಅಜಾಗರೂಕತೆಗಳೇ ಕಾರಣ.

ದಿನ ನಿತ್ಯ ಮನೆಯ ಒಳಗಡೆ ನಾಲ್ಕು ಗೋಡೆಗಳ ಮಧ್ಯೆ ಕೂಡ ಕೆಲವು ಅಪಘಾತಗಳು ನಡೆಯುತ್ತಲೇ ಇರುತ್ತವೆ. ಗೃಹಿಣಿ ಅಡುಗೆ ಮಾಡುವಾಗ ಬಟ್ಟೆಗೆ ಬೆಂಕಿ ತಗಲುವುದು, ತರಕಾರಿ ಹೆಚ್ಚುವಾಗ ಕೈ ಕೊಯ್ದುಕೊಳ್ಳುವುದು. ಕಾದ ಎಣ್ಣೆ ಮುಖಕ್ಕೆ ಸಿಡಿದು ಗಾಯವಾಗುವುದು, ವಿದ್ಯುತ್ ಶಾಕ್ ಹೊಡೆಯುವುದು, ಕುದಿಯುವ ನೀರು ಮೈ ಮೇಲೆ ಚೆಲ್ಲಿ ಬೊಬ್ಬೆಗಳೇಳುವುದು, ಇತ್ಯಾದಿ. ಕೆಲವು ವೇಳೆ ಈ ಅಪಘಾತಗಳು ತೀವ್ರ ಸ್ವರೂಪದವಾಗಿದ್ದು ಪ್ರಾಣಾಪಾಯ ಉಂಟಾಗುವ ಸಾಧ್ಯತೆಯೂ ಇದೆ.

ಮನೆಯ ಒಳಗಡೆ ಉಂಟಾಗುವ ಅಪಘಾತಗಳಿಗೆ ಹೆಚ್ಚಾಗಿ ಹೆಂಗಸರು, ಮಕ್ಕಳು, ವಯೋವೃದ್ಧರು ತುತ್ತಾಗುತ್ತಾರೆ. ಬಹುತೇಕ ಮನೆಯ ಕೆಲಸವನ್ನು ಗೃಹಿಣಿಯರೇ ನಿರ್ವಹಿಸುವುದರಿಂದ ಅನೇಕ ಹಂತಗಳಲ್ಲಿ ಆಕಸ್ಮಿಕಗಳಿಗೆ ಅವರೇ ಈಡಾಗುತ್ತಾರೆ.

ಇದಕ್ಕೆ ಕಾರಣ ಅವರು ಉಪಯೋಗಿಸುವ ವಿದ್ಯುತ್ ಸ್ಟವ್, ಗ್ಯಾಸ್ ಸ್ಟವ್, ಸಿಲಿಂಡರ್ ಗ್ಯಾಸ್, ಮತ್ತು ಅವರು ಧರಿಸುವ ಪಾಲಿಸ್ಟಾರ್, ನೈಲಾನ್, ನೈಲೆಕ್ಸ್, ಸಿಲ್ಕ್ ಬಟ್ಟೆಗಳು. ಸರಿಯಿಲ್ಲದ ವಿದ್ಯುತ್ ಸ್ಟವ್‌ನಿಂದ ಶಾಕ್ ಹೊಡೆಯುತ್ತದೆ. ಅತಿಯಾದ ಗಾಳಿಯ ಒತ್ತಡದಿಂದ ಗ್ಯಾಸ್ ಸ್ಟವ್ ಸಿಡಿಯಬಹುದು. ಸೂಕ್ತವಾದ ಗಾಳಿ, ಬೆಳಕು ಇಲ್ಲದ ಸ್ಥಳದಲ್ಲಿ ಸಿಲಿಂಡರನ್ನು ಬಳಸುವುದರಿಂದ ಸಿಲಿಂಡರಿನಿಂದ ಅನಿಲವು ಹೊರಬರುತ್ತಿದ್ದರೆ, ಅಂತಹ ಸಂದರ್ಭದಲ್ಲಿ ಬೆಂಕಿ ತಾಕಿದರೆ ಆಸ್ಫೋಟಗೊಂಡು, ಮೈ ಕೈ ಸುಟ್ಟುಹೋಗುತ್ತದೆ. ನೈಲಾನ್

ಪಾಲಿಸ್ಟರ್‌ನಂತಹ ಬಟ್ಟೆಗಳನ್ನು ತೊಟ್ಟುಕೊಂಡು ಅಡುಗೆ ಮಾಡುವಾಗ. ಆಕಸ್ಮಿಕವಾಗಿ ಬೆಂಕಿಯು ಒಂದು ಕಿಡಿ ಬಟ್ಟೆಗೆ ತಗಲಿದರೂ ಸಾಕು, ತಮಗರಿವಿಲ್ಲದೆಯೇ ಕ್ಷಣದಲ್ಲಿ ಬೆಂಕಿ ದೇಹವನ್ನೆಲ್ಲಾ ಆವರಿಸಿ ಮೈ ಸುಡುತ್ತದೆ. ಇಂಥ ಅಪಘಾತಗಳಿಂದ ಪಾರಾಗಬೇಕಾದರೆ, ಸೂಕ್ತ ತಿಳಿವಳಿಕೆ ಹಾಗೂ ಮುಂಜಾಗ್ರತೆ ಅತಿ ಮುಖ್ಯ. ಗ್ಯಾಸ್ ಸ್ಟವ್, ಸಿಲಿಂಡರ್ ಸ್ಟವ್, ವಿದ್ಯುತ್ ಸ್ಟವ್‌ಗಳನ್ನು ಉಪಯೋಗಿಸುವಾಗ, ಸರಿಯಾಗಿದೆಯೇ ಎಂದು ಪರೀಕ್ಷಿಸಬೇಕು. ಅನುಮಾನ ಬಂದಾಗ, ತಜ್ಞರಿಂದ ಪರೀಕ್ಷೆಗೆ ಒಳಪಡಿಸಿ ಸರಿಯಾಗಿದೆಯೆ ಇಲ್ಲವೆ ಎಂಬುದನ್ನು ಖಚಿತಪಡಿಸಿಕೊಂಡು ಉಪಯೋಗಿಸಿದರೆ ಆಗುವ ಅನಾಹುತವನ್ನು ತಡೆಗಟ್ಟಲು ಸಾಧ್ಯ. ಅಲ್ಲದೆ ಕುದಿಯುವ ನೀರು, ಕಾದ ಎಣ್ಣೆ, ತರಕಾರಿ ಹೆಚ್ಚುವ ಚಾಕು, ಕಾಯಿ ತುರಿಯುವ ತುರೆಮಣೆ, ಇತ್ಯಾದಿಗಳಿಂದ ದಿನನಿತ್ಯ ಒಂದಲ್ಲ ಒಂದು ರೀತಿ ಯಲ್ಲಿ ಅಪಘಾತ ಉಂಟಾಗುತ್ತಲೇ ಇರುವುದರಿಂದ ಅವುಗಳನ್ನು ಉಪಯೋಗಿಸುವಾಗ ಆದಷ್ಟು ಎಚ್ಚರಿಕೆಯಿಂದ ಇರುವುದು ಆರೋಗ್ಯಕರ ಲಕ್ಷಣ.

ಮನೆಯಲ್ಲಿ ಮಕ್ಕಳಿಗೆ ಸಂಭವಿಸುವ ಅಪ ಘಾತಗಳ ಪಟ್ಟಿ ಮಾಡುತ್ತಾ ಹೋದರೆ, ಅದು ಬೆಳೆಯುತ್ತಲೇ ಹೋಗುತ್ತದೆ. ಮೂಲತಃ ಮಕ್ಕಳು ಅನುಕರಣಶೀಲರು. ಹಿರಿಯರು ಮಾಡುವ ಪ್ರತಿಯೊಂದು ಕೆಲಸವನ್ನು ಅನುಕರಣೆ ಮಾಡಲು ಹೋಗುತ್ತಾರೆ. ಯಾವುದನ್ನು ಮಾಡಬೇಕು, ಯಾವುದನ್ನು ಬಿಡಬೇಕು ಎಂಬುದರ ಬಗ್ಗೆ ತಿಳಿವಳಿಕೆ ಇಲ್ಲದೆ ಇರುವುದರಿಂದ ಅನೇಕ ತೊಂದರೆಗಳಿಗೆ ತುತ್ತಾಗುತ್ತಾರೆ. ಕೆಲವು ವೇಳೆ ಹಿರಿಯರು ಆಡುವ ಮಾತನ್ನು ಕೇಳಿ ಅದರಂತೆ ಪ್ರಾಯೋಗಿಕ ವಾಗಿ ಮಾಡಲು ಹೋಗಿ ಪ್ರಾಣ ಕಳೆದುಕೊಂಡ ಅನೇಕ ನಿದರ್ಶನಗಳು ದೊರೆಯುತ್ತವೆ.

ಒಂದು ಪುಟ್ಟ ಸಂಸಾರ. ಗಂಡ ಹೆಂಡತಿ ಇಬ್ಬರು ಪುಟ್ಟ ಮಕ್ಕಳು- ಒಂದು ಗಂಡು, ಒಂದು ಹೆಣ್ಣು, ಸಂತೋಷದಲ್ಲಿ ಮೈಮರೆತಿದ್ದ ಅವರ ಸಂಸಾರದಲ್ಲಿ ಒಮ್ಮೆ ಬಿರುಗಾಳಿ ಬೀಸಿತು. ಪುಟ್ಟ ಮಕ್ಕಳ ತಾಯಿ ನೆರೆಯಾಕೆಯೊಂದಿಗೆ ಆಕ ಸ್ಮಿಕವಾಗಿ ದೂರದ ಸಂಬಂಧಿಕರೊಬ್ಬರ ಹೊಟ್ಟೆ ಆಪರೇಷನ್ ಮಾಡಿಸಿದ ಬಗ್ಗೆ, ವೈದ್ಯರು ಹೇಗೆ ಆಪರೇಷನ್ ಮಾಡುತ್ತಾರೆ ಎಂಬುದನ್ನು ಕುತೂ ಹಲ ಕೆರಳುವಂತೆ ವರ್ಣಿಸುತ್ತಿದ್ದಾಗ ಹುಡುಗ ಅಲ್ಲಿಯೇ ಇದ್ದು ಅವರಾಡುವ ಮಾತನ್ನು ಆಲಿಸಿ ತನ್ನ ಪುಟ್ಟ ಸಂಗಾತಿಯೊಂದಿಗೆ ನಾವಿಬ್ಬರೂ ಡಾಕ್ಟರ್, ರೋಗಿಯ ಆಟವಾಡೋಣ ಎಂದು ಹೇಳಿ ಮನೆಯಲ್ಲಿದ್ದ ಚಾಕುವನ್ನು ತಾಯಿಯ ಕಣ್ಣು ತಪ್ಪಿಸಿ ತೆಗೆದುಕೊಂಡು ತಂಗಿಗೆ ಹೊಟ್ಟೆಯ ಆಪರೇಶನ್ ಮಾಡಿಬಿಟ್ಟ. ಅತಿ ಯಾದ ರಕ್ತಸ್ರಾವ ಹಾಗೂ ನೋವಿನಿಂದ ಕಿಟ್ಟನೆ ಕಿರುಚಿ ಮಗಳು ವಿಲವಿಲನೆ ಒದ್ದಾ ಡುವುದನ್ನು ನೋಡಿದ ತಾಯಿ ದುಃಖದಿಂದ ಆಸ್ಪತ್ರೆಗೆ ತೆಗೆದುಕೊಂಡು ಹೋಗುವಷ್ಟರಲ್ಲಿಯೇ ಹುಡುಗಿಯ ಪ್ರಾಣ ಹಾರಿ ಹೋಗಿತ್ತು. ಹುಡುಗ ತನ್ನನ್ನಿನ್ನು ಹೊಡೆಯುತ್ತಾರೆ ಎಂಬ ಭಯದಿಂದ ಬೀದಿಯಲ್ಲಿ ಓಡಿ ಹೋಗುವಾಗ ಎಡವಿ ಚರಂಡಿಗೆ ಬಿದ್ದು ಕೊಳಚೆ ನೀರಿನಲ್ಲಿ ಕೊಚ್ಚಿಕೊಂಡು ಹೋಗಿ ಅಸು ನೀಗಿದ. ಮನೆ ಯಲ್ಲಿ ಹಿರಿಯರು ಮಕ್ಕಳ ಮುಂದೆ ಮಾತ ನಾಡುವಾಗ ಯೋಚಿಸಿ ಮಾತನಾಡಿದರೆ ಮುಂದೆ ಒದಗಬಹುದಾದ ದುಷ್ಪರಿಣಾಮಗಳನ್ನು ತಡೆ ಗಟ್ಟಬಹುದು.

ತಂದೆ ಶೇವಿಂಗ್ ಮಾಡಿಕೊಳ್ಳುವುದನ್ನು ನೋಡಿದ ಪುಟ್ಟ ಹುಡುಗ ತಾನೂ ತಂದೆಯಂತೆ ಏಕೆ ಶೇವಿಂಗ್ ಮಾಡಿಕೊಳ್ಳಬಾರದೆಂದು ಭಾವಿಸಿ ಕೈಗೆ ರೇಜರ್ ಸಿಕ್ಕಾಗ ಮಾಡಿಕೊಳ್ಳಲು ಹೋಗಿ ಮುಖದ ತುಂಬ ಗಾಯ ಮಾಡಿಕೊಳ್ಳುವುದು, ತಾಯಿ ಆಗಿಂದಾಗ್ಗೆ ಕಿವಿಯಲ್ಲಿ ಕಡ್ಡಿ ಹಾಕಿ ಗುಗ್ಗೆ ತೆಗೆಯುವುದನ್ನು ನೋಡಿ ತಾನು ಕಡ್ಡಿ ಹಾಕಿ ಗುಗ್ಗೆ ತೆಗೆಯಲು ಹೋಗಿ ಗಾಯ ಮಾಡಿಕೊಳ್ಳು ವುದು, ತರಕಾರಿ ಹೆಚ್ಚುವಾಗ ಮಧ್ಯದಲ್ಲಿ ಈಳಿಗೆಯನ್ನು ಹಾಗೇ ಬಿಟ್ಟು ಅಡುಗೆ ಕೆಲಸ ಮಾಡಲು ಹೋದಾಗ, ಜೊತೆಯಲ್ಲಿದ್ದ ಮಗು ತರಕಾರಿ ಹೆಚ್ಚಲು ಹೋಗಿ ಬೆರಳು ಕೊಯ್ದು ಕೊಂಡು ನರಳುವುದು, ಮನೆಯಲ್ಲಿ ಸೈಕಲ್ ಇದ್ದರೆ ಅದರ ಮೇಲೆ ಹತ್ತಲು ಹೋಗಿ ಸೈಕಲ್

ಸಮೇತ ಬೀಳುವುದು, ಸ್ವಿಚ್ ಹಾಕಲು ಯಾವುದಾದರೂ ವಸ್ತುವನ್ನು ಇಟ್ಟು ಅದರ ಮೇಲೆ ಹತ್ತಿ ಹಾಕಲು ಹೋದಾಗ ಆಯ ತಪ್ಪಿ ಬೀಳುವುದು, ಇತ್ಯಾದಿ ಅಪಘಾತಗಳು ಪ್ರತಿ ನಿತ್ಯ ಮಕ್ಕಳಿರುವ ಮನೆಗಳಲ್ಲಿ ನಡೆಯುತ್ತಲೇ ಇರುತ್ತವೆ.

ಹಾಲುಗಲ್ಲದ ಮಕ್ಕಳಿರುವ ಮನೆಗಳಲ್ಲಿ ಎಷ್ಟು ಎಚ್ಚರಿಕೆಯಿಂದ ಇದ್ದರೂ ಕಡಿಮೆಯೆ. ಕೈಗೆ ಸಿಕ್ಕ ಗೋಲಿಯನ್ನೋ ಗಜ್ಜುಗವನ್ನೋ ಬಾಯಲ್ಲಿಟ್ಟುಕೊಂಡು, ಅದು ಗಂಟಲಿನ ಲ್ಲಿಯೇ ಸಿಕ್ಕಿಕೊಳ್ಳುವ ಸಂಭವವೂ ಉಂಟು. ಬಳಪವನ್ನು ಮೂಗಿನ ಹೊಳ್ಳೆಗೆ ಇಟ್ಟುಕೊಳ್ಳು ವುದು, ಸೀಮೆ ಸುಣ್ಣವನ್ನು ತಿನ್ನುವುದು, ಬಳೆ ಚೂರು, ಗುಂಡುಸೂಜಿ ಇವುಗಳನ್ನು ಬಾಯಲ್ಲಿಟ್ಟುಕೊಳ್ಳುವುದರಿಂದ ಅನೇಕ ರೀತಿಯ ತೊಂದರೆಗಳಿಗೆ ಒಳಗಾಗುತ್ತವೆ. ಅವು ಅವರ ಕೈಗೆಟುಕದಂತಿರಬೇಕು. ಮಕ್ಕಳಿಗೆ ತಿನ್ನಲು ಗೋದಿ ಹಿಟ್ಟು, ಚೂಯಿಂಗ್‌ಗಮ್ ಕೊಡಬಾರದು. ಅದನ್ನು ಮೆಲ್ಲುವಾಗ ಗಂಟಲಿ ನಲ್ಲಿ ಸಿಕ್ಕಿ ಹಾಕಿಕೊಂಡರೆ ಉಸಿರು ಕಟ್ಟಿಕೊಳ್ಳ ಬಹುದು. ಇದರಿಂದ ಎಷ್ಟೋ ಮಕ್ಕಳು ಪ್ರಾಣ ವನ್ನು ಕಳೆದುಕೊಂಡ ಬಗ್ಗೆ ಕೇಳಿದ್ದೇವೆ. ಮಕ್ಕಳ ಚಲನವಲನದ ಬಗ್ಗೆ ಸದಾ ನಿಗಾ ಇಟ್ಟಿರುವುದು ಒಳ್ಳೆಯದು. ಏಕೆಂದರೆ, ಮಕ್ಕಳು ಮನೆಯಲ್ಲಿರುವ ನೀರಿನ ತೊಟ್ಟಿಯನ್ನು ನೋಡಲು ಅಥವಾ ಆಟವಾಡಲು ಹೋಗಿ ಬೀಳ ಬಹುದು. ನೀರು ತುಂಬಿದ ಬಕೆಟ್ಟಿನಲ್ಲಿ ಆಟ ಆಡುವಾಗ ಮುಳುಗಿ ಉಸಿರು ಕಟ್ಟಿ ಸಾಯ ಬಹುದು. ಮನೆಯ ಅಂಗಳದಲ್ಲಿರುವ ಬಾವಿ ಯನ್ನು ಬಗ್ಗಿ ನೋಡಲು ಹೋಗಿ ಮುಗ್ಗರಿಸ ಬಹುದು.

ಹಳ್ಳಿಗಳಲ್ಲಿ ವಾಸಮಾಡುವ ಮನೆ ಹಾಗೂ ದನದ ಕೊಟ್ಟಿಗೆ ಒಂದೇ ಕಡೆ ಇರುವುದರಿಂದ ಮಗು ಗೊತ್ತಿಲ್ಲದೆ ದನಗಳ ಮಧ್ಯೆ ಹೋಗಿ ಸಿಕ್ಕಿ ಹಾಕಿಕೊಳ್ಳುವ ಸಾಧ್ಯತೆ ಇದೆ. ಎಷ್ಟೋ ವೇಳೆ ಹಿರಿಯರು ದನಕರುಗಳಿಗೆ ಹುಲ್ಲನ್ನು ಹಾಕುವು ದನ್ನು ನೋಡಿ ಅದರಂತೆ ಹಾಕಲು ಹೋಗಿ ಕೊಂಬುಗಳಿಂದ ತಿವಿಸಿಕೊಂಡು ಕರುಳು ಹೊರ ಬಂದ ಬಗ್ಗೆ, ಒದೆಯಿಸಿಕೊಂಡು ಕೈ ಕಾಲು ಮುರಿದುಕೊಂಡ ಬಗ್ಗೆ ಕೇಳಿದ್ದೇವೆ. ದನಕರುಗಳ ತುಳಿತಕ್ಕೆ ಸಿಕ್ಕಿ ಎಷ್ಟೋ ಮಕ್ಕಳು ಅಂಗವಿಕಲ ರಾಗಿದ್ದಾರೆ, ಪ್ರಾಣವನ್ನೂ ಕಳೆದುಕೊಂಡಿದ್ದಾರೆ.

ಮಗುವನ್ನು ಅತಿಯಾಗಿ ಮುದ್ದಿಸುವ, ಆಡಿಸುವಾಗ, ಮಗುವಿಗೆ ಸಂತೋಷವನ್ನುಂಟು ಮಾಡಬೇಕೆಂಬ ಉದ್ದೇಶದಿಂದ ಅತಿಯಾಗಿ ಕಚಗುಳಿ ಇಡುವುದು, ಮೇಲಕ್ಕೆ ಹಾರಿಸಿ ಆತುಗೊಳ್ಳುವುದು ತುಂಬಾ ಅಪಾಯಕಾರಿ. ಏಕೆಂದರೆ, ಮಗುವನ್ನು ಮೇಲಕ್ಕೆ ಹಾರಿಸಿ ಆತುಗೊಳ್ಳುವಾಗ ಕೈ ತಪ್ಪಿ ಬಿದ್ದು ತಲೆ ಒಡೆಯ ಬಹುದು, ಜ್ಞಾನ ತಪ್ಪಬಹುದು, ಕೈ ಕಾಲು ಮುರಿಯಬಹುದು. ಆದ್ದರಿಂದ ಸಂತೋಷದಲ್ಲಿ ಮೈ ಮರೆಯದೇ ಮಕ್ಕಳನ್ನು ಆಡಿಸುವಾಗ ಜಾಗರೂಕತೆಯಿಂದ ಇರುವುದು ಕ್ಷೇಮ.

ಬಹುತೇಕ ಕುಟುಂಬಗಳಲ್ಲಿ ಆಡುವ ಮಕ್ಕಳಿಂದ ಅವರ ವಯಸ್ಸಿಗೆ ಮೀರಿದ ಕೆಲಸಗಳನ್ನು ಮಾಡಿ ಸುತ್ತಾರೆ. ಇಂಥ ಪ್ರಸಂಗಗಳಲ್ಲಿ ಕೂಡ ಅಪಘಾತಗಳು ಉಂಟಾಗುತ್ತವೆ. ಆದ್ದರಿಂದ ಹಿರಿಯರು ಮುಂದಾಗಬಹುದಾದ ಅಪಘಾತ ಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸೂಕ್ತ ತಿಳಿವಳಿಕೆ ನೀಡಿ ಕೆಲಸದಲ್ಲಿ ತೊಡಗಿಸಬೇಕು. ಚಿಕ್ಕ ಮಕ್ಕಳ ಕೈಗೆ ಕೈಗೂಸನ್ನು ನೋಡಿ ಕೊಳ್ಳಲು ಹೇಳುವುದು ತುಂಬಾ ಅಪಾಯಕಾರಿ.

ಅಡುಗೆ ಮನೆಯಲ್ಲಿ ತಾಯಿಯ ಜೊತೆಯಲ್ಲಿ ರುವಾಗಲೇ ಅನೇಕ ಅಪಘಾತಗಳಿಗೆ ಮಕ್ಕಳು ತುತ್ತಾಗುತ್ತಾರೆ. ಕುದಿಯುವ ನೀರಿಗೆ, ಕಾದ ಎಣ್ಣೆಗೆ ಕೈ ಇಡುವುದು, ಬಿಸಿ ಪದಾರ್ಥಗಳನ್ನು ತಿನ್ನಲು ಹೋಗುವುದು, ಈಳಿಗೆ ಮಣೆಯನ್ನು ಮೈ ಮೇಲೆ ಬೀಳಿಸಿಕೊಳ್ಳುವುದು, ಪಾತ್ರೆಗಳನ್ನು ಕೆಡವುದು, ಬೆಂಕಿಯಲ್ಲಿ ಕೈ ಇಡುವುದು, ಇತ್ಯಾದಿಗಳಿಂದ ಮಕ್ಕಳು ತೊಂದರೆಗೆ ಒಳಗಾಗು ತ್ತಾರೆ.

ಅಡುಗೆ ಮನೆಯನ್ನು ಚೊಕ್ಕಟವಾಗಿಡುವುದರ ಜೊತೆಗೆ ವಿಷ ಪದಾರ್ಥಗಳು ಮಕ್ಕಳ ಕೈಗೆ ಸಿಗದಂತೆ ಎಚ್ಚರ ವಹಿಸಬೇಕು. ಎಲ್ಲೆಂದರಲ್ಲಿ ಮಾತ್ರೆಗಳನ್ನು, ಕ್ರಿಮಿನಾಶಕ ಔಷಧಿಗಳನ್ನು ಇಡಬಾರದು. ಕೆಲವು ಸಿಹಿಯಾದ ಮಾತ್ರೆಗಳು,

ಕೆಮ್ಮಿಗೆ ಸಂಬಂಧಿಸಿದ ಔಷಧಿಗಳು ರುಚಿಯಾಗಿರುವುದರಿಂದ ಅವು ಮಕ್ಕಳ ಕೈಗೆ ಸಿಕ್ಕಾಗ ತಿನ್ನುವ ಪದಾರ್ಥವೆಂದು ಭಾವಿಸಿ ತಿನ್ನುತ್ತಾರೆ. ಇದರಿಂದ ದೈಹಿಕ ಹಾಗೂ ಮಾನಸಿಕವಾಗಿ ದುಷ್ಪರಿಣಾಮ ಕಟ್ಟಿಟ್ಟ ಬುತ್ತಿ. ಮಕ್ಕಳನ್ನು ಹಡೆಯುವುದರ ಜೊತೆಗೆ ಅವರ ಯೋಗಕ್ಷೇಮದ ಕಡೆ ಗಮನ ಕೊಡಬೇಕು. ಹೆಜ್ಜೆ ಹೆಜ್ಜೆಗೂ ಕಣ್ಣಿಟ್ಟು ಗಮನಿಸುತ್ತಿರಬೇಕು. ಎಷ್ಟೋ ವೇಳೆ ತಂದೆ ತಾಯಿಗಳ ಬೇಜವಾಬ್ದಾರಿಯಿಂದ ಮಕ್ಕಳು ತಮ್ಮ ಜೀವನ ಪರ್ಯಂತ ನೋವನ್ನು ಅನುಭವಿಸಬೇಕಾಗುತ್ತದೆ. ಹಾಗೆ ಆಗದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ತಂದೆ ತಾಯಿಯ ಆದ್ಯ ಕರ್ತವ್ಯ.

ದೀಪಾವಳಿ ಮುಂತಾದ ಹಬ್ಬಗಳಲ್ಲಿ, ಜಾತ್ರೆ ಉತ್ಸವಗಳಲ್ಲಿ. ಮದುವೆ ಮುಂಜಿಗಳಲ್ಲಿ, ಸಮಾರಂಭಗಳಲ್ಲಿ ಸಂತೋಷಕ್ಕಾಗಿ ಪಟಾಕಿ ಸುಡುವುದು ನಮ್ಮಲ್ಲಿ ಬೆಳೆದುಬಂದಿದೆ. ಪಟಾಕಿ ಸುಡುವುದನ್ನು ನೋಡಲು ಆಕರ್ಷಕವಾಗಿ ಕಂಡು ಮನಸ್ಸನ್ನು ಮುದಗೊಳಿಸಿದರೂ, ಕೆಲವು ಸಂದರ್ಭಗಳಲ್ಲಿ ಅದರಿಂದ ತೊಂದರೆಗಳು ಸಂಭವಿಸುತ್ತವೆ. ಪಟಾಕಿಯ ಕಿಡಿಗಳು ಬಟ್ಟೆಯ ಮೇಲೆ ಬಿದ್ದು ಬಟ್ಟೆ ಹೊತ್ತಿಕೊಳ್ಳಬಹುದು. ಆಟಂಬಾಂಬ ಹಚ್ಚಲು ಹೋಗಿ ಕೈಗೆ ಪೆಟ್ಟಾಗಬಹುದು, ಕಣ್ಣು ಹೋಗಬಹುದು. ಮಕ್ಕಳಂತೂ ಹೆಚ್ಚು ಅಪಾಯಕ್ಕೆ ಗುರಿಯಾಗುತ್ತಾರೆ. ಆದ್ದರಿಂದ ಮಕ್ಕಳಿಗೆ ಪಟಾಕಿಗಳನ್ನು ತಂದು ಕೊಡುವಾಗ ಆದಷ್ಟು ಸೌಮ್ಯ ರೂಪದ ಪಟಾಕಿಗಳನ್ನು ತಂದು ಕೊಡುವುದು ಉತ್ತಮ. ಜೊತೆಗೆ ಪಟಾಕಿಯನ್ನು ಹಚ್ಚುವ ಬಗ್ಗೆ ಸೂಕ್ತ ತಿಳುವಳಿಕೆ ನೀಡುವುದು ಒಳ್ಳೆಯದು.

ಮಕ್ಕಳಷ್ಟೇ ಅಸಹಾಯಕರಾಗಿರುವ, ಬಾಳಿನ ವಸಂತವನ್ನು ಅನುಭವಿಸಿ ಜೀವನದ ಅಂತಿಮ ಘಟ್ಟವನ್ನು ತಲುಪಿರುವ ವಯೋವೃದ್ಧರು, ಮೇಲಿಂದ ಮೇಲೆ ಅಪಘಾತಗಳಿಗೆ ಈಡಾಗುತ್ತಾರೆ. ಬಾಗಿದ ಬೆನ್ನು, ದೃಷ್ಟಿದೋಷದಿಂದ ಪ್ರತಿ ಹಂತದಲ್ಲಿಯೂ, ವಯೋಧರ್ಮಕ್ಕನುಗುಣವಾಗಿ ಬೇರೆಯವರ ಸಹಾಯವನ್ನು ಬಯಸುತ್ತಾರೆ. ಅವರನ್ನು ಮಕ್ಕಳನ್ನು ನೋಡಿಕೊಳ್ಳುವಂತೆಯೇ ನೋಡಿಕೊಳ್ಳಬೇಕು. ಬಚ್ಚಲು ಮನೆಯಲ್ಲಿ, ಕಕ್ಕಸು ಮನೆಯಲ್ಲಿ ಮೋಸಾಯಿಕ್ ನೆಲದ ಮೇಲೆ ಓಡಾಡುವಾಗ ಜಾರಿ ಬಿದ್ದರೆ ಬಲವಾದ ಪೆಟ್ಟಾಗಬಹುದು. ತೊಡೆಯ ಮೂಳೆ ಕೈ ಮೂಳೆ ಮುರಿಯಬಹುದು. ದೈಹಿಕ ದೌರ್ಬಲ್ಯದಿಂದಾಗಿ ನರಳುತ್ತಿರುವವರಿಗೆ ಮೂಳೆ ಬೇಗ ಕಟ್ಟಿಕೊಳ್ಳುವುದಿಲ್ಲ. ಇದರಿಂದ ಕೊನೆವರೆಗೂ ತುಂಬಾ ನೋವನ್ನು ಅನುಭವಿಸಬೇಕಾಗುತ್ತದೆ.

ಅಪಘಾತಗಳು ಆಕಸ್ಮಿಕವಾದರೂ ನಿರೀಕ್ಷಿತವೆ. ಅವುಗಳು ಸಂಭವಿಸಲು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ವ್ಯಕ್ತಿಗಳೇ ಕಾರಣವಾಗುತ್ತಾರೆ. ವ್ಯಕ್ತಿಗಳಲ್ಲಿ ಮನೆ ಮಾಡಿಕೊಂಡಿರುವ ನಿರ್ಲಕ್ಷ್ಯ ಮನೋಭಾವ, ಬೇಜವಾಬ್ದಾರಿತನ, ಏನಾಗುತ್ತೋ ನೋಡಿಯೇ ಬಿಡೋಣ ಎನ್ನುವ ಹುಂಬತನ, ವಸ್ತುಗಳನ್ನು ಹೇಗೆ ಉಪಯೋಗಿಸಬೇಕು ಎಂಬುದರ ಬಗ್ಗೆ ತಿಳುವಳಿಕೆ ಇಲ್ಲದಿರುವದು, ಕೆಲಸದ ಒತ್ತಡ, ಸಹನೆಯನ್ನು ಕಳೆದುಕೊಂಡು ಕೆಲಸ ಮಾಡುವುದು, ಇತ್ಯಾದಿಗಳು ಕಾರಣವಾಗುತ್ತವೆ. ಅಪಘಾತಗಳು ಸಂಭವಿಸಿದ ನಂತರ ತೊಂದರೆ ಅನುಭವಿಸುವುದಕ್ಕಿಂತ ಅಪಘಾತಗಳೇ ಸಂಭವಿಸದಂತೆ ಮುಂಜಾಗ್ರತೆ ಕ್ರಮಗಳನ್ನು ಅನುಸರಿಸುವುದು ಒಳಿತಲ್ಲವೆ? ಅಪಘಾತಗಳ ಬಗ್ಗೆ ಸಂಘ ಸಂಸ್ಥೆಗಳು, ಸರ್ಕಾರ, ಜನರಿಗೆ ಸೂಕ್ತ ತಿಳುವಳಿಕೆ, ಮಾರ್ಗದರ್ಶನ ನೀಡುವ ಕಾರ್ಯಕ್ರಮಗಳ ಮೂಲಕ, ಸಿನಿಮಾ ಸ್ಲೈಡ್‌ಗಳ ಮೂಲಕ, ಸಾಕ್ಷ್ಯಚಿತ್ರಗಳ ಮೂಲಕ ಹಾಗೂ ಉಪನ್ಯಾಸಗಳ ಮೂಲಕ ಜನರಿಗೆ ಮನವರಿಕೆಯಾಗುವಂತೆ ಮಾಡಬೇಕು. ಹೀಗೆ ಮಾಡುವುದರಿಂದ ಅಪಘಾತಗಳನ್ನು ಸಂಪೂರ್ಣವಾಗಿ ತಡೆಗಟ್ಟಲು ಸಾಧ್ಯವಾಗದೇ ಹೋದರೂ ಹೆಚ್ಚಾಗದಂತೆ ತಡೆಗಟ್ಟಬಹುದು. ✡



ಟ್ರಿವಿಕ್ಕ

# ಶಿವಧನುಸ್ಸು

ಹನ್ನೆರಡನೇ ಶತಮಾನದ ಆದಿ ಭಾಗದಲ್ಲಿ ನಾಗಚಂದ್ರನೆಂಬ ಒಬ್ಬ ಕವಿ-ರಾಮಚಂದ್ರ ಚರಿತ ಪುರಾಣ ಮತ್ತು ಮಲ್ಲಿನಾಥ ಪುರಾಣ ಎಂಬ ಎರಡು ದೊಡ್ಡ ಕಾವ್ಯಗಳನ್ನು ಬರೆದಿದ್ದಾನೆ. ಇವನು ವಿಜಯಪುರವೆಂಬ ಊರಲ್ಲಿ ಮಲ್ಲಿನಾಥ ಜಿನಾಲಯವನ್ನು ಕಟ್ಟಿಸಿದನು. ಅವನು ಬರೆದ ಆ ಜಿನನ ಚರಿತ್ರೆಯೇ ಮಲ್ಲಿನಾಥ ಪುರಾಣ. ನಾಗಚಂದ್ರ, ಅಭಿನವ ಪಂಪ ಎಂಬ ಹೆಸರನ್ನಿಟ್ಟುಕೊಂಡಿದ್ದ. ಈತ ಬರೆದ ರಾಮಚಂದ್ರ ಚರಿತ ಪುರಾಣ ಪಂಪರಾಮಾಯಣವೆಂದು ಹೆಸರಾಗಿದೆ. ಇದು ಜೈನ ರಾಮಾಯಣ. ವಾಲ್ಮೀಕಿ ರಾಮಾಯಣಕ್ಕೂ ಇದಕ್ಕೂ ಹಲವು ಭೇದಗಳಿವೆ. ಪಂಪ ರಾಮಾಯಣದಲ್ಲಿ ದಶರಥನ ಪುತ್ರಕಾಮೇಷ್ಟಿ, ಮೊದಲಾದ ಯಜ್ಞಗಳ ಪ್ರಸ್ತಾಪವಾಗಲಿ, ವಿಶ್ವಾಮಿತ್ರ, ವಾಲ್ಮೀಕಿ, ವಸಿಷ್ಠ ಮೊದಲಾದ ಮುನಿಗಳ ಪ್ರಸ್ತಾಪವಾಗಲಿ ಇಲ್ಲ. ಇಲ್ಲಿನ ಹನುಮನು ವಿಮಾನದಲ್ಲಿ ಕುಳಿತು ಸಮುದ್ರ ದಾಟಿದನೇ ಹೊರತು ಹಾರಲಿಲ್ಲ.

ರಾವಣನನ್ನು ಕೊಲ್ಲುವವನು ಲಕ್ಷ್ಮಣ, ರಾಮನಲ್ಲ. ಈ ರಾಮಾಯಣದಲ್ಲಿ ವಾಲಿಯು ವೈರಾಗ್ಯದಿಂದ ಸಂನ್ಯಾಸಿಯಾಗಿರುವನು. ವಾಲಿಯು ರಾಮನಿಂದ ಹತನಾಗುವ ಪ್ರಸಂಗವೇ ಇಲ್ಲ. ಸುಗ್ರೀವನಿಗೆ ಹಿಂಸೆ ಕೊಟ್ಟವನು ಮಾಯಾ ಸುಗ್ರೀವನೇ ಹೊರತು ವಾಲಿಯಲ್ಲ. ಈ ಎಲ್ಲಾ ವ್ಯತ್ಯಾಸಗಳಿಗಿಂತಲೂ ಮುಖ್ಯವಾದದ್ದೆಂದರೆ, ರಾವಣನ ಪಾತ್ರರಚನೆ. ನಾಗಚಂದ್ರನ ರಾವಣನು ಬಹಳ ಯೋಗ್ಯನು. ಧರ್ಮಪರನು. ನಳಕೂಬರನ ರಾಜಧಾನಿಯಾದ ದುರ್ಲಂಘ್ಯಪುರವನ್ನು ರಾವಣನು ಮುತ್ತಿದಾಗ ರಾವಣನಲ್ಲಿ ಬಹಳ ಕಾಲದಿಂದ ಮೋಹಗೊಂಡಿದ್ದ ನಳಕೂಬರನ ಹೆಂಡತಿಯು ಧೂತಿಯಾಗಿ ಬರುವಳು. ರಾವಣನು ಪುರಪ್ರವೇಶಕ್ಕೆ ಅವಳಿಂದ ಅವಕಾಶವನ್ನು ಕಲ್ಪಿಸಿಕೊಂಡರೂ ಅವಳಲ್ಲಿ ಕಾಮ ಪರವಶನಾಗದೆ ಆಕೆಗೆ ಧರ್ಮೋಪದೇಶ ಮಾಡಿ ನಳಕೂಬರನೊಟ್ಟಿಗೆ ಸುಖವಾಗಿರು ಎಂದು ಹೇಳಿ ರಾಜ್ಯವನ್ನು ಹಿಂತಿರುಗಿ ಕೊಟ್ಟು ಬಿಡುತ್ತಾನೆ. ಇಂತಹ

ಜಿತೇಂದ್ರಿಯನಾದ ರಾವಣನು ಸೀತೆಯನ್ನು ಕಂಡು, ಅವಳ ರೂಪಕ್ಕೆ ಮರುಳಾಗಿ "ಪದ್ಮಪತ್ರದ ಜಲ ಬಿಂದುವಿನಂತೆ, ಚಲಿತವಾದುದು ಚಿತ್ತಂ" ದುರ್ಮೋಹಕ್ಕೆ ಸಿಕ್ಕ ರಾವಣನು ಸೀತೆಯನ್ನು ಅಪಹರಿಸಿ ಲಂಕೆಯಲ್ಲಿ ಸೆರೆ ಇಡುವನು. ಸೀತೆಯು ರಾವಣನಿಗೆ ಒಲಿಯಲಿಲ್ಲ. ಕೊನೆಗೆ ಸೀತೆಯನ್ನು ಹೆದರಿಸಿ ನೋಡಬೇಕೆಂದು ರಾವಣನು "ಇಗೋ, ಬಹುರೂಪಿಣಿ ವಿದ್ಯೆಯು ನನಗೆ ವಶವಾಯಿತು. ನನ್ನನ್ನು ಪ್ರತಿಭಟಿಸಬಲ್ಲ ಶತ್ರುಪಕ್ಷವಿಲ್ಲ. ನಿನ್ನ ನೆಚ್ಚಿನ ರಾಮನ ಯೋಚನೆ ಬಿಡು." ಇದನ್ನು ಕೇಳಿ ಭಯ ವಿಹ್ವಲಳಾದ ಸೀತೆ "ರಾಮನ ಪ್ರಾಣಾಪಹರಣ ಮಾತ್ರ ಮಾಡಬೇಡ" ಎಂದು ಪ್ರಾರ್ಥಿಸುತ್ತಾ ಮೂರ್ಛೆ ಬೀಳುವಳು. ಇದನ್ನು ನೋಡಿ ರಾವಣನು ತನ್ನ ಕ್ರೂರ ಕರ್ಮಕ್ಕೆ ಪಶ್ಚಾತ್ತಾಪ ಪಡುವನು. ಅವನಲ್ಲಿ ಸೀತೆಯ ವಿಷಯವಾಗಿ ದಯೆಯು ಅಂಕುರಿಸಿತು. ಆದರೆ ದುರ್ದೈವದಿಂದ ಮತ್ತೆ ಅವನ ದುರಭಿಮಾನವೇ ಪ್ರಬಲವಾಗಿ, ರಾಮನನ್ನು ಸೆರೆ ಹಿಡಿದು ತಂದು ಅವನಿಗೆ ಸೀತೆಯನ್ನೊಪ್ಪಿಸಬೇಕೇ ಹೊರತು– ಈಗಲೇ ಸೀತೆಯನ್ನು ಅವನ ಬಳಿ ಕಳುಹಿಸಬಾರದೆಂದು ನಿಶ್ಚಯಿಸಿದನು. ಆದರೆ ಈ ನಿಶ್ಚಯವನ್ನು ಸಾಧಿಸುವುದಕ್ಕಾಗದೇ ರಾವಣನು ಯುದ್ಧ ಭೂಮಿಯಲ್ಲಿ ಸಾಯುವನು. ಹೀಗೆ ನಾಗಚಂದ್ರನ ರಾವಣನು ದುರಂತ ನಾಯಕನಾಗಿದ್ದಾನೆ. ಅವನು ಸದ್ಗುಣಶಾಲಿ, ಜಿತೇಂದ್ರಿಯನು, ಪರಾಂಗನಾವಿರತವ್ರತವೆಂಬ ವ್ರತವನ್ನು ಬೇರೆ ಹಿಡಿದಿದ್ದನು. ಅನೇಕ ಯುದ್ಧಗಳನ್ನು ಮಾಡಿದರೂ ಕರುಣಾಶಾಲಿ. ಇಷ್ಟು ಗುಣಗಳಿದ್ದರೂ ಸೀತೆಯನ್ನು ನೋಡಿದ ಮಾತ್ರದಿಂದಲೇ ಕಾಮಪರವಶನಾಗಿ ಬಿಟ್ಟನು. ಇದು ದೈವ ಲೀಲೆಯೇ ಹೊರತು ಬೇರೆಯಲ್ಲ ಎಂದು ತೋರುವಂತೆ ಕವಿ ಬರೆದಿದ್ದಾನೆ. ಈ ದುರಂತ ರಾವಣನ ಚಿತ್ರವು ಪಂಪ ರಾಮಾಯಣಕ್ಕೆ ಒಂದು ಹೆಚ್ಚಿನ ಪ್ರಾಶಸ್ತ್ಯವನ್ನುಂಟು ಮಾಡಿದೆ.

ಬೆಲ್ ಆಯಿತು. ಕನ್ನಡ ಪಂಡಿತರು ಕ್ಲಾಸಿನಿಂದ ಹೊರಟರು. ನಂತರ ಡ್ರಾಯಿಂಗ್ ಕ್ಲಾಸು. ಆಗ ಶಾಲೆಯ ಇನ್ಸ್ಪೆಕ್ಟರರು ಬಂದು ಒಂದು ಪ್ರಶ್ನೆ ಕೇಳಿದರು. ಆ "ಶಿವ ಧನುಸ್ಸು ಮುರಿದವರಾರು?"



ಹುಡುಗರ ಮಾಮೂಲುತ್ತರ "ನಾವಲ್ಲಾ ಸಾರ್."

ಸ್ಕೂಲು ಇನ್‌ಸ್ಪೆಕ್ಟರರು:- "ಏನು ಮೇಷ್ಟ್ರೆ ಇದು? Head ಮಾಸ್ತರರನ್ನ ಕರೀರಿ."

"ಸಾರ್ ನಾನೇ Incharge ಹೆಡ್ ಮಾಸ್ಟರರು. ಯಾರು ಮುರಿದರೋ ಏನೋ ಇರಲಿ ಬಿಡಿ ಸಾರ್. ಇಲ್ಲೇ ಎಲ್ಲೋ ಇರ್ತದೆ ಮುರಿದದ್ದು" ಅಂದ್ರು ಡ್ರಾಯಿಂಗ್ ಮೇಷ್ಟ್ರು. ಸ್ಕೂಲ್ ಇನ್‌ಸ್ಪೆಕ್ಟರ್ ಹೋದವರೇ ಕೋಪದಿಂದ ರಿಪೋರ್ಟ್ ಕಳುಹಿಸಿದರು. ವಿದ್ಯಾ ಇಲಾಖೆಯಿಂದ ಹತ್ತನೆಯ ದಿನ ಉತ್ತರ ಬಂತು.

"ಆ ಶಾಲೆಯ ಹೆಡ್ ಮಾಸ್ತರರಿಗೆ, Recover the cost of ಶಿವಧನಸ್ from the concerned head master. Deduct it from his pay.'' ಇದು ಮೂವತ್ತು ವರ್ಷಗಳ ಕೆಳಗೆ ನಡೆದ ಘಟನೆ. ಈ ವಿಚಾರವನ್ನು ನಾನು ಒಬ್ಬ ಕನ್ನಡ ಎಂ. ಎ. ಗೆ ಹೇಳಿದೆ. ಅವನು "ನೋಡಿ ಸಾರ್ ಶಿವ ಧನುಸ್ಸು ಅದೇ ಆ ಮಹಾಭಾರತದಲ್ಲಿ... "ಮಹಾಭಾರತದಲ್ಲಿ ಎಲ್ಲಿ? ಎಂದೆ.

"ನಿಮಗೇನ್ರೀ ಗೊತ್ತು ಕನ್ನಡ ಸಾಹಿತ್ಯದ ಬಗ್ಗೆ? ಆ ಮಹಾವೀರ ಅರ್ಜುನ ಬಾಣ ಬಿಟ್ಟ ನೋಡಿ,-ಅದೇ ಮೀನು."

"ಈ ಮೀನಿನ ಛಾಯೆಯನ್ನು ಎಣ್ಣೆಯಲ್ಲಿ ಕಂಡು ಮೀನಿಗೆ ಬಾಣ ಬಿಟ್ಟ..." ಅಂದೆ.

"ಆಗ ಮುರಿತಲ್ಲಾ ಸಾರ್. ಅದೇ ಶಿವ ಧನುಸ್ಸು. ✡



ಅರಬ್ಬನೊಬ್ಬ ಮರಳುಗಾಡಿನಲ್ಲಿ ದಾರಿ ತಪ್ಪಿದ. ಹೆದರಿಕೆ ಗೊಂದಲ ಆತಂಕಗಳಿಂದಾಗಿ ಆತ ಉಸಿರಾಟಕ್ಕಾಗಿ ಚಡಪಡಿಸಲಾರಂಭಿಸಿದ. ಕುಡಿಯಲು ಎಲ್ಲೂ ನೀರಿನ ಆಸರೆ ಕಾಣುತ್ತಿರಲಿಲ್ಲ. ಚಿಂತಾಕ್ರಾಂತನಾದ ಆತ ತನ್ನ ಸುತ್ತೆಲ್ಲ ಹುಚ್ಚಿದ್ದವನಂತೆ ದೃಷ್ಟಿ ಹರಿಸಲಾರಂಭಿಸಿದ.

ಆತನ ತುಟಿ, ಬಾಯಿ, ಗಂಟಲು ಒಣಗಿ ಹೋಗಿದ್ದವು. ಆತ ತನ್ನ ಬುದ್ಧಿ ಸ್ಥಿಮಿತವನ್ನೂ ಪ್ರಜ್ಞೆಯನ್ನೂ ಕಳೆದುಕೊಳ್ಳುತ್ತಿರುವಂತೆ ಭಾಸವಾಗುತ್ತಿತ್ತು. ಸಾವು ಆತನನ್ನು ಸಮೀಪಿಸುತ್ತಿತ್ತು.

ಅಗ ಆತನಿಗೆ ಒಂದು ವಸತಿ ಪ್ರದೇಶ ಕಾಣಿಸಿತು. ಆತ ಆ ವಸತಿ ಪ್ರದೇಶವನ್ನು ಸಮೀಪಿಸಿ ಅಲ್ಲಿ ಜನರಿಗಾಗಿ ಹುಡುಕಾಡಲಾರಂಭಿಸಿದ. ಆದರೆ ಯಾರೂ ಅಲ್ಲಿ ಕಾಣಸಿಗಲಿಲ್ಲ, ಬಹುಶಃ ಆಹಾರ ಪದಾರ್ಥಗಳನ್ನು ಅಲ್ಲಿ ಯಾರಾದರೂ ಬಿಟ್ಟು ಹೋಗಿರಬಹುದೇನೋ ಎಂದು ಆಸೆಯಿಂದ ಆತ ತಡಕಾಡಲಾರಂಭಿಸಿದ. ಆಗ ಆತನಿಗೆ ಸಣ್ಣ ಚೀಲವೊಂದು ಕಾಣಸಿಕ್ಕಿತು, ನಡುಗುವ ಕೈಗಳಿಂದ ಆ ಚೀಲವನ್ನು ಬಿಚ್ಚಿ, ''ಖರ್ಜೂರಗಳಿರಬಹುದೇನೋ'' ಎಂದಾತ ತಂತಾನೇ ಪ್ರಶ್ನಿಸಿಕೊಳ್ಳುತ್ತಾ ನಂತರ, ''ಅಯ್ಯೋ ಗ್ರಹಚಾರವೇ, ಅಯ್ಯೋ ದೇವರೆ? ಮುತ್ತು ಹವಳ ವಜ್ರ ವೈಢೂರ್ಯಗಳಿರುವ ಚೀಲ ಇದು!" ಎಂದು ಆ ಚೀಲವನ್ನು ಅಲ್ಲೇ ಬಿಸಾಕಿ, ತನ್ನ ಅದೃಷ್ಟವನ್ನು ಬಹುವಾಗಿ ಹಳಿದುಕೊಳ್ಳುತ್ತಾ ನೆಲದ ಮೇಲೆ ಬಿದ್ದುಕೊಂಡ.

ಸಂಗ್ರಹ : ಎಸ್. ವಿಶ್ವನಾಥ

# 'ಹಿಂದೂ' ಶಬ್ದ ಹೇಗೆ ಬಂತು?

ಚಿಂತಕ

ಇತ್ತೀಚೆಗೆ ಕಲ್ಕತ್ತ ಹೈಕೋರ್ಟು ಶ್ರೀರಾಮ ಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಹಾಗೂ ಅವರು ಸ್ಥಾಪಿಸಿರುವ ರಾಮಕೃಷ್ಣ ಮಿಶನ್ "ಹಿಂದೂ ಅಲ್ಲ"ವೆಂದು ತೀರ್ಪು ನೀಡಿದೆ. ಸನಾತನ ಧರ್ಮದ ಅತ್ಯುಚ್ಚ ಪ್ರತಿ ಪಾದಕರಾದ ಆ ಗುರು– ಶಿಷ್ಯರು ಹಾಗೂ ಅವ ರಿಂದಲೇ ಸ್ಥಾಪಿತವಾದ ಹಿಂದೂ ಧರ್ಮದ ಸಂಘಟಕ ಹಾಗೂ ಪ್ರಚಾರಕ ಸಂಸ್ಥೆ ರಾಮಕೃಷ್ಣ ಮಿಶನ್ ಹಿಂದೂ ಅಲ್ಲವೆಂದು ಹೇಳಿದ ತೀರ್ಪು ಇಂದು ದೇಶದಾದ್ಯಂತ ವಾದ–ವಿವಾದಗಳಿಗೆ ಎಡೆ ಮಾಡಿ ಕೊಟ್ಟಿದೆ. ಕೆಲವೊಂದು ಪತ್ರಿಕೆಗಳಲ್ಲಿ ಈ ಬಗ್ಗೆ ಪ್ರಕಟವಾದ ವಿಷಯವನ್ನು ಅವಲೋಕಿಸಿ- ದಾಗ ಅಲ್ಲಿ ಸಾಮಾಜಿಕ ಹಿತ ಮರೆಯಾಗಿ ವೈಯ ಕ್ತಿಕ ಹಿತ ಪ್ರಧಾನವಾಗುತ್ತಿರುವ ಅಂಶ ಗಮನಕ್ಕೆ ಬಾರದೇ ಇರದು. ಈಗ ಎಲ್ಲಕ್ಕಿಂತಲೂ ಮುಖ್ಯ ವಾಗಿ ಬೇಕಾಗಿರುವುದು ಹಿಂದೂ ಶಬ್ದದ ಹಾಗೂ ಹಿಂದೂ ಧರ್ಮದ ವೈಶಾಲ್ಯದ ನಿಜ ಅರಿವು.

"ಹಿಂದೂ" ಎಂಬ ಶಬ್ದ ಪುರಾತನ ಸಾಹಿತ್ಯ ದಲ್ಲಿ ಎಲ್ಲಿಯೂ ಕಾಣ ಸಿಗುವುದಿಲ್ಲ. ಎಂಟನೆಯ ಶತಮಾನದ ಒಂದು ತಂತ್ರ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥದಲ್ಲಿ ಹಿಂದೂ ಎಂಬ ಶಬ್ದವಿದ್ದು, ಅದು ತುಂಬ ಸಂಕುಚಿತ ಅರ್ಥದಲ್ಲಿ ಬಳಕೆಯಾಗಿದೆ. ಅಂದರೆ ಅಲ್ಲಿ ಅದು ಒಂದು ಬುಡಕಟ್ಟಿನ ಜನರನ್ನು ಗುರುತಿಸುವ ಶಬ್ದವಾಗಿದೆ. ಆದರೆ 'ಅವೆಸ್ತ' ಹಾಗೂ 'ಪಾರ್ಸಿ' ಸಾಹಿತ್ಯದಲ್ಲಿ ಈ ಶಬ್ದದ ಪ್ರಸ್ತಾಪವಿದ್ದುದರಿಂದ ಇದಕ್ಕೆ ಬಹು ಹಳೆಗಾಲದ ಇತಿಹಾಸವಿರಬೇಕೆಂಬ ಸೊಲ್ಲು ಕೆಲವೆಡೆಕೇಳಿ ಬಂದಿದೆ. ಪಶ್ಚಿಮ ಮತ್ತು ಮಧ್ಯ ಏಶಿಯದ ಜನರು ಆಗ ಸಿಂಧೂ ನದಿಯ ಈಚೆ ವಾಸ ಮಾಡುವ ಜನರನ್ನು 'ಇಂಡಿಯಾ' ಎಂಬ ಶಬ್ದಕ್ಕೆ ಪ್ರತಿಯಾಗಿ 'ಹಿಂದೂ' ಎಂದೇ ಕರೆಯು ತ್ತಿದ್ದರು. ಪ್ರಾಚೀನ ಭಾರತವನ್ನು ಕೆಲವೆಡೆ 'ಸಿಂಧೂ' ಎಂದೂ ಕರೆಯಲಾಗಿದೆ. ಈ ಶಬ್ದ ಸಿಂಧೂ (ಇಂಡಸ್) ನದಿಯಿಂದ ಬಂದಿದ್ದು, 'ಸಿಂಧೂ' ಶಬ್ದದ ವಿಕೃತ ರೂಪವೇ 'ಹಿಂದೂ' ಶಬ್ದ ಎನ್ನುತ್ತಾರೆ ಇತಿಹಾಸಕಾರರು. ಸಿಂಧೂ ಶಬ್ದದಿಂದಲೇ ಹಿಂದೂ, ಹಿಂದುಸ್ತಾನ್, ಇಂಡಸ್, ಇಂಡಿಯಾ ಪದಗಳು ಹುಟ್ಟಿದವು ಎನ್ನಲಾಗಿದೆ. ಏಳನೆಯ ಶತಮಾನದಲ್ಲಿ ಭಾರತಕ್ಕೆ ಬಂದ ಚೀನದ ಯಾತ್ರಿಕ ಇತ್ಸಿಂಗ್‌ನು ಮಧ್ಯ ಏಶಿಯದ ಜನ ಈ ದೇಶವನ್ನು 'ಸಿನ್–ಟು' (ಹಿಂದೂ) ಎಂದು ಕರೆಯುತ್ತಾರೆ ಎಂದು ಹೇಳಿದ್ದಾನೆ. ಆದರೆ ಇತ್ಸಿಂಗ್ ಈ ಶಬ್ದವನ್ನು ಅಲ್ಲಗಳೆದು ಭಾರತಕ್ಕೆ ತಕ್ಕ ಹೆಸರೆಂದರೆ "ಆರ್ಯ ದೇಶ" ಎಂದು ಹೇಳಿದ್ದಾನೆ.

"ಹಿಂದೂ" ಶಬ್ದ ೧೬೬೨ ರಲ್ಲಿ ಬಂದಿತೆಂದು ಹೇಳುತ್ತದೆ "ಆಕ್ಸಫರ್ಡ್ ಇಂಗ್ಲೀಷ್ ಡಿಕ್ಶನರಿ". ಇದಕ್ಕಿಂತಲೂ ಮುನ್ನ ಪುರಾತನ ಗ್ರಂಥ ಗಳಾದ ವೇದಗಳು, ಉಪನಿಷತ್ತುಗಳು, ಪುರಾಣ ಗಳು ಹಾಗೂ ಮಹಾಕಾವ್ಯಗಳಾದ ರಾಮಾ ಯಣ – ಮಹಾಭಾರತಗಳಲ್ಲಿಯೂ ಹಿಂದೂ ಶಬ್ದದ ಪ್ರಯೋಗ ಕಂಡುಬರುವುದಿಲ್ಲ ಎನ್ನು ತ್ತಾರೆ ಪಂಡಿತರು. ಸಾಮಾನ್ಯವಾಗಿ ಎಲ್ಲರೂ ಇತ್ತೀಚೆಗೆ ಒಪ್ಪಿಕೊಂಡಂತೆ ಸಿಂಧೂ ಶಬ್ದದ ವಿಕೃತ ರೂಪವೇ ಹಿಂದೂ ಶಬ್ದವೆಂದು ಹೇಳ ಬಹುದಾಗಿದೆ. ✡



# 'ಫೆಮಿನಾ' ಕೊಟ್ಟ ಉಡುಗೊರೆ

**ವೈರಸ ಶಿರಾಲಿ**

ಈ ವರ್ಷದ ದೀಪಾವಳಿ ಹಬ್ಬದಲ್ಲಿ ಉಂಡ ಸಿಹಿಯಿಂದ ಮತ್ತು ಹಬ್ಬಕ್ಕಿಂತ ಪಡೆದ ಉಡುಗೊರೆಗಳ ಸಿಹಿ ನೆನಪಿನಿಂದ ಮರೆಯಾಗುವ ಈ ಸಮಯದಲ್ಲಿ ಕಳೆದ ವರ್ಷ 'ಫೆಮಿನಾ' ಇಂಗ್ಲಿಷ್ ಪತ್ರಿಕೆ ತನ್ನ ಓದುಗರಿಗೆ ಕೊಟ್ಟ ದೀಪಾವಳಿ ಉಡು-ಗೊರೆಯನ್ನು ಎಲ್ಲರೂ ತಿಳಿಯುವುದು ಉಚಿತ. ಈ ಉಡುಗೊರೆ ವಿಚಿತ್ರವಾದು-ದಾದರೂ ಸಾಹಿತ್ಯ ಲೋಕದಲ್ಲಿ ಅಚ್ಚರಿ ತರುವಂಥದ್ದು. ಆ ಉಡುಗೊರೆ ಯಾವುದೆಂದು ತಿಳಿಯುವ ಮೊದಲು ಓರ್ವ ರೋಗಿಯ ಕಥೆ ಹೇಳುವದು ಉತ್ತಮ.

ಅಲಿ ಅಹಮ್ಮದ್ ಎಂಬ ಚೌಕೀದಾರನ ಹದಿಹರಯದ ಮಗ ಶಕೀಲನು ಹೊಸ ಕವಾಟಗಳನ್ನು ಜೋಡಿಸುವ ಬಹು ದೊಡ್ಡ ಶಸ್ತ್ರಚಿಕಿತ್ಸೆಯಿಂದ ಮಾತ್ರ ಸರಿಪಡಿಸಬಹುದಾದಂತಹ ತೀವ್ರತರದ ಹೃದಯ ಕಾಯಿಲೆಯಿಂದ ನರಳುತ್ತಿದ್ದ. ಅವನಿಗೆ ವಯಸ್ಸಿಗೆ ತಕ್ಕಂತೆ ಬೆಳವಣಿಗೆ ಇರಲಿಲ್ಲ. ಸ್ವಲ್ಪ ಶ್ರಮದಿಂದ ಕೂಡ ಆತ ಉಬ್ಬಸ-ಪಡುತ್ತಿದ್ದ. ಸರಿಯಾದ ಚಿಕಿತ್ಸೆಗೆ ತಕ್ಷಣ ಏರ್ಪಾಡು ಮಾಡದಿದ್ದರೆ ಆತ ವಿಧಿವಶನಾಗುತ್ತಿದ್ದ.

ಅಲಿ ಅಹಮ್ಮದ್ ಒಂದು ದಿನ ಒಬ್ಬ ಮಿತ್ರನ ಮುಖಾಂತರ 'ಫೆಮಿನಾ' ಪತ್ರಿಕೆಯ ಸಂಪಾದಕರಿಗೆ ಪರಿಚಯಿಸಲ್ಪಟ್ಟ. ಅವನಿಂದ ಶಕೀಲನ ಕಥೆ ಕೇಳಿದ ಸಂಪಾದಕರಿಗೆ ರೋಗಿಗೇನಾದರೂ ಸಹಾಯ ಮಾಡಬೇಕೆಂಬ ಉತ್ಕಟೇಚ್ಛೆ ಮೂಡಿತು. ಫೆಮಿನಾ ಬಳಗವೇ ಅವನನ್ನು ಗುಣಪಡಿಸುವ ಪಣ ತೊಟ್ಟಿತು. ಅವನ ಚಿಕಿತ್ಸೆಯ ಸಂಪೂರ್ಣ ಭಾರ ವಹಿಸಿಕೊಂಡಿತು.

ಅಲಿ ಅಹಮ್ಮದ್ ಮತ್ತು ಆತನ ಹೃದ್ರೋಗಿ ಮಗ ಶಕೀಲನನ್ನು ಸಂಪಾದಕರ ಮಗನ ಜೊತೆಗೆ ಮುಂಬಯಿಯ ಸುಸಜ್ಜಿತವಾದ ಕೆ. ಇ. ಎಮ್. ಆಸ್ಪತ್ರೆಗೆ ಕಳಿಸಿ ಕೂಲಂಕಷವಾಗಿ ತಪಾಸಣೆಯಾದ ನಂತರ, ಪತ್ರಿಕೆಯಲ್ಲಿ ಧನ ಸಹಾಯಕ್ಕಾಗಿ

ಸಾರ್ವಜನಿಕರಲ್ಲಿ ಬೇಡಿಕೆ ಸಲ್ಲಿಸಿ ಹಣ ಸಂಗ್ರಹ ವಾದ ಮೇಲೆ ಕೆ. ಇ. ಎಮ್. ಆಸ್ಪತ್ರೆಯಲ್ಲೇ ಶಸ್ತ್ರಚಿಕಿತ್ಸೆ ಮಾಡಿಸುವವೆಂಬ ನಿರ್ಧಾರಕ್ಕೆ ಬರ ಲಾಯಿತು. ಪತ್ರಿಕೆಯಲ್ಲಿ ಧನ ಸಹಾಯಕ್ಕಾಗಿ ಪ್ರಕಟಿಸಿದ ಕೋರಿಕೆಯ ಫಲವಾಗಿ ಭಾರತದಿಂ ದಷ್ಟೇ ಅಲ್ಲ, ವಿದೇಶಗಳಿಂದಲೂ ಬಂದ ಮೊತ್ತ ನಿರೀಕ್ಷೆಗೂ ಮೀರಿ ಮೊದಲ ವಾರದಲ್ಲೇ ಹತ್ತು ಸಾವಿರಕ್ಕೂ ಮೇಲ್ಪಟ್ಟಾಯಿತು. ಆದರೆ ಇಲ್ಲೂ ವಿಧಿ ಶಕೀಲನನ್ನು ಬಿಡಲಿಲ್ಲ. ಹಣವೇನೋ ಬಂತು. ಆದರೆ ಆ ಸಮಯದಲ್ಲೇ ಕೆ. ಇ. ಎಮ್. ಆಸ್ಪತ್ರೆಯ ವೈದ್ಯರು ಅನಿರ್ದಿಷ್ಟ ಅವಧಿಯ ವರೆಗೆ ಮುಷ್ಕರಕ್ಕೆ ತೊಡಗಬೇಕೆ! ತನ್ನಿಮಿತ್ತ ಸರಿಯಾದ ಶಸ್ತ್ರಚಿಕಿತ್ಸಕನನ್ನು ಹುಡುಕುವುದೇ ಸಂಪಾದಕ ಬಳಗಕ್ಕೆ ಪ್ರಶ್ನೆ ಯಾಗಿಯೇ ಉಳಿಯಿತು.

ಹೀಗಿರುವಾಗಲೇ ಒಂದು ದಿನ ಸಂಪಾದಕರು ತಮ್ಮ ಮಗನ ಕಫದ ತೊಂದರೆಯ ಸಲುವಾಗಿ ಡಾ. ಪಿ. ಕೆ. ರಘುವಾರರಲ್ಲಿ ಪರೀಕ್ಷಿಸಲೋಸುಗ ಬಾಂಬೆ ಆಸ್ಪತ್ರೆಗೆ ಹೋದಾಗ "ಇವರು ಡಾ. ಗಿರಿಧರಲಾಲ ಶರ್ಮಾ. ಇಲ್ಲಿಯ ಹಾರ್ಟ್ ಸರ್ಜನ್‌ರು" ಎಂದು ಡಾ. ರಘುವಾರರು ಅವರ ಎದುರಿನಿಂದ ಬರುತ್ತಿದ್ದ ಇನ್ನೊಬ್ಬ ವೈದ್ಯರನ್ನು ತೋರಿಸುತ್ತ ಸಂಪಾದಕರಿಗೆ ಪರಿಚಯಿಸಿದರು. ಸ್ವರ್ಗ ಸಿಕ್ಕಿದಷ್ಟು ಸಂತೋಷವಾಯಿತು, ಸಂಪಾದಕರಿಗೆ.

ಶಕೀಲನನ್ನು ಡಾ. ಗಿರಿಧರಲಾಲ ಶರ್ಮಾರ ಚಿಕಿತ್ಸೆಯಡಿಯಲ್ಲಿ ಇಡಲಾಯಿತು. ಆಸ್ಪತ್ರೆಗೆ ಸೇರಿಸಿದ ಮೂರು ದಿನಗಳಲ್ಲೇ ಶಸ್ತ್ರಚಿಕಿತ್ಸೆಯ ದಿನವನ್ನು ಗೊತ್ತುಪಡಿಸಲಾಯಿತು. ೧೯-೯-೧೯೮೪ ಶಕೀಲನ ಸಾವು-ಬದುಕಿನ ನಿರ್ಣಯದ ದಿನವಾಯಿತು. 'ಫೆಮಿನಾ' ಬಳಗ ದವರು ನಾ ಮುಂದೆ ತಾ ಮುಂದೆ ಎನ್ನುತ್ತ ಶಕೀಲನಿಗಾಗಿ ರಕ್ತದಾನ ಮಾಡಿದರು. ಶಸ್ತ್ರ ಚಿಕಿತ್ಸೆಯ ಸಮಯದಲ್ಲಿ ಶಕೀಲನ ಸಂಬಂಧಿ ಕರು ಮಸೀದೆಯಲ್ಲಿ ಪ್ರಾರ್ಥಿಸಿದರೆ ಫೆಮಿನಾ ಬಳಗದವರು ದುರ್ಗಮ್ಮನ ದೇವಸ್ಥಾನದಲ್ಲಿ ಶಕೀಲನ ಆರೋಗ್ಯಕ್ಕಾಗಿ ಪೂಜೆ ಮಾಡಿದರು. ಶಕೀಲ ಶಸ್ತ್ರಚಿಕಿತ್ಸೆಯಿಂದ ಚೇತರಿಸಿಕೊಂಡ ಎಂಬ ಸುದ್ದಿ ಕೇಳಲು ಆಸ್ಪತ್ರೆ-ಆಫೀಸು-ಮನೆ ಹೀಗೆ ಓಡಾಡುವುದರಲ್ಲೇ ಇಡೀ ಪತ್ರಿಕಾ ಬಳಗ ತನ್ನ ಎರಡು ಹಗಲು ಎರಡು ರಾತ್ರೆಗಳನ್ನು ಕಳೆಯಿತು.

ಶಸ್ತ್ರಚಿಕಿತ್ಸೆಯಿಂದ ಚೇತರಿಸಿಕೊಂಡ ಶಕೀಲ ನಗುಮುಖದಿಂದ ಮಾತನಾಡುವದನ್ನು, ಉಲ್ಲಾಸದಿಂದ ಓಡಾಡುವದನ್ನು ಕಾಣುವ ಸುಯೋಗ ಸಂಪಾದಕ ಬಳಗಕ್ಕೆ ಸಿಕ್ಕಿತು. ಈ ಸುದ್ದಿಯನ್ನೇ ಫೆಮಿನಾ ತನ್ನ ಓದುಗರಿಗೆ ೧೯೮೪ನೇ ವರ್ಷದ ದೀಪಾವಳಿಯ ಉಡುಗೊರೆ ಯಾಗಿ ಕೊಟ್ಟಿತು.

ಹಬ್ಬದ ಸಮಯದಲ್ಲಿ ಉಳಿದ ಪತ್ರಿಕೆಗಳೂ ಓದುಗರಿಗೆ ಇಂತಹ ಉಡುಗೊರೆ ಕೊಟ್ಟರೆ ಎಷ್ಟು ಚೆನ್ನ! ✡



ಕತ್ತೆಯೆಂದರೆ ಮೂಗು ಮುರಿಯಬೇಡಿ. ಪಶ್ಚಿಮ ಬಂಗಾಳ ಸರಕಾರದ ವನ್ಯ-ವಿಭಾಗ, ಗುಜರಾತ್ ಪ್ರಾಂತ್ಯದ ವನ್ಯವಿಭಾಗದಿಂದ ಎರಡು ಕಾಡುಕತ್ತೆಗಳನ್ನು ೩೨ ಸಾವಿರ ರೂಪಾಯಿಗಳಿಗೆ ಖರೀದಿಸಿದೆ.

ಇದಲ್ಲದೆ ಈ ಕಾಡುಕತ್ತೆಗಳನ್ನು ಬಂಗಾಳಕ್ಕೆ ಸಾಗಿಸಲು ೧೨ ಸಾವಿರ ರೂಪಾಯಿ-ಗಳಷ್ಟು ಹಣ ವೆಚ್ಚವಾಯಿತು. ಹಾಗಾಗಿ ಈ ಎರಡು ಕತ್ತೆಗಳ ಒಟ್ಟು ಮೌಲ್ಯ ೪೪ ಸಾವಿರಗಳು! ಅರ್ಥಾತ್ ಒಂದೊಂದು ಕತ್ತೆಯ ಬೆಲೆಯೂ ೨೨ ಸಾವಿರ ರೂಪಾಯಿಗಳು!

–ಜೆ. ವಿ. ಶಶಿಧರ



## ದಮಯಂತಿ ನರೇಗಲ್ಲ

ನಾವು ವಿಜಾಪುರಕ್ಕೆ ವರ್ಗವಾಗಿ ಬಂದು ಆಗಲೇ ತಿಂಗಳಾಗಿತ್ತು. ಅದುವರೆಗೆ ಉತ್ತರ ಹಿಂದುಸ್ತಾನದಲ್ಲಿ ಎಲ್ಲೆಲ್ಲಿಯೋ ತಿರುಗಿದ್ದ ನನಗೆ ಅಚ್ಚ ಕನ್ನಡ ದೇಶಕ್ಕೆ, ಅದರಲ್ಲಿಯೂ ನಮ್ಮ ಪೂರ್ವಜರ ಭಾಗಕ್ಕೆ ಬಂದುದು ಅತ್ಯಂತ ಸಂತಸದ ಸಂಗತಿಯಾಗಿತ್ತು. ಅಲ್ಲದೆ ವಿಜಾಪುರ ದಿಂದ ನಮ್ಮ ಊರು ಹೆಚ್ಚೇನೂ ದೂರ ವಿರಲಿಲ್ಲವಾದ್ದರಿಂದ ಬೇಕಾದಾಗ ಹೋಗಿ ನಮ್ಮ ಅವ್ವನನ್ನು ಭೆಟ್ಟಿಯಾಗಿ ಬರಬಹು-ದಾಗಿತ್ತು. ನಾವು ಹಿರಿಯ ಮಕ್ಕಳೆಲ್ಲ ಉದ್ಯೋಗವನ್ನರಸಿಕೊಂಡು ದೇಶದಲ್ಲೆಲ್ಲ ಚೆಲ್ಲಾ ಪಿಲ್ಲಿಯಾಗಿ ಹರಡಿಕೊಂಡಿದ್ದರೂ ನಮ್ಮ ತಾಯಿ ಸಣ್ಣ ತಮ್ಮನೊಂದಿಗೆ ಹೊಲ ಮನೆಗಳನ್ನು ನೋಡಿಕೊಂಡು ಊರಲ್ಲಿಯೇ ಉಳಿದುಕೊಂಡಿ-ದ್ದರು. ದೂರ ನಾಡಿನಲ್ಲಿದ್ದಾಗ ವರ್ಷಕ್ಕೊಂದು ಸಲ ಬಂದು ಅವರನ್ನು ನೋಡಲಿಕ್ಕೂ ಆಗು-ತ್ತಿರಲಿಲ್ಲ ನನಗೆ. ಆದರೆ ಈಗ ಇಷ್ಟು ಸಮೀಪ ಬಂದ ಮೇಲೆ ತಿಂಗಳಿಗೊಂದು ಸಲವಾದರೂ ಹೋಗಿ ಅವಳನ್ನು ಕಂಡುಬರುವದೆಂದು ನಿರ್ಧರಿಸಿದ್ದೆ. ಕಾರಿನಲ್ಲಿ ಹೋದರೆ ಆರೇಳು ಗಂಟೆಯ ದಾರಿ. ಶನಿವಾರ ಮಧ್ಯಾಹ್ನ ಹೊರಟರೆ ರವಿವಾರ ರಾತ್ರಿ ತಿರುಗಿ ಬರ ಬಹುದು. ಹಾಗೆಯೇ ಯೋಚನೆ ಮಾಡಿ ಕೊಂಡು ಈ ಸಲ ಶನಿವಾರ ಹೊರಟಿದ್ದೆವು. ಮೂರು ವರ್ಷದ ಪುಟ್ಟಿಗಾಗಿ ಅಗತ್ಯದ ವಸ್ತುಗಳನ್ನು ಸಾವರಿಸಿಕೊಂಡು ಹೊರಟಾಗ ಆಗಲೇ ಮೂರು ಗಂಟೆಯ ಮೇಲಾಗಿತ್ತು.

ಹೊರಟಾಗ ಎಂಥ ಬಿಸಿಲಲ್ಲಿ ಹೊರಟೆವಲ್ಲ, ಸ್ವಲ್ಪ ಇಳಿ ಹೊತ್ತಾದ ಮೇಲೆ ಹೊರಡ ಬೇಕಿತ್ತು ಎನಿಸಿದರೂ ದಾರಿ ಸವೆದಂತೆ ನೆಲದ ಅಂಚಿನವರೆಗೂ ಹರಡಿದ ಹಸಿರು, ಅದನ್ನು ಮುತ್ತಿಡುತ್ತಿದ್ದ ಸ್ವಚ್ಛ ನೀಲ ಆಕಾಶ ಕಣ್ಣಿಗೆ, ಮನಸ್ಸಿಗೆ ತಂಪನ್ನೆರೆದಿದ್ದವು. ದಾರಿಗುಂಟ ಆಚೀಚಿನ ಹೊಲಗಳಲ್ಲಿ ಹುಲುಸಾದ ಬೆಳೆ ತುಂಬಿ ತೂಗುತ್ತಿತ್ತು. ಬೇಲಿಗುಂಟ ಬಣ್ಣ ಬಣ್ಣದ ಕಾಡು ಹೂಗಳು ತಲೆದೂಗಿ ದಾರಿಗರಿಗೆ ಶುಭ ವನ್ನು ಕೋರುತ್ತಿದ್ದವು. ಹೂಗಳನ್ನು ಕಂಡೊಡನೆ ಎಂದಿನಂತೆ ಪುಟ್ಟಿಯ ಕಾಟ ಆರಂಭ ವಾಯಿತು. ಅವಳಿಗೆ ಹೂವಿನ ಹುಚ್ಚು ಬಹಳ. "ಕೆಳಗಿಳಿಸು, ಹೂ ನೋಡಿ ಬರ್ತೀನಿ" ಎಂದು ಅವಳ ಹಟ. ಆದರೆ ಈಗಲೇ ಹೀಗೆ ಪ್ರಾರಂಭ ವಾದರೆ ನಾವು ಊರು ಮುಟ್ಟುವದು ಯಾವಾಗ ಎಂದು ಎಷ್ಟೋ ಹೊತ್ತು ಅವಳನ್ನು ಹೇಗೋ ಮಾಡಿ ತಡೆಹಿಡಿದೆ. ಆದರೆ ಕೊನೆಗೆ ಅವಳ ಹಟವನ್ನು ನೋಡಲಾರದೆ ಡ್ರೈವರ್ ಒಂದೆಡೆಗೆ ನೆರಳು ನೋಡಿ ಕಾರನ್ನು ನಿಲ್ಲಿಸಿದ.

"ಸಾಹೇಬರs, ಪುಟ್ಟಕ್ಕಾರು ಏನೂ ಬಿಡೂ ಹಂಗ ಕಾಣೂದುಲ್ಲರಿ, ಇಲ್ಲಿ ಬೇಕಾದಷ್ಟು ಹೂ ಅದಾವು, ಕೆಳಗ ಬಿಡ್ರಿ ಅವರನ ತುಸಾ ಹೊತ್ತು. ತಕ್ಕೊಂಡು ಬರ್ಲಿ," ಅಂದ.

ಕಾರಿನ ಬಾಗಿಲು ತೆಗೆದದ್ದೇ ತಡ, ಅವಳು ಜಿಗಿದು ಕೆಳಗಿಳಿದು ಓಡಿದಳು ಹೂಗಳೆಡೆಗೆ.




ನಮಗೂ ಆಗಲೇ ಎರಡು ಗಂಟೆ ಕುಳಿತು ಕಾಲು ಜುಂ ಹಿಡಿದದ್ದರಿಂದ ನಾವೂ ಕೆಳಗಿಳಿದು ನಿಂತೆವು. ಸುತ್ತಲೂ ನೋಡುತ್ತಿದ್ದಂತೆ ಮನಸ್ಸು ತುಂಬ ಉಲ್ಲಾಸಗೊಂಡಿತ್ತು. ಎಂಥ ರಮ್ಯವಾದ ಸ್ಥಳ! ಅಷ್ಟೇ ಜಾಗೆಯಲ್ಲಿ ಎಷ್ಟು ಬಗೆಯ ಕಾಡು ಹೂಗಳು ಅರಳಿದ್ದವು! ಯಾರೋ ಬೇಕೆಂದೇ ಗಿಡಗಳನ್ನು ತಂದು ಅಲ್ಲಿ ನಟ್ಟಂತಿತ್ತು. ಅದರ ಆಚೆಗೆ ಹಾಸುಗಲ್ಲುಗಳು ದೂರದ ವರೆಗೆ ಮಂದ ಬಿಸಿಲಿನಲ್ಲಿ ಹೊಳೆಯುತ್ತಿದ್ದವು.

"ಅಲ್ಲಿ ನದೀ ಹರದ್ಯಂತ ಕಾಣತ್ತದ ಅಲ್ಲೇನೋ ಸಿದ್ದಣ್ಣ?" ನಾನು ಡ್ರೈವರನನ್ನು ಕೇಳಿದೆ.

"ಅದು ನದೀ ಅಲ್ರೀ, ಹಳ್ಳದ ಕೋರಿ ಐತಿರೀ. ಮಳಿಗಾಲದಾಗ ತುಂಬಿ ಹರೀತೈತಿ, ಈಗೇನ ನೀರಿಲ್ರಿ ಅಕ್ಕಾರs." ಎಂದ.

ನಾನು ಹಾಗೆಯೇ ನಿಂತು ಆ ಕಡೆ ಈ ಕಡೆ ಕಣ್ಣು ಹಾಯಿಸಿದೆ. ನಿಜವಾಗಿಯೂ ಸುಂದರವಾದ ಸ್ಥಳ. ವನಭೋಜನಕ್ಕೆ ಬರಲು ಒಳ್ಳೆಯ

ತಾಣ. ನಾವು ನಿಂತ ಜಾಗೆಯಿಂದ ಸ್ವಲ್ಪವೇ ದೂರದಲ್ಲೊಂದು ಮಾವಿನ ತೋಪು ಕಾಣಿಸಿತು. ಅದರ ಆಚೆಗೊಂದು ದೊಡ್ಡ ಆಲದ ಮರ. ಅದರ ಕೆಳಗೆ ಒಂದು ಹಳೆಯ ಅರ್ಧಮರ್ಧ ಬಿದ್ದು ಹೋದ ಗುಡಿ ಕಾಣುತ್ತಿತ್ತು. ಅದರ ದೊಡ್ಡ ಕಳಸವನ್ನು ನೋಡಿದರೆ ಒಂದಾನೊಂದು ಕಾಲಕ್ಕೆ ತುಂಬ ದೊಡ್ಡ ಗುಡಿಯಿದ್ದಿರಬೇಕು ಎಂದು ಎನಿಸುತ್ತಿತ್ತು.

"ಯಾವ ಗುಡಿಯೋ ಅದು, ಸಿದ್ದಣ್ಣ?"– ಸಿದ್ದಣ್ಣನೇ ನಮ್ಮ ಪ್ರವಾಸದ ಗೈಡ್. ಅದೇ ಜಿಲ್ಲೆಯಲ್ಲಿಯೇ ಹುಟ್ಟಿದವಳಾದರೂ ಅಲ್ಲಿಯ ಹಳ್ಳಿ–ಪಳ್ಳಿಗಳ ಪರಿಚಯ ಸಾಕಷ್ಟಿರಲಿಲ್ಲ ನನಗೆ.

"ಈಸ್ವರನ ಗುಡೀರಿ ಅದು. ಬಾಳ ಚಂದ ಇತ್ರೀ ಗುಡಿ. ನಾ ಸಣ್ಣಾಂವ ಇರೂವಾಗ ಇಲ್ಲಿ ಜಾತ್ರಿ ಕೂಡತಿತ್ತರಿ, ವರ್ಸಾ–ವರ್ಸಾ."

"ಪುಟ್ಟಿ, ಸಾಕು ನಡೀ ಇನ್ನs"–ನನ್ನ ಪತಿ ಮಗಳನ್ನು ಅವಸರಪಡಿಸಿ ಹೊರಡಿಸುವ ಪ್ರಯತ್ನದಲ್ಲಿದ್ದರು. ನಾನು ಗುಡಿಯಿಂದ ಹಾಗೆಯೇ ಮುಂದೆ ಕಣ್ಣೋಡಿಸಿದೆ. ಮಾವಿನ ತೋಪಿಗೂ ಹಳ್ಳಕ್ಕೂ ನಡುವೆ ಎರಡು ಪುಟ್ಟ ಗುಡಿಗಳಂಥವೇನೋ ಕಂಡವು. ಒಂದೇ ಬಗೆಯ ಜೊತೆ ಜೊತೆಯಾಗಿ ನಿಂತ ಆ ಪುಟ್ಟ ಗುಡಿಗಳನ್ನು ಕಂಡು ನನಗೆ ಸೋಜಿಗವೆನಿಸಿತು. ದುರ್ಗವ್ವ, ದ್ಯಾಮವ್ವರ ಗುಡಿಗಳಿರ ಬಹುದೇನೋ, ಆದರೆ ಹೀಗೆ ಅವರಿಗೆ ಬೇರೆ ಬೇರೆ ಗುಡಿಗಳನ್ನು ಕಟ್ಟುವ ಪದ್ಧತಿಯಿಲ್ಲವಲ್ಲ ನಮ್ಮಲ್ಲಿ. ಹೋಗಿ ನೋಡುವ ಎನಿಸಿದೆಯೆಂದು ಎಂದುಕೊಳ್ಳುತ್ತಿರುವಷ್ಟರಲ್ಲಿಯೇ ನನ್ನ ಪತಿ ಪುಟ್ಟಿಯನ್ನೆತ್ತಿಕೊಂಡು ಬಂದರು—"ನಡೀರಿನ್ನ ಇಲ್ಲೇ ಆರು ಹೊಡೀತು, ಊರು ಮುಟ್ಟೂದು ಯಾವಾಗಿನ್ನs ? ಭಾಳ ಲೇಟಾದರ ಅವ್ವ ಸುಮ್ಮನs ಕಾಳಜೀ ಮಾಡಕೋತ ಕೂಡತಾರ" ಎಂದರು.

ನನಗೂ ಅದು ಸರಿಯೆನಿಸಿ ತಿರುಗಿ ಬಂದೆ. ಆದರೆ ಕಾರು ಆ ಸ್ಥಳವನ್ನು ಬಿಟ್ಟು ಮುಂದೆ ಸಾಗಿದಂತೆ ನನ್ನ ಮನಸ್ಸಿಗೆ ಯಾಕೋ ತುಂಬ ಹಳಹಳಿಯೆನಿಸತೊಡಗಿತು. ಆತ್ಮೀಯರೊಬ್ಬರ ಮನೆಯ ಬಾಗಿಲವರೆಗೆ ಹೋಗಿ ಅವರಿಗೆ ಭೆಟ್ಟಿಯಾಗದೆ ತಿರುಗಿ ಬಂದೆನಲ್ಲ ಎನ್ನುವ ಹಾಗಾಯಿತು. ಮರುಪ್ರವಾಸದ ವೇಳೆಯಲ್ಲಾದರೂ ಇಳಿದು ಮುಂದೆ ಹೋಗಿ ಅಲ್ಲಿ ಏನೇನಿದೆಯೆಂದು ನೋಡಿಯೇ ಬರುವದೆಂದು ಮನಸ್ಸಿನಲ್ಲಿ ತೀರ್ಮಾನಿಸಿಕೊಂಡೆ.

ನಮ್ಮ ಊರು ಮುಟ್ಟಿದಾಗ ರಾತ್ರಿ ಹತ್ತು ಗಂಟೆಯಾಗುತ್ತ ಬಂದಿತ್ತು. ಅವ್ವ, ರವಿ ಇಬ್ಬರೂ ನಮ್ಮದೇ ದಾರಿ ನೋಡುತ್ತ ಹೊರ ಅಂಗಳದಲ್ಲಿ ದೀಪವನ್ನಿಟ್ಟುಕೊಂಡು ಕುಳಿತಿದ್ದರು. ಒಂದೂವರೆ ವರ್ಷದ ನಂತರ ಆದ ಭೆಟ್ಟಿಯದು. ಅಂತೆಯೇ ನಾವು ಬಂದದ್ದರಿಂದ ಅವ್ವನಿಗೆ ಆದ ಸಂಭ್ರಮ ಅಷ್ಟಿಷ್ಟಲ್ಲ. ಅದರಲ್ಲಿಯೂ ಮೊಮ್ಮಗಳನ್ನು ನೋಡಿ, ಅವಳ ಮುದ್ದಿನ ಮಾತುಗಳನ್ನು ಕೇಳಿ ಅವಳು ಆನಂದಪಟ್ಟದ್ದೆಷ್ಟು ಎಂದು ವರ್ಣಿಸಲಿಕ್ಕಾಗದು. ಪುಟ್ಟಿ ಮಲಗಿದ ಮೇಲೆಯೇ ಅವ್ವ ನನ್ನೊಡನೆ ಬಿಡುವಾಗಿ ಮಾತನಾಡಿದ್ದು. ರಾತ್ರಿ ಎಷ್ಟೋ ಹೊತ್ತಿನ ವರೆಗೆ ನಮ್ಮ ಹರಟೆ ನಡೆದೇ ಇತ್ತು.

ಮರುದಿನ ಮಧ್ಯಾಹ್ನ ಊಟವಾದಾಗಲೇ ತುಂಬ ಹೊತ್ತಾಗಿತ್ತು. ಕೂಡಲೇ ನಾವು ಹೊರಡಬೇಕೆಂದಾಗ ತುಂಬ ಬೇಸರವಾಯಿತು ಅವ್ವನಿಗೆ. ಮಾಮಾನ ಜೊತೆಯಲ್ಲಿ ಹೊಲಕ್ಕೆ ತಿರುಗಲು ಹೋಗುವ ತಯಾರಿಯಲ್ಲಿದ್ದ ಪುಟ್ಟಿಗೂ ಅಷ್ಟೇ ಬೇಸರ. ಮುಂದಿನ ತಿಂಗಳು ಮತ್ತೆ ಬರುವೆವೆಂದು ವಚನವಿತ್ತು, ಹೇಗೋ ಅವರಿಂದ ಬೀಳ್ಕೊಂಡು ಹೊರಟೆವು. ಕಾರು ಹೊರಡುತ್ತಿದ್ದಂತೆ ನನ್ನ ಪತಿ ನುಡಿದರು. "ನೀ ಏನು ಇಷ್ಟು ಲಗೂ ಹೊರಡ್ತೀ ಅನಿಸಿದ್ದಿಲ್ಲ ನನಗ..."

"ಮನೀ ಮುಟ್ಟಲಿಕ್ಕೆ ಭಾಳ ರಾತ್ರಿ ಆದೀತಲ್ಲ ಅಂತ" ನಾನು ತೇಲಿಸಿ ನುಡಿದೆ. ಆದರೂ ಅವರು ಸ್ವಲ್ಪ ಸಂಶಯದಿಂದಲೇ ನನ್ನ ಕಡೆಗೆ ನೋಡುತ್ತ ನುಡಿದರು, "ಹೂಂ... ಅಂತೂ ಒಂದು ಸರೇ

ಆರs ನಾ ಅವಸರಾ ಮಾಡಬೇಕಾಗಲಿಲ್ಲ ನಿನಗ."

ತುಂಬ ದಣಿದಿದ್ದರಿಂದಲೋ ಅಥವಾ ನಿದ್ದೆ ಸರಿಯಾಗಿ ಆಗಿರಲಿಲ್ಲವೋ ಪುಟ್ಟಿ ಅಂದು ದಾರಿಯಲ್ಲಿ ತುಂಬ ಕಿರಿಕಿರಿ ಮಾಡಿದಳು. ಅಂತೂ ಕಷ್ಟಪಟ್ಟು ಅವಳನ್ನು ಮಲಗಿಸುವ ಹೊತ್ತಿಗೆ ಅರ್ಧ ರಸ್ತೆ ಸವೆದಿತ್ತು. ನಡುವೆ ಒಂದು ಸ್ಥಳದಲ್ಲಿ ರಸ್ತೆಯ ಬದಿಯ ಹೊಟೆಲೊಂದರಲ್ಲಿ ಚಹ ತರಲೆಂದು ನನ್ನ ಪತಿ ಹೋದಾಗ ಸಿದ್ದಣ್ಣನಿಗೆ ಮೆಲ್ಲಗೆ ಹೇಳಿದೆ– "ಸಿದ್ದಣ್ಣಾ, ನಿನ್ನೆ ಹೋಗೂ ವಾಗ ಇಳಿದಿದ್ದಿವಲ್ಲ, ಆ ಜಾಗಾದಾಗ ಸ್ವಲ್ಪ ನಿಲ್ಲಸು. ನನಗ ಅಲ್ಲಿ ಸ್ವಲ್ಪ ಗುಡೀತನಕ ಹೋಗ ಬೇಕಾಗೇದ."

"ಅಲ್ಲಿ ಮುಟ್ಟೋತಂಕಾ ಕತ್ತಲಾಗ್ತೈತಲ್ರೀ?" ಸಿದ್ದಣ್ಣ ಗೊಣಗಿದ್ದ.

"ಒಂದೈದು ಮಿನಿಟೋ ಸಿದ್ದಣ್ಣಾ, ಹೆಚಿಗಿ ವ್ಯಾಳ್ಯಾ ತೊಗೊಳ್ಳೋದುಲ್ಲ. ಆ ಗುಡಿ ನಿನ್ನೆ ನೋಡಲಿಲ್ಲಾಂತ ರಾತ್ರೀ ಎಲ್ಲಾ ಹಳಹಳಿ ಅನಿಸಿತು ಯಾಕೋ ನನಗ. ಏನು ದೇವರ ಸತ್ಯ ಅದsನೋ ಏನೋ ಆ ಜಾಗಾದಾಗ, ಹಿಂಗ ಅನಿಸಿದ ವ್ಯಾಲ ಹಂಗs ಹೋಗಬಾರದು ನೋಡು," ಬೇಕೆಂದೇ ಅವನ ಮುಗ್ಧಮನದ ನಂಬಿಕೆಗಳನ್ನು ಕೆಣಕಿದೆ.

"ಆಯ್ತು ಬಿಡ್ರಿ. ಆದ್ರ, ಭಾಳ ಹೊತ್ತು ಮಾಡಬ್ಯಾಡ್ರಿ ಅಕ್ಕಾರs. ಹಳ್ಳದ ದಂಡಿರೀ, ಬಿರಸ ಜಾಗಾ ಅಂತಾರ್ರಿ. ಸಂಜಿ ಹೊತ್ತ ಅಡ್ಯಾಡೂದು ಬೇಸಿ ಅಲ್ರೀ." ಅಂತೂ ಒಪ್ಪಿದ.

ಆ ಸ್ಥಳ ಸಮೀಪಿಸುತ್ತಿದ್ದಂತೆ ಪುಟ್ಟಿಯನ್ನು ನನ್ನ ತೊಡೆಯ ಮೇಲಿಂದ ಉಪಾಯವಾಗಿ ಅವಳ ತಂದೆಯ ತೊಡೆಯ ಮೇಲೆ ಸಾಗಿಸಿದೆ, "ಕಾಲು ಜುಂ ಹಿಡದಾವ" ಎಂದು. ಸಂಜೆಯಾಗಿತ್ತು ಆಗಲೇ. ಹುಣ್ಣಿವೆ ಸಮೀಪಿಸಿತ್ತೇನೋ, ಚಂದ್ರ ಆಗಲೇ ಮೇಲೇರಿದ್ದ. ಹಿಂದಿನ ದಿನ ನಿಲ್ಲಿಸಿದ ಸ್ಥಳದಲ್ಲಿಯೇ ಸಿದ್ದಣ್ಣ ಕಾರು ನಿಲ್ಲಿಸಿದ. "ಯಾಕೋ, ಏನಾತು...?" ಎಂದು ನನ್ನ ಪತಿ ಆಶ್ಚರ್ಯದಿಂದ ಕೇಳುತ್ತಿದ್ದಂತೆ ನಾನು ಬಾಗಿಲು ತೆಗೆದು ಹೊರಗೆ ಬಂದಿದ್ದೆ.

"ಅಕ್ಕಾರು ಆ ಗುಡೀತಾವ ಹೋಕ್ಯಾರಂತ. ಆಗ್ಲೇ ಹೇಳಿದ್ದರ್ರಿ ತುಸಾ ಅಲ್ಲಿ ನಿಲ್ಲಸಂತ..." ಡ್ರೈವರ್ ಹೇಳುತ್ತಿದ್ದಂತೆಯೇ,

"ನೀವು ಪುಟ್ಟೀ ಜೋಡಿ ಇರ್ರಿ, ನಾ ಈಗ ಬರ್ತೀನಿ..." ಎಂದು ಹೇಳಿದವಳೇ ಭರಭರನೆ ಗುಡಿಯೆಡೆಗೆ ಹೆಜ್ಜೆ ಹಾಕಿದೆ.

"ಅದs ಅಂತಿದ್ದೆ ನಾ – ಇಷ್ಟು ಗಡಿಬಿಡೀಲೆ ಯಾಕ ಹೊಂಟಳು ಅಂತ, ಈಗ ಗೊತ್ತಾತು ನೋಡು ಸಿದ್ದಣ್ಣಾ, ನೀನೂ ಹೋಗು, ಮಾರಾಯಾ, ಸಂಗತೀಲೆ, ಕತ್ತಲ್ಯಾಗೇದ."

ಅವನು ಹಿಂದಿನಿಂದ ಬರುತ್ತಿದ್ದ. ನಾನು ಅವನಿಗಾಗಿ ಕಾಯದೇ ಸರಸರನೇ ಮುಂದು ವರಿದೆ. ಆ ಹಾಲಿನಂತಹ ಬೆಳದಿಂಗಳಲ್ಲಿ ನಿನ್ನೆ ಗಿಂತಲೂ ರಮ್ಯವಾಗಿ ಕಾಣುತ್ತಿತ್ತು ಆ ಸ್ಥಳ. ನೀರವವಾಗಿ ನಿಂತ ಆ ಆಲದ ಮರ, ದಂತ ದಲ್ಲಿ ಮಾಡಿದಂತಿದ್ದ ಪುಟ್ಟ ಜೋಡು ಮಂದಿರ ಗಳು, ಏನೋ ಗೂಢವನ್ನು ಮಡಿಲಲ್ಲಿ ಕಟ್ಟಿ ಕೊಂಡು ನಿಂತಂತಿದ್ದ ಆ ಮಾವಿನ ತೋಪು–ಎಲ್ಲ ಕನಸಿನ ಲೋಕದಲ್ಲಿ ವಿಹರಿಸುತ್ತಿದ್ದಂತಿತ್ತು.

ದೊಡ್ಡ ಗುಡಿಯಲ್ಲಿ ಕಗ್ಗತ್ತಲೆಯಿತ್ತು. ಕೈಯಲ್ಲಿ ಟಾರ್ಚ್ ಇದ್ದದ್ದರಿಂದ ಒಳಗೆ ನೋಡ ಲೇನೂ ಕಷ್ಟವಾಗಲಿಲ್ಲ ನನಗೆ. ರಸ್ತೆಯಿಂದ ಕಂಡುದಕ್ಕಿಂತ ತುಂಬ ವಿಶಾಲವಾಗಿತ್ತು ದೇವಾ ಲಯ. ಗರ್ಭಗುಡಿ ಇನ್ನೂ ಗಟ್ಟಿಮುಟ್ಟಾಗಿತ್ತು. ಎಲ್ಲಿಯೂ ಬಾಗಿಲುಗಳಿರಲಿಲ್ಲ. ಕೇವಲ ಬೋಳು ಕಮಾನುಗಳು ನಿಂತಿದ್ದವು. ಹಿಂದಿನ ಕಾಲದಲ್ಲಿ ವಿಶಾಲವಾದ ಪೌಳಿಯಿದ್ದಿರಬೇಕು ಎಂದು ಅಲ್ಲಿ ಇಲ್ಲಿ ಉಳಿದಿದ್ದ ಗೋಡೆಯ ಅವಶೇಷಗಳಿಂದ–ತಿಳಿದುಬರುತ್ತಿತ್ತು, ಈಗ ಕೇವಲ ದೇವ ಸ್ಥಾನದ ಕಟ್ಟೆ ಉಳಿದಿತ್ತು; ಭಾವಣಿ ಬಿದ್ದು ಹೋಗಿತ್ತು. ಒಳಗೆ, ಹೊರಗೆ ಎಲ್ಲ ಸ್ವಚ್ಛವಾಗಿ ದ್ದುದನ್ನು ನೋಡಿ ಈಗಲೂ ಪೂಜೆ ನಡೆ ಯುತ್ತಿರಬೇಕು ಇಲ್ಲಿ ಎಂದುಕೊಂಡೆ.

ಹಾಗೆಯೇ ಮುಂದೆ ಸಾಗಿದೆ. ಆಲದ ಮರದ

ಕೆಳಗೆ ಕತ್ತಲಲ್ಲಿ ಹೋಗುತ್ತಿರುವಂತೆ ಒಮ್ಮೆಲೇ ಜೋರಾಗಿ ಗಾಳಿ ಬೀಸಿ ಮೈ ನಡುಗಿದಂತಾಯಿತು. ಸ್ವಲ್ಪ ಹೆದರಿಕೆಯೂ ಆಯಿತು. ಹಿಂದೆ ತಿರುಗಿ ನೋಡಿದೆ. ಗುಡಿಯ ಆಚೆಯಿಂದ ಸಿದ್ದಣ್ಣ ಕೂಗುತ್ತಿದ್ದ. "ಅಕ್ಕಾರs, ಅಲ್ಲಿ ಯಾನಿಲ್ಲ, ಬರ್ರೀ ಇನ್ನಾ ತಿರಗಿ..." ಎಂದು. ಅವನು ಹಿಂದೆ ಇದ್ದನೆಂಬ ಧೈರ್ಯದಿಂದ ಮುಂದೆ ಸಾಗಿದೆ. ಆ ಜೋಡಿ ಗುಡಿಗಳನ್ನು ನೋಡದೇ ತಿರುಗುವದು ನನಗೆ ಅಸಾಧ್ಯವಾಗಿತ್ತು. ಲೋಹಚುಂಬಕದಂತೆ ಅವು ನನ್ನನ್ನು ತಮ್ಮೆಡೆಗೆ ಸೆಳೆಯುತ್ತಿದ್ದವು. ಬೆಳದಿಂಗಳಿನಲ್ಲಿ ವಿಹರಿಸಲು ಬಂದ ಪ್ರೇಮಿಗಳಂತೆ ಶಾಂತ, ತೃಪ್ತ ಸಮಾಧಿಯಲ್ಲಿ ಕುಳಿತಿದ್ದವು ಅವೆರಡೂ ಆ ಹಳ್ಳದ ದಂಡೆಯ ಮೇಲೆ.

ಹತ್ತಿರ ಹೋಗಿ ಅವುಗಳ ಮೇಲೆ ದೀಪವನ್ನಾಡಿಸಿದಾಗ ನನಗೆ ಅರಿವಾಯಿತು- ಅವು ಎಲ್ಲ ಗುಡಿಗಳಂತಿಲ್ಲ ಎಂದು. ನಾನು ಮಂತ್ರ ಮುಗ್ಧಳಾಗಿ ಅವನ್ನೇ ನೋಡುತ್ತ ನಿಂತೆ. ಹೊರಗಿನಿಂದ ನೋಡಲು ಎರಡನ್ನೂ ಒಂದೇ ತೆರನಾಗಿ ಗುಡಿಯ ಮಾದರಿಯಲ್ಲೇ ಕಟ್ಟಲಾಗಿತ್ತು. ಚಿಕ್ಕ ಗುಡಿಗಳು. ಒಬ್ಬರು, ಹೆಚ್ಚೆಂದರೆ ಇಬ್ಬರು ಮಾತ್ರ, ಒಳಗಿರುವಷ್ಟು ಜಾಗವಿತ್ತು ಎರಡರಲ್ಲೂ. ಒಳಗೆ ಯಾವ ದೇವತೆಯ ಮೂರ್ತಿಗಳೂ ಇರಲಿಲ್ಲ. ಎರಡರಲ್ಲಿಯೂ ಒಂದೊಂದು ನುಣ್ಣಗಿನ ಕಲ್ಲನ್ನಿಟ್ಟಿದ್ದರು. ಎರಡರ ಮೇಲೆಯೂ ಹೂಗಳಿದ್ದವು. ನಾನು ಮೂಕವಿಸ್ಮಿತಳಾಗಿ ಹೊರಬಂದೆ. ಅವುಗಳ ಬಗ್ಗೆ ವಿಚಾರ ಮಾಡುತ್ತ ಅಲ್ಲಿಯೇ ಹಾಸುಗಲ್ಲೊಂದರ ಮೇಲೆ ಕ್ಷಣ ಕಾಲ ಕುಳಿತೆ. ಬಿಸಿಲಲ್ಲಿ ಪ್ರವಾಸ ಮಾಡಿ ಕಾಯ್ದಿದ್ದ ನನ್ನ ಮೈಕೈಗಳಿಗೆ ಹಳ್ಳದ ದಂಡೆಯ ಕಲ್ಲಿನ ತಣಿವು ಹಿತವೆನಿಸಿತು. ಹಾಗೆಯೇ ಒರಗಿ ಕಲ್ಲಿಗೆ ಕೆನ್ನೆಯನ್ನೊತ್ತಿದೆ. ದಣಿದ ಕಣ್ಣವೆ ತಾವಾಗಿಯೇ ಒಂದು ಕ್ಷಣ ಮುಚ್ಚಿಕೊಂಡವು.

ಒಮ್ಮೆಲೇ ಎಲ್ಲಿಂದಲೋ ಎತ್ತುಗಳ ಕೊರಳಿನ ಗಂಟೆಗಳ ಕಿಣಿಕಿಣಿ ನಾದ ಕೇಳಿಬಂತು. ಇದೇ ಮಾರ್ಗವಾಗಿ ಒಂಟಿ ಬಂಡಿಯೊಂದು ಹೊರಟಿತ್ತು. ಬಂಡಿಯಲ್ಲಿ ನನ್ನ ಬದಿಗೆ ಅವ್ವ ತೂಕಡಿಸುತ್ತ ಕುಳಿತಿದ್ದಳು, ಗಾಡಿ ಹೊಡೆಯುವ ಸಿದ್ದ ಸಣ್ಣದಾಗಿ ಹಾಡೊಂದನ್ನೇನೋ ಗುಣುಗುಣಿಸುತ್ತಿದ್ದ. ಸುತ್ತಲೂ ಹಿಟ್ಟು ಚೆಲ್ಲಿದಂತಹ ಬೆಳದಿಂಗಳು. ಕನಸಿನ ಲೋಕದಲ್ಲಿ ಪ್ರವಾಸ ಮಾಡುತ್ತಿದ್ದಂತೆನಿಸಿತ್ತು ನನಗೆ.

ನಮ್ಮ ಬಿಳಿಯ ಜೋಡೆತ್ತುಗಳು ಕುದುರೆಗಳಂತೆ ಓಡುತ್ತಿದ್ದವು. ಆದರೂ ಸಿದ್ದ ಅವುಗಳನ್ನು ಇನ್ನೂ ವೇಗವಾಗಿ ಓಡಲು ಒತ್ತಾಯಿಸುತ್ತಿದ್ದುದನ್ನು ಕಂಡು ತಡೆಯಲಾರದೇ ನುಡಿದೆ- "ಯಾತಕ ಹೊಡಿತೀಯೋ, ಸಿದ್ದಣ್ಣಾ? ಹೋಗ್ಲಿ ಬಿಡಲಾ, ಸಾವಕಾಸ."

"ಯವ್ವಾ, ಆಗ್ಲೇ ಮನ್ಯಾಗಿರಬೇಕಾಗಿತ್ತೆವ್ವಾ, ಈಟು ತಡಾ ಆತು. ಗೌಡ್ರು, ನನಗ ಸಿಟ್ಟ ಮಾಡ್ತಾರು, ನಿಮಗೇನ..." ಇನ್ನೂ ಅವನ ಮಾತು ಮುಗಿದಿರಲಿಲ್ಲ, ಧಡಾರನೇ ಏನೋ ಸದ್ದಾಯಿತು. ಗಾಡಿ ಒಂದೆಡೆಗೆ ಹೊರಳಿ ಬಿಟ್ಟಿತ್ತು. ಎತ್ತೊಂದು ಮುಗ್ಗರಿಸಿ ಬಿದ್ದಿರಬೇಕು. ಗಾಬರಿಯಲ್ಲಿ ನನ್ನ ಬಾಯಿಂದ ಒಂದು ನಿಮಿಷ ದನಿಯೇ ಹೊರಡಲಿಲ್ಲ. ಅಷ್ಟರಲ್ಲಿ ಅವ್ವ ನರಳಿದ ದನಿ ಕೇಳಿತು- "ಯವ್ವಾs..." ಕಳವಳಗೊಂಡು ನಾನು ಕೇಳಿದೆ- "ಯವ್ವಾs; ಏನಾತಬೇ...?"

"ಏನಿಲ್ಲೇಳ, ಬೆನ್ನಿಗೆ ತಟಗ ಬಡಿತ...ನಿನಗೆಲ್ಲೆ ಹತ್ತಿಲ್ಲ ಹೌಂದಲ್ಲs ಯವ್ವಾ......"

"ಇಲ್ಲೆವ್ವ, ನಂಗೇನ ಪೆಟ್ಟ ಹತ್ತಿಲ್ಲ, ನಾನ ಬಾಜೂಕ್ಕ ಗಡಾನs ಹಿಡಕಂಡೆ..."

ಸಿದ್ದ ಎತ್ತನ್ನು ವಾಚಾನುಗೋಚರವಾಗಿ ಬಯ್ಯುತ್ತ ಕೆಳಗಿಳಿದಿದ್ದ.

"ಮದಲ ಅದರ ಕೊಳ್ಳ ಬಿಚ್ಚಿ ಏನಾಗೇತಿ ನೋಡೋ, ಸಿದ್ದಾ..." ಅವ್ವ ಕೂಗಿ ಹೇಳಿದಳು.

"ಹೂಂನ್ರಿ ಯವ್ವಾ, ಅದs ಮಾಡಲಾಕ

ಹತ್ತೀನ್ರಿ."

"ಎಲ್ಲಿ ಮಟಾ ಬಂದೀವೋ ಈಗಾ?"

"ಈಸ್ವರಪ್ಪನ ಗುಡೀ ತಾವ ಬಂದೀದೀವ ಯವ್ವಾ...ಇನ್ನಾ ಹರದಾರಿ ಅsಟ ದಾರಿ ಐತಿ..." ಚಿಂತಿತ ಸ್ವರದಲ್ಲಿ ಅವನು ಕೇಳಿದ— "ಇದೇನ ಈಗs ಎದ್ದು ನಡಿಯಾಕಿಲ್ಲ, ಕಾಲs ಮುರಕೊಂಡಂಗ ಕಾಣತೈತಿ. ಹ್ಯಾಂಗ ಮಾಡೂದ ಎವ್ವಾ...?"

ಅವನ ಮಾತು ಮುಗಿಯುತ್ತಿರುವಂತೆ ಗುಡಿಯ ಕಡೆಯಿಂದ ದೀಪ ಹಿಡಿದುಕೊಂಡು ಯಾರೋ ನಮ್ಮೆಡೆಗೆ ಬರುತ್ತಿರುವುದು ಕಾಣಿಸಿತು. "ಯಾರ್ರೆಪೋ ಅಲ್ಲೆ...?" ಸಿದ್ದ ಕೂಗಿಕೊಂಡ. ಅವರಲ್ಲಿ ಒಬ್ಬ ಮಾರ್ದನಿ ಕೊಟ್ಟು ನಾವಿದ್ದಲ್ಲಿ ಓಡುತ್ತ ಬಂದ. ಸಿದ್ದನಿಂದ ಸುದ್ದಿಯನ್ನೆಲ್ಲ ಅರಿತು ತಿರುಗಿ ಹೋಗಿ ತುಸುವೇ ದೂರದಲ್ಲಿ ನಿಂತಿದ್ದ ಇನ್ನೊಬ್ಬನಿಗೆ ಅವನು ಹೇಳುತ್ತಿದ್ದುದು ಕೇಳಿಸಿತು— "ಹೊಳೀಹಳ್ಳಿ ಗೌಡ್ರು ಗಾಡೀರಿ, ಒಡ್ಯಾರs. ಗಾಡ್ಯಾಗ ಗೌಡತ್ಯಾರ, ಅವರ ಮಗಳ ಅದಾರಂತ್ರೀ. ಎತ್ತು ಬಿದ್ದು ಕಾಲ ಮುರಕೊಂಡೈತೇನೋ, ಗೌಡತ್ಯಾರಗೂ ಪೆಟ್ಟ ಬಿದ್ದಂಗ ಕಾಣತೈತ್ರಿ."

ಮರುಕ್ಷಣದಲ್ಲಿ ಸಿದ್ದನೊಂದಿಗೆ ಅವರಿಬ್ಬರೂ ಗಾಡಿಯ ಹಿಂದೆ ಬಂದಿದ್ದರು. ದೀಪ ಹಿಡಿದ ಮನುಷ್ಯ ಸಿದ್ದನಿಗೆ ಹೇಳುತ್ತಿದ್ದ. "ಇವರs ನಮ್ಮ ಸಣಗೌಡರ, ಕುರಬರ ದಡ್ಡೀ ಗೌಡ್ರು ಮಗಾ-ಗೌಡ್ರು ಬಳಗಾ ಮದಿವೀಗೆ ಹೊಂಟೈತಿ. ನಾಳೆ ಚಂಜೀ ಕಡೀ ಈ ನಮ್ಮ ಸಣಗೌಡ್ರು ಮದಿವೈತಿ. ಇಂದ ರಾತ್ರೀ ಗುಡ್ಯಾಗ ವಸ್ತೀ ಹಾಕೇವಿ ನಮ್ಮ ಜತೀನೂ ಹೆಣಮಕ್ಕಳದ್ದಾರು, ಗೌಡತ್ಯಾರನ ಕರಕೊಂಡು ನಡೀ ಅಲ್ಲೇ...ಧಣೇರs, ಜರಾs ದೀಪಾ ತೋರಸರಿ ಹೆಣಮಕ್ಕಳನ ಇಳಸ್ಕೊಂತೀವಿ..."

ದೀಪವನ್ನೆತ್ತಿ ಅವರ ಸಣ್ಣ ಗೌಡ ಮುಂದೆ ಬಂದ. ದೀಪದ ಬೆಳಕಿನಲ್ಲಿ ಅವನ ದೃಷ್ಟಿ ನನ್ನ ಮೇಲಿದ್ದುದರ ಅರಿವಾಗಿ ನಾನೂ ಕಣ್ಣೆತ್ತಿದ್ದೆ. ನಾಲ್ಕು ಕಣ್ಣುಗಳೂ ಕೂಡಿದವು. ಆ ಕ್ಷಣದಲ್ಲಿ ಏನು ಮಾಟವಿತ್ತೋ, ಆ ಕಣ್ಣುಗಳಲ್ಲಿ ಏನು ಮೋಡಿಯಿತ್ತೋ – ನನ್ನ ಕಣ್ಣುಗಳು ಅಲ್ಲಿಯೇ ಕೀಲಿಸಿದ್ದವು ಒಂದು ಕ್ಷಣ. ಆ ಕ್ಷಣದಲ್ಲಿ ಯುಗಯುಗಾಂತರಗಳು ಗತಿಸಿದವೆನಿಸಿತ್ತು. ಉಳಿದವರು ನನ್ನ ತಾಯಿಯನ್ನು ಕೆಳಗೆ ಇಳಿಸಿದ್ದರ ಅರಿವೂ ಇರಲಿಲ್ಲ ನನಗೆ. ಅವನೇ ಮುಂದೆ ಬಂದು ಕೈ ನೀಡಿದಾಗ ಮಂತ್ರಮುಗ್ಧಳಂತೆ ಅವನ ಕೈ ಹಿಡಿದು ಕೆಳಗಿಳಿದಿದ್ದೆ ನಾನು. ಅವನ ಕೈ ಬೆರಳುಗಳು ಮೃದುವಾಗಿ ನನ್ನ ಕೈಯನ್ನು ಸವರಿದಾಗ ನಕ್ಷತ್ರಭರಿತ ಆಕಾಶ ನನ್ನ ತಲೆಯ ಸುತ್ತಲೂ ತಿರುಗಿದಂತೆನಿಸಿತ್ತು. ಬೆಳದಿಂಗಳಿನ ಝರಿ ನನ್ನೆದೆಯಲ್ಲಿ ಹರಿದು ಹಾಡಿದಂತೆನಿಸಿತ್ತು. ಅವನ ಬಲಭೀಮನಂಥ ತೋಳಿನ ಆಧಾರವಿರದಿದ್ದರೆ ನಾನು ಬಿದ್ದೇಬಿಡುತ್ತಿದ್ದೇನೇನೋ... "ಹಗರಕಬೇ ಯಕ್ಕಾs. ಬಿದ್ದಿಗಿದ್ದೀ..."ಎನ್ನುತ್ತ ಸಿದ್ದ ಮುಂದೆ ಬಂದಾಗಲೇ ನನಗೆ ಮೈಮೇಲೆ ಅರಿವುಮೂಡಿದ್ದು.




"ಹೆದರ್ಕೋಬೇಡಿ. ನಮ್ಮ ಸ್ನೇಹಿತರ ಮಗ ಒಬ್ರು ವರ ಅಂತ ಹೇಳಿದ್ನಲ್ಲ, ಇವ್ರೇ ಅವ್ರು."

ಅಂತೂ ಯಾವ ಯೋಗಾಯೋಗವೋ—ಅಂದು ರಾತ್ರಿ ಅವರೊಡನೆ ನಮಗೂ ಅಲ್ಲಿಯೇ ವಸತಿಯಾಯಿತು. ಕುರುಬರ ದೊಡ್ಡಿಯ ಗೌಡ, ಗೌಡತಿಯರು ನಮ್ಮನ್ನು ತುಂಬ ಆದರದಿಂದ ತಮ್ಮೊಡನೆ ಉಳಿಸಿಕೊಂಡರು. ಗೌಡರ ತಾಯಿ ತಮ್ಮ ಚೀಲದಿಂದ ಏನೋ ಒಂದು ಬೇರನ್ನು ತೆಗೆದು ತೇಯ್ದು ಅವ್ವನ ಬೆನ್ನಿಗೆ ತಿಕ್ಕಿ ಮಲಗಿಸಿದರು. ಹಾಗೆಯೇ ಅವರ ಹರಟೆಯೂ ಸಾಗಿತ್ತು.

"ಮಗಳ ಹರೇಕ್ಕ ಬಂದಾಳು...ಮದವೀ...ಗಿದವೀ ಗೊತ್ತ ಮಾಡೀರೇನ...?" ನನ್ನ ಕುರಿತಾಗಿಯೇ ಪ್ರಶ್ನೆ. ನನ್ನ ಲಕ್ಷ್ಯವೆಲ್ಲ ಹೊರಗೆ ಕಂಬದ ಮರೆಯ ಕತ್ತಲಲ್ಲಿ ಒಬ್ಬನೇ ಕುಳಿತ ಸಣ್ಣ ಗೌಡನ ಕಡೆಗೇ ಇತ್ತು. ನಮ್ಮ ಮಾತುಗಳನ್ನು ಕೇಳಲಿಕ್ಕೆಂದೇ ಅಲ್ಲಿ ಅಡಗಿ ಕುಳಿತಿದ್ದನೇನೋ...

"ಏನ ಕೇಳತಿ ಯವ್ವಾ...ಸಂದೂ ಜೀವಾ ಅದs ಚಿಂತ್ಯಾಗs ಸಣ್ಣಾಗೇತಿ ನೋಡ...ನಮ್ಮ ಗೌಡಗ ತನ್ನ ಗೌರ್ರ್ಯಾನ ಮಾಡಿಕೊಳ್ಳಾಕ ಕತೀವಳಗಿನ ರಾಜಕುಮಾರಾ ಬರಬೇಕಂತೈತಿ ನೋಡ ...ಇದೂ ಒಂದು ಹುಚವಳ್ಳಿ ಹಂಗs ಮಾಡತೈತಿ. ನಮ್ಮ ತೌರಿನ ಕಡೇನs ಸಂಬಂದಾ ಮಾಡೂಣಂತ ನನ್ನ ಮನಸಿನ್ಯಾಗೈತಿ. ಅಲ್ಲೇ ಹೋಗಿದ್ದೆವ್ವಾ. ಈಗ ಬೇಕಾದ್ಯಟು ಹೊಲಾ–ಮನೀ ಐತಿ, ಹಾಲು–ಹೈನಾ ಐತಿ. ಮಾರಾಣಿ ಇದ್ದಾಂಗಿರತಾಳು ಮಾಡಕಂಡರ...ಒಲ್ಲಿ ಅಂತ ಕುಂತೈತಿ ನೋಡು ಈ ಹುಡುಗಿ..."

"ಯಾಕs, ಹುಡಗೀ, ಬ್ಯಾಡ್ಯಾಕಂತೀ ಮತ್ತs?"

"ಅಂವಾ ನೋಡಲಾಕ ಚಂದಿಲ್ಲ ಅಂತೆವ್ವಾ ...ಏನ ಹೇಳ್ತೀ ಹೇಳು ಇದಕ..."...ನಾನು ಉತ್ತರ ಕೊಡದಿದ್ದಾಗ ಅವ್ವ ತಾನೇ ಉತ್ತರವಿತ್ತಳು...

"ಗಂಡಿನ ಚಂದಾ ಯಾರು ನೋಡ್ತಾರ ಹೇಳ ನೀನs..."

ನನ್ನ ಕಣ್ಣುಗಳು ನನಗರಿವಿಲ್ಲದೆಯೇ ಹೊರಗೆ ಮರೆಯಲ್ಲಿದ್ದ ಸಣ್ಣ ಗೌಡನ ಕಡೆಗೆ ಹೊರಳಿದ್ದವು. ಅವನಿಗೂ ನಮ್ಮ ಅವ್ವನ ಮಾತು ಕೇಳಿಸಿತ್ತೇನೊ, ನಸುನಗುತ್ತ ನನ್ನೆಡೆಗೆ ನೋಡುತ್ತಿದ್ದ. ಮರುಕ್ಷಣದಲ್ಲಿ ನಾಚಿಕೆಯಿಂದ ನನ್ನ ತಲೆ ಬಾಗಿತ್ತು. ನನ್ನ ಕಂಗಳಲ್ಲಿ ಬಹುಶಃ ಅವನಿಗೆ ಬೇಕಾದ ಉತ್ತರ ಸಿಕ್ಕಿರಬೇಕು...ಅವನೂ ಆಮೇಲೆ ಅಲ್ಲಿಂದೆದ್ದು ಗಂಡಸರೆಲ್ಲ ಹರಟೆ ಹೊಡೆಯುತ್ತ ಕುಳಿತ ಕಡೆಗೆ ಹೊರಟು ಹೋದ.

ಮುಂದೆ ಸ್ವಲ್ಪ ಸಮಯದಲ್ಲಿಯೇ ಎಲ್ಲರಿಗೂ ನಿದ್ದೆ ಹತ್ತಿತ್ತು. ಎಲ್ಲೆಡೆಗೂ ನೀರವತೆ ವ್ಯಾಪಿಸಿತ್ತು. ದಿನವಿಡೀ ಪ್ರವಾಸ ಮಾಡಿ ದಣಿದಿತ್ತು ಜನವೆಲ್ಲ. ಎಲ್ಲೆಡೆಯಿಂದಲೂ ಗೊರಕೆಗಳ ಸಪ್ಪಳ ಕೇಳಿ ಬರುತ್ತಿತ್ತು. ನನಗೆ ಮಾತ್ರ ಏನು ಮಾಡಿದರೂ ನಿದ್ರೆ ಬರಲಿಲ್ಲ. ಮನಸ್ಸಿನಲ್ಲೇನೋ ಒಂದು ಉದ್ವೇಗ ತುಂಬಿದಂತಿತ್ತು. ಎಷ್ಟು ಹೊರಳಾಡಿದರೂ ನಿದ್ದೆ ಬರದಿದ್ದಾಗ ಮೆಲ್ಲನೆ ಎದ್ದು ಗುಡಿಯ ಹಿಂದಿನ ಬಾಗಿಲಿನಿಂದ ಹೊರಬಂದೆ- ಕಟ್ಟೆಯ ಮೇಲೆ ಗಾಳಿಗೆ ಮೈಯೊಡ್ಡಿ ಕೂಡಲೆಂದು ಹೊರಗೆ ಬಂದಾಗ ಒಮ್ಮೆಲೆ ಹಳ್ಳದ ದಂಡೆಯ ಬಂಡೆಯೊಂದರ ಮೇಲೆ ನಿಂತ ಆಕೃತಿಯ ಕಡೆಗೆ ಲಕ್ಷ್ಯ ಹೋಯಿತು... ಸಣ್ಣ ಗೌಡ...ವೀರಭದ್ರ... ಹೌದು, ಅವನೇ ಅದೇ ಹೊತ್ತಿಗೆ... ಅವನೂ ನನ್ನನ್ನು ಕಂಡಿರಬೇಕು, ಮೆಲ್ಲಗೆ ನಡೆದು ನನ್ನೆಡೆಗೆ ಬಂದ. ಬಂದು ಮಾರು ದೂರದಿಂದ ತೋಳು ನೀಡಿ ಮೆಲ್ಲಗೆ "ಗೌರಾ..." ಎಂದು ಕರೆದಾಗ ನಾನು ನಾನಾಗಿ ಉಳಿಯಲಿಲ್ಲ. ಗಾಳಿಯೊಡನೆ ಗಾಳಿಯಾಗಿ ತಿಂಗಳ ಬೆಳಕಿನಲ್ಲಿ ತೇಲಿ ಹೋದೆ ಅವನೆಡೆಗೆ.

ಅಂದು ಜೋಡು ಹಕ್ಕಿಗಳಂತೆ ಎಷ್ಟು ಹೊತ್ತಿನವರೆಗೆ ಆ ಕಾಡುಮೇಡುಗಳಲ್ಲಿ ಅಲೆದಿದ್ದೆವೊ. ಬೆಳಗಾಗಿ ಎಲ್ಲರೂ ಏಳುವ ಮೊದಲು ತಿರುಗಿ ಬಂದು ಗುಡಿಯನ್ನು ಸೇರಿದಾಗ ನನ್ನ ಮೈಮನ ಅವನಿಂದ ತುಂಬಿ ಹೋಗಿತ್ತು. ನನ್ನ ಜಗತ್ತಿನಲ್ಲಿ ಅಂದು ಅವನಲ್ಲದೆ ಬೇರೆ ಯಾರೂ ಉಳಿದಿರಲಿಲ್ಲ.

ಬರುವಾಗ ಅವನು ಉಸುರಿದ್ದ- "ಸಂಜೀಕಡಸೆ ಬಾ, ನಾ ಊರ ಅಗಸೀ ಹಂತ್ಯಾಕ ನಿಂತಿರತೇನ, ಮರೀಬ್ಯಾಡಾ"

ನಾನು ಕೇಳಿದ್ದೆ- "ಐ. ನಿನ್ನ ಮದಿವ್ಯೆತೆಲ್ಲ ಸಂಜೀಕಡಸೆ?"

ಅವನು ನನ್ನ ಕೈಹಿಡಿದು ಹತ್ತಿರಕ್ಕೆಳೆದು ಕೊಳ್ಳುತ್ತ ಹೇಳಿದ್ದ "ಇನ್ನೇನ ಆ ಮದಿವೀಗೆ ಅರ್ತ ಐತೇನ, ಬಿಡ.."

ಬೆಳಗಾದಾಗ ಗೌಡರ ಪರಿವಾರದವರು ಗಾಡಿ-ಗಳನ್ನು ಕಟ್ಟಿದರು. ಅವರದೇ ಒಂದು ಗಾಡಿ-ಯಲ್ಲಿ ನಮ್ಮನ್ನು ಮೊದಲು ನಮ್ಮ ಊರಿಗೆ ಕಳುಹಿಸಿಕೊಟ್ಟರು. ಹೊರಡುವಾಗ ಸಣ್ಣಗೌಡನ ಸುಳಿವು ಮಾತ್ರ ಎಲ್ಲಿಯೂ ಕಾಣಲಿಲ್ಲ.

ಅಂದು ಮಧ್ಯಾಹ್ನದ ಮೇಲೆ ಕಾಲು ಮುರಿದ ಎತ್ತನ್ನು ಬೇರೊಂದು ಗಾಡಿಯಲ್ಲಿ ಹೊತ್ತು ತಂದ ಸಿದ್ದ ಅವ್ವನಿಗೆ ಹೇಳುತ್ತಿದ್ದುದು ಕೇಳಿ-ಸಿತ್ತು- "ಯವ್ವಾs... ಏನ ಇಚಿತ್ರ ಆತ ಅಂದ್ರಿ.. ಇಂದ ಆ ಸಣಗೌಡನ ಮದವಿ ಅಂತಿದ್ರುಲ್ರಿ ಯವ್ವಾ.. ಅಂವಾ ಮುಂಜಾಲಿಂದ ನಾಪತ್ತೆ ಆಗಿಬಿಟ್ಟಾನಂತೆವ್ವಾ... ದೊಡ್ಡಗೌಡ್ರು ಬೆಂಕಿ ಬೆಂಕಿ ಆಗಿದ್ರು ನೋಡೆವ್ವಾ... ಮದಿವೀ ಆಗಾಕ ಮನಸಿಲ್ಲಾದ್ರು ಮದಲs ಒಲ್ಲೆ ಅನಬೇಕೋ ಬ್ಯಾಡೋ ಹೇಳವ್ವಾ... ಈಗ ಐನ ಹೊತ್ತಿನಾಗ ಹಿಂಗ ಓಡಿಹೋದ್ರs... ಹಿರೇರ ಮೂಗ ಕೊಯ್ದಂಗ ಆಕ್ಕೈತೋ ಇಲ್ಲೋ?"

ನಾನವನ ಮಾತು ಕೇಳಿ ಮನದಲ್ಲಿಯೇ ಸಂತಸಗೊಂಡಿದ್ದೆ. ಅಂದು ಅವನು ನನಗಾಗಿ ತನ್ನವರೆಲ್ಲರಿಂದ ದೂರವಾಗಿದ್ದ, ನಾನೂ ನನ್ನ ಜಗತ್ತಿನಿಂದ ದೂರವಾಗಿದ್ದೆ. ಅಂದಿನಿಂದ ನಾವು ಎಲ್ಲರ ಕಣ್ಣು ತಪ್ಪಿಸಿ ಸಂಧಿ ಸಿಕ್ಕಿದಾಗ-ಲೆಲ್ಲ ಅದೇ ಸ್ಥಳದಲ್ಲಿ ಸಂಧಿಸುತ್ತಿದ್ದೆವು. ಆ ಗುಡಿ, ಹಳ್ಳ, ಬಂಡೆಗಳ, ಗಿಡಮರಗಳ ನಡುವೆ ಹುಟ್ಟಿದ ನಮ್ಮ ಪ್ರಣಯದ ಸಸಿ ಬೆಳೆದು ಮರವಾಗಿತ್ತು. ಹಿರಿಯರ ಕಣ್ಣಿನ ಕಿಚ್ಚು ತಾಗಿರಲಿಲ್ಲ ಇನ್ನೂ ಅದಕ್ಕೆ. ಅವನ ಅಪ್ಪ ಅವನಿಗಾಗಿ ಎಲ್ಲೆಲ್ಲಿಯೂ ಜನವನ್ನಟ್ಟಿ-ದ್ದರು. ಅವನ ಪತ್ನಿಯಾಗಲಿದ್ದ ಹುಡುಗಿಯ ಅಣ್ಣಂದಿರು ತಮ್ಮ ತಂಗಿಗಾದ ಅವಮಾನದ ಸೇಡನ್ನು ತೀರಿಸಲೆಂದು ಅವನನ್ನು ಹುಡುಕು ತ್ತಿದ್ದರು. ಅವರೆಲ್ಲರ ಕಣ್ಣು ತಪ್ಪಿಸಿ ಅವನು ಎಲ್ಲಿ ಹೇಗೆ ತಲೆಮರೆಸಿಕೊಂಡಿದ್ದನೋ. ಆ ದಿನಗಳಲ್ಲಿ ನನ್ನ ತಂದೆ ಹೊಲದ ಕೆಲಸಗಳಲ್ಲಿ ತುಂಬ ವ್ಯಸ್ತರಾಗಿದ್ದರು. ಸರಿಯಾಗಿ ಮನೆಗೂ ಬರುತ್ತಿರಲಿಲ್ಲ. ಬಂದಾಗಲೂ ಕುಳಿತು ಮಾತ-ನಾಡುವಷ್ಟು ವ್ಯವಧಾನವಿರಲಿಲ್ಲ. ಒಂದು ಸಲ ಕಾಲು ಕಣಕ್ಕೆ ಬಂದು ಬಿದ್ದಮೇಲೆ ಅವರು ನಿರಾತಂಕವಾಗಿದ್ದಾಗ ಮಾತನಾಡಬೇಕು, ಅವರಿಗೆ ನನ್ನ ಮನದಿಂಗಿತವನ್ನು ಹೇಳಬೇಕು ಎಂದು ಯೋಚಿಸಿದ್ದೆ ನಾನು. ಅವರು ಇದುವರೆಗೆ ನಾನು ಕೇಳಿದ್ದನ್ನೆಂದೂ ಇಲ್ಲವೆಂದಿರಲಿಲ್ಲ. ಉಳಿದವರ ವಿಷಯದಲ್ಲಿ ಉಗ್ರಮೂರ್ತಿಯಾದ ಅವರು ನನ್ನೊಡನೆ ಬೆಣ್ಣೆಯಷ್ಟು ಮೃದು. ನನ್ನ



"ಏನಿಲ್ಲ-ಅನ್ನದಲ್ಲಿ ಸಿಗೋ ಕೂದಲು ಯಾರದು ಅನ್ನೋದರ ಬಗ್ಗೆ ಇಬ್ರಲ್ಲೂ ಚರ್ಚೆ ಆಯ್ತು, ಅಷ್ಟೆ."

ಹೃದಯದ ಹಂಬಲವನ್ನರಿತೊಡನೆ ನಮ್ಮಿಬ್ಬರ ಮದುವೆಗೆ ಅವರು ಒಪ್ಪಿಯೇ ಒಪ್ಪುತ್ತಾರೆ, ಆಮೇಲೆ ಅವ್ವನನ್ನು ಒಪ್ಪಿಸುವದೇನೂ ದೊಡ್ಡ ಮಾತಲ್ಲ ಎಂದು ನನಗೆ ವಿಶ್ವಾಸವಿತ್ತು.

ಆದರೆ ಆದದ್ದೇ ಬೇರೆ. ಹೊಲಗಳಲ್ಲಿ ಕೆಲಸ ನಡೆದಾಗಲೇ ಒಂದು ದಿನ ಸಂಜೆಯ ಹೊತ್ತಿನಲ್ಲಿ ತಂದೆ ಮನೆಗೆ ಬಂದರು, ಅಂದು ಬಂದಾರೆಂಬ ನಿರೀಕ್ಷೆಯೂ ಇರಲಿಲ್ಲ ನಮಗೆ. ಬರುವಾಗಲೇ ಸಿಟ್ಟಿನಿಂದ ಉಗ್ರಾವತಾರ ತಾಳಿಯೇ ಬಂದಿದ್ದರು ಹೊರಗಿನ ಕೋಣೆಯಲ್ಲಿದ್ದ ನನ್ನನ್ನು ಮಾತ ಆಡಿಸದೆ ಒಳಗೆ ಹೋದಾಗ ನನ್ನೆದೆ ಶಂಕೆ-ಯಿಂದ ನಡುಗಿತ್ತು. ಮರುಕ್ಷಣದಲ್ಲಿ ಒಳಗಿನಿಂದ ಅವರ ಒದರಾಟ ಕೇಳಿಬಂತು.– "ನಿನಗ ಮಗಳ ಮ್ಯಾಗ ಈಟ ನಿಗಾ ಇಡಲಿಕ್ಕಾಗಲಿಲ್ಲಾ? ಆಕೀ ಸಣ್ಣ ಹುಡಗಿ, ತಿಳೀಲಿಲ್ಲಾ, ನಿನಗ ಬುದ್ದಿ ಇರಬಾರದು? ಆ ಕುರುಬರವನ ಮಗನ ಜೋಡಿ ಹೋಗಲಿಕ್ಕೆ ಹ್ಯಾಂಗ ಬಿಟ್ಟಿ ಆಕೀನ್ನ... ನನ್ನ ಮಗಳ ಮ್ಯಾಗ ಕಣ್ಣು ಹಾಕ್ಯಾನs ಆ...ಮಗಾ.. ಅಂವನ ಜೀವಂತ ಉಳಸಾಕಿಲ್ಲ...... ಏನಂತ ತಿಳದಾನ..."

ಹೊರಗೆ ನಿಂತ ನನ್ನ ಎದೆ ಕಂಪಿಸಿತು. ವೀರಭದ್ರನನ್ನು ಎಚ್ಚರಿಸಬೇಕು ಎಂದು ಮೈ-ಮೇಲೆ ಪರಿವೆಯಿಲ್ಲದೆ ಓಡಿದೆ. ಎಂದಿನ ಸ್ಥಳದಲ್ಲಿ ನಿಶ್ಚಿಂತನಾಗಿ ನನಗಾಗಿ ಕಾಯುತ್ತಿದ್ದ ಅವನು. ನಾನು ಗಾಬರಿಯಲ್ಲಿ ಹೇಳಿದ್ದನ್ನು ಕೇಳಿ ನನ್ನನ್ನು ಸಮಾಧಾನಪಡಿಸುತ್ತ ಹೇಳಿದ- "ನೀ ಏನ ಹೆದರಬ್ಯಾಡಾ ಗೌರಾs... ನನಗ ಗೊತ್ತs ಇತ್ತೇಳ ಇದ ಹಿಂಗs ಆಕ್ಕೈತಿ ಅಂತ. ನಿಮ್ಮ ಗೌಡಾ ನಮ್ಮ ಸುದ್ದಿ ತಿಳಿದ ಬೆಂಕಿ ಬೆಂಕಿ ಆಗ್ಯಾನು ಅಂತ ನಿನ್ನೇ ಲಕ್ಷ್ಮ್ಯಾ ಹೇಳಿದ್ದಾ. ಅದಕs ನಾs ಇಂದ ಎಲ್ಲಾ ವೆವಸ್ತಾ ಮಾಡಿ-ಕೊಂಡs ಬಂದೇನಿ. ಲಕ್ಷ್ಮ್ಯಾ ಈಗ ಗಾಡೀ ತರತಾನು- ನಾವೆಲ್ಲಾರ್s ದೂರ ಹೋಗಿಬಿಡಾ-ಣಂತ– ನೀ ಹೆದರಬ್ಯಾಡಾs... ನಾ ಜೀವ ದಿಂದಿರೂ ಮಟಾ ಯಾ ಮಗ್ಗ ನಮ್ಮನ ದೂರ ಮಾಡೂ ಕುವ್ವತ್ತೈತಿ ನೋಡ್ತೇನಿ..."

ಅವನ ಧ್ವನಿಯನ್ನು ಕೇಳಿದ ಮೇಲೆ, ಅವನ ತೋಳುಗಳ ಆಸರೆ ದೊರೆತ ಮೇಲೆ ನನಗೆ ಯಾವ ಹೆದರಿಕೆಯೂ ಇರಲಿಲ್ಲ. ಹಾಗೆಯೇ ಹೊರಗಿನ ಜಗತ್ತನ್ನು ಮರೆತು ಎಷ್ಟು ಹೊತ್ತು ಆ ಗುಡಿಯಲ್ಲಿಯೇ ಕುಳಿತಿದ್ದೆವೋ ಏನೋ... ದೂರದಲ್ಲಿ ಗಾಡಿಯ, ಎತ್ತುಗಳ ಕೊರಳಿನ ಗಂಟೆಯ ದನಿ ಕೇಳಿ ಎಚ್ಚತ್ತೆವು.

"ನಡಿ, ಗಾಡಿ ಬಂದಂಗ ಕಾಣತೈತಿ"- ಎಂದು ನನ್ನ ಕೈ ಹಿಡಿದೆದ್ದ ವೀರಭದ್ರ. ಆ ಕತ್ತಲಲ್ಲಿ ಮೆಲ್ಲನೆ ಗುಡಿಯಿಂದ ಹೊರಬಿದ್ದು ಮಾವಿನ ತೋಪಿನಲ್ಲಿ ಹಾಯ್ದು ಬರುತ್ತಿದಂತೆ ಹಿಂದೆ ಏನೋ ಅಲುಗಿದ ಸದ್ದಾಯಿತು. ಹಿಂದಿನಿಂದ ನಾಲ್ಕಾರು ದನಿಗಳೂ ಕೇಳಿಬಂದವು. ದೂರದಲ್ಲಿ ರಸ್ತೆಯ ಮೇಲೆ ಗಾಡಿಯ ದೀಪವೂ ಕಾಣು-ತ್ತಿತ್ತು. ಗಿಡಗಳ ಮರೆಯಲ್ಲಿ ಅಡಗುತ್ತ ಆದರೆಡೆಗೆ ಸಾಗುತ್ತಿದ್ದಂತೆಯೇ ಎದುರಿನಿಂದಲೂ ನಾಲ್ಕಾರು ನೆರಳುಗಳು ನಮ್ಮೆಡೆಗೆ ನಡೆದು ಬರುತ್ತಿದ್ದುದು ಕಂಡಿತು. ನಾನು ಹೆದರಿ ವೀರಭದ್ರನ ಕೊರಳನ್ನಪ್ಪಿದೆ. ಮರುಕ್ಷಣದಲ್ಲಿ ತಲೆಯ ಮೇಲೇನೋ ದೊಪ್ಪನೆ ಬಿದ್ದಂತೆ-ಒಂದು ಕ್ಷಣ ವಿಲಕ್ಷಣ ವೇದನೆ- ಎಲ್ಲೋ ದೂರ-ದಿಂದ ದನಿಯೊಂದು "ಗೌಡ್ರ ಮಗಳನೂ ಹೊಡದೀರಲ್ಲೊ...... ಮಕ್ಕಳs?" ನಂತರ ಎಲ್ಲೆಲ್ಲಿಯೂ ಮಂಜು ಮುಸುಕಿತ್ತು. ದಟ್ಟ ಪಾದ ಮಂಜು ಎಲ್ಲೆಲ್ಲಿಯೂ ಎಷ್ಟೋ ವರ್ಷಗಳವರೆಗೆ ಈಜಿದರೂ ದಾಟಲಾಗದಷ್ಟು ಮಂಜು...

ಮಂಜು ಕರಗಿ ನಾವಿಬ್ಬರೂ ಹೊರಬಂದಾಗ ಬೆಳ್ಳಗೆ ಬೆಳಗಾಗಿತ್ತು. ಜಗತ್ತೇ ಬದಲಾಗಿತ್ತು– ನಮ್ಮ ಒಳಗಿನ ಹೊರಗಿನ ಜಗತ್ತುಗಳೆರಡೂ ಬದಲಾಗಿದ್ದವು. ಎಲ್ಲೆಡೆಗೂ ಶಾಂತಿ, ನೀರವತೆ ವ್ಯಾಪಿಸಿತ್ತು. ಇಂದು ನಮಗೆ ಯಾರದೂ ಹೆದರಿಕೆಯಿರಲಿಲ್ಲ, ಇಬ್ಬರೂ ದಿನದ ಬೆಳಕಿನಲ್ಲಿ ಧೈರ್ಯವಾಗಿ ಕೈಹಿಡಿದು ನಡೆದಿದ್ದೆವು. ನೋಡ

ನೋಡುತ್ತಿರುವಂತೆಯೇ ನಮ್ಮ ಪರಿಚಿತ ಸ್ಥಳಕ್ಕೆ ಬಂದಿದ್ದೆವು. ಎಷ್ಟೋ ಸಮಯದ ಬಳಿಕ ಬಂದಿರಬೇಕು ನಾವಲ್ಲಿ– ಆ ಸ್ಥಳ ಸಹ ತುಂಬ ಬದಲಾಗಿತ್ತು. ಆ ಹಳೆಯ ಆಲದ ಮರ ಹಸಿರಾಗಿ ಮೈತುಂಬ ಎಲೆ ಹೊತ್ತು ನಿಂತಿತ್ತು. ಮಾವಿನ ತೋಪಿನಲ್ಲಿ ಕೋಗಿಲೆಯೊಂದು ಹಾಡುತ್ತಿತ್ತು.

"ಗೌರಾs, ನೋಡಲ್ಲೇ..." ವೀರಭದ್ರನ ವಿಸ್ಮಯಚಕಿತ ದನಿ ಕೇಳಿ ನಾನೂ ಅತ್ತ ತಿರುಗಿದೆ. ಮಾವಿನ ತೋಪಿನಾಚೆಗೆ ಎರಡು ಪುಟ್ಟ ಗುಡಿಗಳು! ಇದುವರೆಗೆ ಇಲ್ಲಿ ಯಾವ ಗುಡಿಗಳೂ ಇರಲಿಲ್ಲವಲ್ಲ! ಎಂದು ಅಚ್ಚರಿ ಪಡುತ್ತ ಮುಂದೆ ಹೋದೆವು. ಹತ್ತಿರ ಹೋಗಿ ನೋಡಿದರೆ ಒಳಗೆ ಮೂರ್ತಿಗಳೇನೂ ಕಾಣಲಿಲ್ಲ. ಎರಡರಲ್ಲಿಯೂ ಒಂದೊಂದು ನುಣ್ಣಗಿನ ಕಲ್ಲು. ಆಶ್ಚರ್ಯದಿಂದ ಇನ್ನೂ ಹತ್ತಿರ ಹೋಗಿ ಬಾಗಿ ನೋಡಿದರೆ ಒಂದರ ಮೇಲೆ ನನ್ನ ಹೆಸರು... ಇನ್ನೊಂದರ ಮೇಲೆ ವೀರಭದ್ರನ ಹೆಸರು...! ಅವುಗಳ ಸುತ್ತಮುತ್ತಲೂ ಗೋಡೆಯ ಮೇಲೆ ನೆಲದ ಮೇಲೆ ಬಳಪದ ತುಂಡಿನಿಂದಲೋ, ಇದ್ದಿಲು ಚೂರಿನಿಂದಲೋ ಬರೆದ ಹಲವಾರು ಹೆಸರುಗಳು! ಮನದ ಬಯಕೆಯನ್ನು ಹೇಳಿಕೊಂಡು ಹರಕೆಗಾಗಿ ಬರೆದ ನಲ್ಲ-ನಲ್ಲೆಯರ ಹೆಸರುಗಳಿವು ಎಂದು ತಿಳಿಯಲೇನೂ ತಡವಾಗಲಿಲ್ಲ ನಮಗೆ. ಒಂದು ನಿಮಿಷ ಅಚ್ಚರಿಯಿಂದ ನೋಡುತ್ತ ನಿಂತಿದ್ದೆವು ನಾವು. ಮರುಕ್ಷಣ ವೀರಭದ್ರ ಬಿದ್ದು ಬಿದ್ದು ನಗತೊಡಗಿದ. ನನಗೂ ನಮ್ಮ ಹೆಸರಿನಲ್ಲಿ ಕಟ್ಟಿದ ಆ ಗುಡಿಗಳನ್ನು ನೋಡಿ ಎಲ್ಲಿಲ್ಲದ ನಗು ಬಂತು. ನಮ್ಮ ನಗು ಅಲೆಅಲೆಯಾಗಿ ಆ ಕಾಡು ಗುಡ್ಡಗಳನ್ನೆಲ್ಲ ವ್ಯಾಪಿಸಿತ್ತು.

"ಗೌರಿ...ಗೌರಿ..." ವೀರಭದ್ರ ನನ್ನನ್ನು ಕರೆದಂತಾಗಿ ಕಣ್ಣು ತೆರೆದೆ. ಕಣ್ಣು ತೆರೆದಾಗ ಮೊದಲು ಕಂಡದ್ದು ಮುಗಿಲಿನಲ್ಲಿಯ ಚಂದ್ರ ಬಿಂಬ. "ಈಗಷ್ಟs ಬೆಳಕಿತ್ತು, ಆಗಲೇ ರಾತ್ರಿ ಹೇಗಾಯಿತು...?" ಎಂದು ಅಚ್ಚರಿಯಿಂದ ಕಣ್ಣು ತಿಕ್ಕಿಕೊಂಡು ನೋಡಿದರೆ ಕಂಡದ್ದೇ ಬೇರೆ. ನನ್ನ ಪತಿ, ಪುಟ್ಟಿ ಇಬ್ಬರೂ ನನ್ನನ್ನು ನೋಡಿ ನಗುತ್ತಿದ್ದಾರೆ! ಪುಟ್ಟಿ ತನ್ನ ಪುಟ್ಟ ಕೈಗಳಿಂದ ನನ್ನನ್ನು ಅಲ್ಲಾಡಿಸುತ್ತ ಕೇಳುತ್ತಿದ್ದಾಳೆ...... "ಅಮ್ಮಾ, ಇಲ್ಯಾಕ ಮಲಕೊಂಡೀ?" ನಾನು ಗೊಂದಲಿಸಿ ನನ್ನ ಪತಿಯ ಕಡೆಗೆ ನೋಡಿದೆ. ಅವರೂ ಹೇಳಿದರು—"ಇಷ್ಟೊತ್ತಾದರೂ ಯಾಕ ಬರಲಿಲ್ಲ ಅಂತ ಹೆದರಿ ನೋಡಲಿಕ್ಕೆ ಬಂದರs, ಬಾಯೀಸಾಹೇಬರು ನಿದ್ದೀ ಹೋಡಿಲಿಕ್ಕೆ ಹತ್ಯಾರ ಇಲ್ಲೆ ಹತ್ತs ಮಿನಿಟಿನ್ಯಾಗ ಎಷ್ಟು ಗಡದ್ದ ನಿದ್ದಿ ಹತ್ತಿತ್ತು ನಿನಗ...ನನಗೂ ಎಬ್ಬಸಲಿಕ್ಕೆ ಮನಸಾಗಲಿಲ್ಲ. ಜಾಗಾs ಛಂದ ಅದ...ನಾವೂ ಒಂದು ಐದು ಮಿನಿಟು ನೋಡ ಕೋತ ಕೂತಬಿಟ್ಟೆವಿ...ಆದರ ನೀ ಜೋರು ಜೋರಲೇ ನಕ್ಕ ಕೂಡಲೇ ಗಾಬರ್‍ಯಾಗಿ ಎಬ್ಬಿಸಿದೀವಿ...ಜಾಗಾ ಖರೇನs ಭಾಳ ಛಂದ ಅದ...ಮತ್ತೊಂದು ಸರೇ ಹುಣ್ಣಿವೀ ದಿನಾ ಬರೂಣಂತ...ಬೆಳದಿಂಗಳದಾಗಂತೂ ಬ್ಯಾರೇ ಜಗತ್ತಿಗೇ ಬಂಧಂಗನಸತsದ..."

"ಹೌದು, ಬ್ಯಾರೇ ಜಗತ್ತs ಇದು..." ನನ್ನ ಮಾತು ಕೇಳಿ ಜೋರಾಗಿ ನಕ್ಕರು ಅವರು. ನನಗರಿವಿಲ್ಲದೆಯೇ ನನ್ನ ಬಾಯಿಯಿಂದ ಹೊರ ಬಿದ್ದಿತ್ತು—"ವೀರಭದ್ರನೂ ಹೀಂಗs ನಕ್ಕ..."

"ಯಾರು...? ವೀರಭದ್ರ ಯಾರು?"—ಅವರು ಅಚ್ಚರಿಯಿಂದ ಕೇಳಿದರು.

"ನಡೀರಿ, ಕಾರಿನ್ಯಾಗ ಹೇಳತೀನಿ..."—ನನಗೆ ಆಗ ನಾನೆಲ್ಲಿದ್ದೇನೆಂಬುದರ ಅರಿವಾಗಿತ್ತು. ✡



# ಬೀಗಿ ಇರಲಿ

**ಮಾಧವ ಮಂಗಳೂರು**

ಇಪ್ಪತ್ತಾರು ವರ್ಷಗಳಿಗೂ ಹಿಂದಿನ ಮಾತು. ಪೌರನೀತಿಗಳಲ್ಲಿ ತರಬೇತಿ ಹಾಗೂ ವೃತ್ತಿ ಶಿಕ್ಷಣ ಮುಗಿಸಿಕೊಂಡು ಉದ್ಯೋಗವನ್ನು ಅರಸಲು ಮುಂಬಯಿ ಸೇರಿದ ದಿನಗಳವು. ಪಟ್ಟಣಿಗರು ಸುಶಿಕ್ಷಿತರು. ಸುವ್ಯವಸ್ಥೆಯ ಜನ-ಜೀವನ ನಡೆಸುತ್ತಿದ್ದರೆಂದು ಮೇಲ್ನೋಟಕ್ಕೇ ತಿಳಿಯುವಂತಿತ್ತು. ಬಸ್ಸಿಗಾಗಿ ಕಟ್ಟು ನಿಟ್ಟಿನಲ್ಲಿ ಕ್ಯೂ ಕಾಯುವುದನ್ನು ಅಲ್ಲಿ ಮೈಗೂಡಿಸಿಕೊಳ್ಳಲೇಬೇಕು. ರಸ್ತೆಯಲ್ಲಿ ಅಸಹಾಯಕನಿಗೆ ಸಹಾಯ ಮಾಡುವ ಮಂದಿಗೂ ಲೆಕ್ಕವಿದ್ದಿಲ್ಲ; ತುಡುಗು, ಮಾನಹರಣಗಳ ವಿರುದ್ಧ ಸಿಡಿದೇಳುವ ವೈಚಾರಿಕತೆ ಹೆಚ್ಚಿನ ಸುಸಂಸ್ಕೃತರಲ್ಲಿ ಕಂಡು ಬರುತ್ತಿತ್ತು. ಹಾಗೆ ಯಾರಾದರೊಬ್ಬ ಜೇಬು-ಗಳ್ಳ ಸಿಕ್ಕನೆಂದರೆ ಎಲ್ಲರ ಪ್ರಹಾರವೂ ಅವನಿಗೆ ಕಾದಿಟ್ಟ ಬುತ್ತಿಯಂತೆ. ಜನ ಅನ್ಯಾಯದ ವಿರುದ್ಧ ಸಿಡಿದೇಳುವುದನ್ನು ಕಾಣಬಹು-ದಾಗಿತ್ತು.

ಪೌರನೀತಿಗಳಲ್ಲಿ ಒಂದಾದ ರಸ್ತೆಯ ನಿಯಮಗಳನ್ನು ಈ ಮಂದಿ ಎಷ್ಟು ಬಲ್ಲರು? ಎಂಬ ನನ್ನ ಹಂಬಲಕ್ಕೆ ಜನಸಂದಣಿಯ ರಸ್ತೆಗಳಲ್ಲೊಂದಾದ ಮುಂಬಯಿಯ ಮಹಾತ್ಮಾಗಾಂಧಿ ರಸ್ತೆಯನ್ನು ಪರಿಶೀಲನೆಗೆಂದು ಆರಿಸಿಕೊಂಡೆ. ಪಾದಚಾರಿಗಳಿಗೆ ರಸ್ತೆ ನಿಯಮಗಳ ಬಗ್ಗೆ ತಿಳಿದಿದೆಯೆ? ಎಂಬುದನ್ನು ಅರಿಯಬೇಕೆಂಬ ಉದ್ದೇಶವಿರಿಸಿಕೊಂಡೆ.

ಮುಂಬಯಿಯಲ್ಲಿ ನಿಗದಿತ ವೇಳೆಗೇ ರಸ್ತೆ ದಾಟಲು ಹಲವೆಡೆ ಸ್ವಯಂ ವಿದ್ಯುತ್ ಚಾಲಿತ ಸಂಜ್ಞೆಯ ಏರ್ಪಾಡುಗಳಿದ್ದವು. ರಸ್ತೆ ದಾಟಲು ಪಾದಚಾರಿಗಳಿಗೆ ಇದ್ದ ದಾಟುದಾರಿಯಲ್ಲೇ ಸಾಗಬೇಕು. ಇದನ್ನು ಬಿಟ್ಟು ರಸ್ತೆ ಮಧ್ಯ ಇನ್ನೆಲ್ಲೋ ದಾಟಲು ಹೋದರೆ, ನೀಲಿ ಸಮವಸ್ತ್ರಧಾರಿ (ಪೋಲೀಸ್ ಪೇದೆ) ಅಂಥವರನ್ನು ದಸ್ತಗಿರಿ ಮಾಡಿ, ದಂಡವೋ ಇನ್ನೇನೋ ಕಾನೂನು ಕ್ರಮ ಶಿಕ್ಷೆಗಳಿಗೆ ಆತನನ್ನು ಒಳಪಡಿಸುತ್ತಿದ್ದ. ಶಿಕ್ಷೆ ಕಟ್ಟಿಟ್ಟದ್ದು ಎಂದು ಜನರು ಕಟ್ಟುನಿಟ್ಟಲ್ಲಿ ರಸ್ತೆ ದಾಟುತ್ತಿದ್ದರು.

ಪಾದಚಾರಿಗಳು ರಸ್ತೆಗಳ ಇಕ್ಕೆಡೆಗಳಲ್ಲಿರುವ ಪುಟ್ಟಪಥ(ಫುಟ್‌ಪಾತ್)ವನ್ನು ನಿಯಮದಂತೆ ಬಳಸಿಕೊಳ್ಳುವರೇ? ಇದು ನನ್ನ ಎರಡನೆಯ ಪರಿಶೀಲನೆಯಾಗಿತ್ತು. ಪಾದಚಾರಿಗಳು ಅನುಸರಿಸಬೇಕಾದ ನಿಯಮ ಯಾವುದು ಎಂದು ಮೊದಲಿಗೆ ಅರಿಯಬೇಡವೆ? ಇದನ್ನು ಅರಿತವರೇ ವಿರಳ ಎಂದು ಸರಳವಾಗಿ ಹೇಳಬಹುದೇನೋ.

ವಾಹನಗಳು ರಸ್ತೆಯ ಎಡ ಬದಿಗೆ ಚಲಿಸಬೇಕು. ಹಾಗೆಯೇ ಪಾದಚಾರಿಗಳು ರಸ್ತೆಯ ಬಲ ಬದಿಗೆ ನಡೆದು ಹೋಗಬೇಕು. ಅಂದರೆ ತನ್ನ

ಎಡ ಬದಿಗೆ ರಸ್ತೆಯಲ್ಲಿ ವಾಹನ ಮುಖಮಾಡಿ ಬರುತ್ತಿರುವುದು ಪಾದಚಾರಿಗೆ ತನ್ನ ಎಡ ಪಾರ್ಶ್ವದಲ್ಲೆ ತೋರಬೇಕು. ಹೀಗೆ ನಡೆದಾಗ ತನ್ನೆದುರಿಗೇ ಎಡ ಬದಿಗೆ ವಾಹನ ಹಾಯುತ್ತಿರುವುದರಿಂದ ತಾನು ಇನ್ನಷ್ಟು ಬದಿಗೆ ಸರಿಯಲು ಇದು ಅನುಕೂಲವೂ ಹೌದು.

ಆದರೆ ವಿದ್ಯಾವಂತರ ಕೇರಿಯಲ್ಲೂ ಈ ನಿಯಮ ಜೀವಂತ ಉಳಿದಿದ್ದಿಲ್ಲ. ನಿಯಮ ಪಾಲಿಸಲು ಹೊರಟ ನಾನೇ ಅವರ ಕ್ಷಮೆ ಕೇಳಬೇಕಾಗಿ ಬರುತ್ತಿತ್ತು. ನಿಯಮದಂತೆ ರಸ್ತೆಯ ಬಲ ಬದಿಯ ಪುಟ್ಟಪಥದಲ್ಲಿ ನಾನು ನಡೆದು ಹೋದರೆ ಮಿಕ್ಕವರೆಲ್ಲ ಆ ಬದಿಯಲ್ಲಿ ಬರುತ್ತಿದ್ದರು. ಅವರ ಕಾಲ್ತುಳಿತಕ್ಕೆ ಸಿಕ್ಕ ನಾನೇ "ಮಾಫ್ ಕರೋಜ" ಎಂದು ಅನ್ನಬೇಕಾಗಿ ಬರುತ್ತಿತ್ತು. ಇದನ್ನಿಲ್ಲೇಕೆ ಪ್ರಸ್ತಾಪಿಸುವೆನೆಂದರೆ ನಿಯಮಗಳ ಪಾಠ ಹಾಗೂ ಪರಿಪಾಠಕ್ಕಿರುವ ಸ್ಪಷ್ಟ ವ್ಯತ್ಯಾಸ ಇಲ್ಲವೇ ಸಂಘರ್ಷದ ವಿಚಾರಕ್ಕೆ ಇದು ಕನ್ನಡಿ ಹಿಡಿದಂತೆ ತಾನೇ? ಆಚರಣೆಗೆ ಬಾರದ ನಿಯಮಗಳು.

ಕಾರಣವಿಷ್ಟೆ: ದಾಟು ರಸ್ತೆಯ ನಿಯಮೋಲ್ಲಂಘನ ಮಾಡಿದರೆ ಅಪರಾಧ. ಆದಕ್ಕೆ ಶಿಕ್ಷೆಯೋ ದಂಡವೋ ಕಟ್ಟಿಟ್ಟ ಬುತ್ತಿ, ಇವನ್ನರಿತ ಜನ ನಿಯಮಕ್ಕೆ ತಲೆಬಾಗಿ, ಶಿಸ್ತಿಗೆ ಶರಣಾಗಿ, ವೇಳೆಯಾದರೂ ವಿಧಿಯಿಲ್ಲದೆ ನಡೆದುಕೊಳ್ಳಲು ಕಲಿತಿದ್ದಾರೆ. ಆದರೆ ರಸ್ತೆಯುದ್ದಕ್ಕೂ ಪುಟ್ಟಪಥದಲ್ಲಿ ನಡೆಯುವ ಕ್ರಮವನ್ನೂ ಕಟ್ಟುನಿಟ್ಟಿಗೆ ಒಳಪಡಿಸಿದರೆ ಎಷ್ಟೋ ಅನಾಹುತಗಳು ತಪ್ಪಬಹುದು. ಪುಟ್ಟಪಥವನ್ನೂ, ಬಲಬದಿಗೆ ಎಂಬ ತತ್ವವನ್ನು ಅನುಸರಿಸದಿದ್ದರೆ ದಂಡ ವಿಧಿಸುವ ನಿಯಮವಿಲ್ಲದೆ ಜನ ಹುಚ್ಚುಗುದುರೆಯಂತೆ ಅಲೆಯುತ್ತಿದ್ದರು. ಯಾವ ನಗರದಲ್ಲಾದರೂ ಫುಟ್‌ಪಾತಿನಲ್ಲಿ ನಡೆದು ಹೋಗುವವರಿಗೆ ನಿಯಮ ವಿಧಿಸಿದ್ದಾರೆಯೇ?

ಜೀವನದ ವಿವಿಧ ಹಂತಗಳಲ್ಲಿ, ಆಡಳಿತ ಮಟ್ಟಗಳಲ್ಲಿ, ಬುನಾದಿ ಶಿಕ್ಷಣದಿಂದ ಹಿಡಿದು ಬೃಹತ್ ಉದ್ಯಮಗಳವರೆಗೂ ಸಾರ್ವಜನಿಕ ರಂಗಗಳಲ್ಲೂ ಅಶಿಸ್ತು, ಅಪರಾಧಗಳ ವ್ಯಾಧಿಗಳು ಹೆಚ್ಚುತ್ತಿವೆ. ಇದಕ್ಕೆ ಶಿಕ್ಷೆ ಎಂಬ ಕಣ್ಣುಮುಚ್ಚಾಲೆಯ ಔಷಧವಿದ್ದರೂ ಕಠಿಣ ಶಿಕ್ಷೆಗಳೆಂಬ ಕಡಿ ಔಷಧಗಳಿಲ್ಲ. ಬೆಳಕು ಹರಿದರೆ ಬೇಲಿಯೇ ಹೊಲ ಮೇಯುವಂತೆ ನಿಯಮಗಳನ್ನು ಪಾಲಿಸಬೇಕಾದವರು ನಿಯಮವನ್ನು ಮುರಿಯುತ್ತಾರೆ. ಹಣ, ವಕೀಲಿ, ರಾಜಕೀಯ, ಎಲ್ಲ ನಿಯಮಗಳನ್ನು ಬದಿಗೆ ಸರಿಸಿ ಕಣ್ಣಿಗೆ ಮಣ್ಣೆರಚುವ ನಾಟಕ ನಡೆಯುತ್ತದೆ. ನಿಯಮಗಳು ರೇಡಿಯೋ, ಟಿ. ವಿ. ಗಳಿಗೆ ಚಂದವಾಗಿ ತೋರಿ ಸಾಯುತ್ತವೆ.

ಇದಕ್ಕೆಲ್ಲ ಕಾರಣ? ನಮ್ಮ ಅನುಕರಣ ಶಿಕ್ಷಣ ಪದ್ಧತಿಯಷ್ಟೇ ಅಲ್ಲ. ಶಿಕ್ಷಾ ಪದ್ಧತಿಯು ಸಡಿಲಗೊಂಡಿರುವುದೇ ಮೂಲಕಾರಣ. ಅಪರಾಧ ಹಾಗೂ ಶಿಕ್ಷೆಗಳೆಂಬುದು ನಾಣ್ಯದ ಎರಡು ಮುಖಗಳಿದ್ದಂತೆ. ಅಪರಾಧಕ್ಕೆ ತಕ್ಕ ಶಿಕ್ಷೆ ವಿಧಿಸುವಲ್ಲೂ ಎದೆಗಾರಿಕೆ ಬೇಕು; ಪ್ರಾಮಾಣಿಕತೆ ಬೇಕು; ದಕ್ಷತೆ ಬೇಕು ಎಂಬುದನ್ನು ಮರೆಯಲಾದೀತೇ? ಇಂತಹ ವೇಳೆಗೆ. ಹಣದ ಆಮಿಷ, ಸುಳ್ಳು ಸಾಕ್ಷಿಯ ಗೊಳ್ಳು ದಾಖಲೆ, ರಾಜಕೀಯ ವಶೀಲಿಗಳು ಅಡ್ಡ ಬಂದರೆ ಅಸಹಾಯಕ ನಿರಪರಾಧಿಯನ್ನು ರಕ್ಷಿಸುವವರಾರು?

ಮುಂಬಯಿಯ ಬಿ.ಇ.ಎಸ್.ಟಿ. ಸಂಸ್ಥೆಯ ಕಂಡಕ್ಟರನೊಬ್ಬ ಪ್ರಯಾಣಿಕನೊಬ್ಬನಿಂದ ಹಣ ಪಡೆದುಕೊಂಡು ೯ ಪೈಸೆಯ ಟಿಕೇಟು ಕೊಡಲು ಮರೆತದ್ದು ಅವರದ್ದೇ ಆದ ದಾದರ ನ್ಯಾಯಾಲದಲ್ಲಿ ಸಾಬೀತಾದಾಗ ಇದು ಅಪರಾಧವೆಂದು ನಿರ್ಣಯಿಸಲ್ಪಟ್ಟಿತು. ಕಂಡಕ್ಟರನನ್ನು ಮೂರು ತಿಂಗಳ ವರೆಗೆ ಅಮಾನತಿನಲ್ಲಿಡಬೇಕಾಯಿತಲ್ಲದೆ ನ್ಯಾಯಾಲಯಕ್ಕೆ ಹಾಜರಾದ ನಿರಪರಾಧಿ ಪ್ರಯಾಣಿಕನಿಗೆ ಐದು ರೂಪಾಯಿ ದಿನ ಭತ್ತೆ ನೀಡಿದ ಅನುಭವ ಈ ಲೇಖಕನಿಗಾಗಿದೆ. ಇಂತಹ ಕಟ್ಟುನಿಟ್ಟುಗಳಿಂದಾಗಿಯೇ ಆ ವೇಳೆಗೆ ಬಿ.ಇ.ಎಸ್.ಟಿ. ವ್ಯವಸ್ಥೆ ಭಾರತ

ದಲ್ಲೇ ಒಂದು ಉತ್ತಮ ವ್ಯವಸ್ಥೆ ಎಂದು ತಿಳಿಯಲಾಗಿತ್ತು.

ಚರಿತ್ರೆಯ ಪುಟಗಳಲ್ಲಿ ಹುದುಗಿ ಹೋದ ಅಂದಿನ ಆಡಳಿತದಲ್ಲೂ ಸುವ್ಯವಸ್ಥೆ ನೆಲೆಸಲು ಅಪರಾಧ ಎಸಗಿದವರಿಗೆ ಕಠಿಣ ಶಿಕ್ಷಾ ಕ್ರಮ ರೂಢಿಯಲ್ಲಿದ್ದುದು ಹಲವು ಬಗೆಯಲ್ಲಿ ಬೆಳಕಿಗೆ ಬರುತ್ತದೆ. ಇದರಲ್ಲಿ ನುಣಚಿಕೊಳ್ಳುವ ಕುಟಿಲೋಪಾಯಕ್ಕೆ ಒತ್ತುಗಳಿಲ್ಲದಂತೆ ಪ್ರಾಮಾಣಿಕತೆ ಮೆರೆದದ್ದು ಎದ್ದು ತೋರುತ್ತದೆ.

ಕ್ರಿಸ್ತ ಪೂರ್ವ ೪ನೇ ಶತಮಾನದಲ್ಲಿ ಸುಳ್ಳು ಸಾಕ್ಷಿ ನೀಡಿದವರನ್ನು ಚಿತ್ರಹಿಂಸೆಗೆ ಗುರಿಪಡಿಸುತ್ತಿದ್ದರು. ಕುಶಲಕರ್ಮಿಯ ಅಂಗ ಊನ ಮಾಡಿದ ಅಪರಾಧಕ್ಕೆ ಮರಣದಂಡನೆ ವಿಧಿಸಿದ ದಾಖಲೆ ಇದೆ.

ವಿದ್ಯೆಯಲ್ಲಿ ಹಿಂದೆ ಬಿದ್ದರೂ ಶಿಕ್ಷೆ. ಕ್ರಿಸ್ತ ಶಕ ೭ನೇ ಶತಮಾನದಲ್ಲಿ ತತ್ತ್ವಜ್ಞಾನದ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರಿಗೆ ಆನೆಯ ಮೇಲೆ ಕುಳ್ಳಿರಿಸಿ ಮೆರವಣಿಗೆ ಹೋಗುತ್ತಿದ್ದರು. ಅನುತ್ತೀರ್ಣರಾದವರನ್ನು ಅವಮಾನಗೊಳಿಸುವ ಶಿಕ್ಷೆ. ಮೈಗೆ ಬಣ್ಣ ಬಳಿದು ಹಳ್ಳಕೊಳ್ಳಗಳಿಗೆ ನೂಕುತ್ತಿದ್ದರು. ವಿದ್ಯಾಕ್ಷೇತ್ರದಲ್ಲೂ ಪ್ರಾಮಾಣಿಕತೆ ಮೆರೆಯುತ್ತಿತ್ತು.

ಲೂಟಿ ಕೊಳ್ಳೆ ಬೆಂಕಿ ಇಡುವುದರಲ್ಲಿ ನಿರತರಾದವರನ್ನು ಗಡೀಪಾರು ಮಾಡುತ್ತಿದ್ದರು. ಕ್ರಿ. ಶ. ೬೨೦ರ ವೇಳೆಗೆ ಸೇನಾಪತಿ ಯುದ್ಧದಲ್ಲಿ ಸೋತರೆ ಅಥವಾ ಯುದ್ಧರಂಗದಿಂದ ಪಲಾಯನ ಮಾಡಿದರೆ ಅಂಥವನಿಗೆ ಊರಲ್ಲಿ ಸೀರೆ ಉಡಿಸಿ ಮೆರವಣಿಗೆ ಮಾಡುತ್ತಿದ್ದರು. ಆತ ಅವಮಾನದಲ್ಲೇ ಅವಸಾನ ಅಪ್ಪುತ್ತಿದ್ದ ಸಂದರ್ಭಗಳಿದ್ದುವಂತೆ.

ಕ್ರಿಸ್ತಶಕ ೧೨೨೫ರ ವೇಳೆಗೆ ಸಣ್ಣಪುಟ್ಟ ಅಪರಾಧಕ್ಕೆ ಮರಕ್ಕೆ ಕಟ್ಟಿ ಕೋಲಿನಿಂದ ನೂರು ಕೊಡಿಯೇಟು ಬಿಡುತ್ತಿದ್ದರಂತೆ. ದೊಡ್ಡ ಅಪರಾಧಕ್ಕೆ ಶಿರ ಕತ್ತರಿಸಿಯೋ ಆನೆಯಿಂದ ತುಳಿಸಿಯೋ ಮರಣದಂಡನೆ. ಹಾದರದ ವಿಷಯದಲ್ಲಿ ವಿಚಾರಣೆಯಿಲ್ಲದೆ ಮರಣದಂಡನೆ ವಿಧಿಸುತ್ತಿದ್ದರು.

ಕ್ರಿಸ್ತ ಶಕ ೧೩೨೪ರ ವೇಳೆಗೆ ಸಾಲಗಾರ ಸಾಲ ತೀರಿಸದೆ ಇದ್ದ ಅಪರಾಧಕ್ಕೆ ಶೂಲಕ್ಕೇರಿ ಮರಣವನ್ನಪ್ಪಬೇಕಾಗಿತ್ತು.

ಕ್ರಿಸ್ತ ಶಕ ೧೩೩೩ರ ವೇಳೆಗೆ ಮಲಬಾರಿನಲ್ಲಿ ತೆಂಗಿನ ಕಾಯಿ ಕದ್ದ ತುಡುಗನಿಗೂ ಮರಣದಂಡನೆ! ಕ್ವಿಲಾನಿನ ರಾಜನ ಅಳಿಯ ಅನ್ಯರ ಹಿತ್ತಿಲಲ್ಲಿ ಬಿದ್ದ ಮಾವಿನ ಹಣ್ಣನ್ನು ಹೆಕ್ಕಿದುದಕ್ಕೆ ಮರಣದಂಡನೆಗೊಳಗಾಗಿದ್ದ. ರಾಜ ತನ್ನ ಅಳಿಯನ ದೇಹವನ್ನು ಎರಡಾಗಿ ಸೀಳಿಸಿ ದಾರಿಯ ಇಕ್ಕೆಲಗಳಲ್ಲಿ ಕಟ್ಟಿಸಿದನಂತೆ.

ನಿಯಮಪಾಲನೆಯ ದೃಷ್ಟಿಯಿಂದ ಇಂತಹ ಕಠೋರ, ಅನಾಗರಿಕ ಶಿಕ್ಷೆಗಳು ಈಗಲೂ ವಿಧಿಸಲ್ಪಡಬೇಕೆಂದು ನಾನು ಹೇಳುವುದಿಲ್ಲ. ಆದರೆ ಶಿಕ್ಷೆಗಳು ನಿಯಮಪಾಲನೆಯನ್ನು ಪ್ರಚೋದಿಸುವಷ್ಟಾದರೂ ಕಠಿಣವಾಗಿರಬೇಡವೆ? ಇಂತಹ ಪ್ರಾಮಾಣಿಕತನವನ್ನು ಇಂದಿನ ಆಡಳಿತದಲ್ಲಾಗಲಿ ರಾಜಕಾರಣಿಗಳಲ್ಲಾಗಲಿ ಇರಬಹುದೆಂದು ಕನಸಲ್ಲೂ ಊಹಿಸಲೂ ಶಕ್ಯವಾದೀತೆ? ಅಪರಾಧ ಶಿಕ್ಷೆಗೆ ಬಡವ ಬಲ್ಲಿದನೆಂಬ ವ್ಯತ್ಯಾಸವಿರದಿದ್ದರೆ ಆಡಳಿತದಲ್ಲಿ ಪ್ರಾಮಾಣಿಕತೆ ಎದ್ದು ತೋರುತ್ತಿತ್ತು. ✡

---

ಪ್ರತಿ ಆರು ತಿಂಗಳಿಗೊಮ್ಮೆ ಎಸ್ಸೆಸ್ಸೆಲ್ಸಿ ಪರೀಕ್ಷೆಗೆ ಕೂತು ಬರುವುದು ಅವರಿಗೆ ಅಭ್ಯಾಸವಾಗಿಬಿಟ್ಟಿತ್ತು. ಆ ಕುರಿತು ಅವರನ್ನು ಆಡಿಕೊಳ್ಳುವವರಿಗೂ ಕಡಿಮೆಯಿರಲಿಲ್ಲ. ಕಳೆದ ಸಲ ಪರೀಕ್ಷೆಗೆ ಹೋಗುವ ಮುನ್ನ ಅವರು ಕರಪತ್ರಗಳನ್ನೇ ಮುದ್ರಿಸಿ ಎದುರಾದವರಿಗೆ ಹಂಚಿದರು. ಅದರಲ್ಲಿದ್ದುದು ಇಷ್ಟು, "ಪ್ರಿಯ ಹಿತಚಿಂತಕರೆ, ಪ್ರತಿ ಸಲದಂತೆ ಈ ಸಲವೂ ಪರೀಕ್ಷೆಗೆ ಹೋಗುತ್ತಿದ್ದೇನೆ. ದಯವಿಟ್ಟು ಶುಭಕೋರಿ ಆಶೀರ್ವದಿಸಬೇಕು...ಇತಿ ನಿಮ್ಮ..."

—ಅಹಲ್ಯಾ ಪಾಟೀಲ

# ಇದುವೆ ಜೀವ ಇದು ಜೀವನ

ಒಂದು ದಿನ ಪ್ರಾತಃಕಾಲ ನಾನು ಪ್ರಿನ್ಸಿಪಾಲರೊಡನೆ ಮಾತನಾಡುತ್ತಾ ಇದ್ದೆ. ಅಷ್ಟರಲ್ಲಿ ಪಂಜಾಬಿ ಉಡುಪಿನಲ್ಲಿದ್ದ ಯುವತಿಯೊಬ್ಬಳು ಪ್ರಿನ್ಸಿಪಾಲರನ್ನು ಕಾಣಲು ಬಂದಳು. ಆಂಗ್ಲ ಪಠ್ಯಪುಸ್ತಕಗಳ ಪ್ರಕಾಶಕರ ಕಂಪನಿಯೊಂದರಲ್ಲಿ ಕೆಲಸ ಮಾಡುತ್ತಿರುವೆನೆಂದೂ ನಿಮ್ಮ ಶಾಲೆಯಲ್ಲಿ ತನ್ನ ಕಂಪನಿಯ ಪಠ್ಯಪುಸ್ತಕಗಳನ್ನು ಎಲ್ಲಾ ತರಗತಿಗಳಲ್ಲೂ ಕಲಿಸಬೇಕೆಂದು ಪ್ರಿನ್ಸಿಪಾಲರನ್ನು ಕೇಳಿಕೊಳ್ಳಲು ಬಂದಿರುವೆನೆಂದೂ ಹೇಳಿದಳು. ತನ್ನ ಕಂಪನಿಯ ಪುಸ್ತಕಗಳನ್ನು ಬಾಯಿತುಂಬಾ ಹೊಗಳಿ, ಈ ವರ್ಷ ಅವುಗಳನ್ನು ಇನ್ನೂ ಉತ್ತಮವಾಗಿ ಛಾಪಿಸಿರುವೆವೆಂದೂ ಹೇಳಿದಳು. ಪ್ರಿನ್ಸಿಪಾಲರು ತುಂಬಾ ಅವಸರದಲ್ಲಿದ್ದರು. ಅವರು ಕಳೆದ ವರುಷವೇ ಪಠ್ಯಪುಸ್ತಕಗಳನ್ನು ಬದಲಾಯಿಸಿರುವುದರಿಂದ ಈ ವರ್ಷ ಪುನಃ ಬದಲಾಯಿಸಲು ಸಾಧ್ಯವಿಲ್ಲವೆಂದು ತಿಳಿಸಿದರೂ ಆ ಹುಡುಗಿ ಎಳ್ಳಷ್ಟೂ ಬೇಸರಿಸಲಿಲ್ಲ. "ಪರವಾಗಿಲ್ಲ ಸರ್, ಈ ಪುಸ್ತಕಗಳನ್ನು ಓದಿ ನೋಡಿ, ಆಗ ಅವು ಎಷ್ಟು ಚೆನ್ನಾಗಿವೆ ಎಂಬುದು ನಿಮಗೆ ತಾನಾಗಿಯೇ ತಿಳಿಯುವುದು," ಅಂದಳು.

ಹುಡುಗಿ ನಿರರ್ಗಳವಾಗಿ ಉತ್ತಮ ದರ್ಜೆಯ ಆಂಗ್ಲ ಭಾಷೆಯಲ್ಲಿ ಮಾತನಾಡುತ್ತಿದ್ದಳು. ಆಕೆಯ ವಿನಯ ಹಾಗೂ ಸೌಜನ್ಯಗಳನ್ನು ನೋಡಿದಾಗ ತುಂಬಾ ಸಂತೋಷವಾಯಿತು. ಈ ಹುಡುಗಿ ಪಂಜಾಬಿ ಉಡುಪಿನಲ್ಲಿದ್ದರೂ ಈಕೆ ಪಂಜಾಬಿಯಾಗಿರಲಿಕ್ಕಿಲ್ಲ ಎಂದು ನಾನು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದಾಗಲೇ ಆ ಹುಡುಗಿ ಪ್ರಿನ್ಸಿಪಾಲರೊಡನೆ, "ಸರ್, ನಾನೀಗ ತಮ್ಮೊಡನೆ ವ್ಯಾಪಾರದ ಮಾತುಗಳನ್ನಾಡುತ್ತಿಲ್ಲ. ಖಾಸಗಿ ವಿಷಯವೊಂದರ ಮೇಲೆ ತಮ್ಮೊಡನೆ ಮಾತನಾಡಲೆ?" ಅಂದಳು. ಪ್ರಿನ್ಸಿಪಾಲರು ಒಪ್ಪಿಗೆ ಕೊಟ್ಟಾಗ ಅವಳು, "ಸರ್, ನನಗೆ ಕನ್ನಡ ಕಲಿಯಲು ತುಂಬಾ ಆಸೆ. ನನ್ನ ಅಮ್ಮ ಮಂಗಳೂರಿನವರು– ಅವರಿಗೆ ಕನ್ನಡ ಚೆನ್ನಾಗಿ ಬರುತ್ತದೆ. ನನಗೆ ತೆಲುಗು ಲಿಪಿ ಗೊತ್ತಿದೆ. ಕನ್ನಡದಲ್ಲಿ ತುಂಬಾ ಹಾಡುಗಳನ್ನು ಕಲಿತಿದ್ದೇನೆ. ಆದರೆ ಭಾಷೆ ಬಾರದು. ನಿಮ್ಮ ಶಾಲೆಯಲ್ಲಿ ಕನ್ನಡ ಕಲಿಸಬಲ್ಲವರು ಯಾರಾದರೂ ಇದ್ದರೆ ದಯವಿಟ್ಟು ನನಗೆ ತಿಳಿಸಿ," ಅಂದಳು. ಆಗ ಪ್ರಿನ್ಸಿಪಾಲರು, "ನಿಮಗೆ ಕನ್ನಡ ಭಾಷೆಯ ಮೇಲೆ ಇಷ್ಟೊಂದು ಪ್ರೀತಿ ಏಕೆ?" ಎಂದು ಕೇಳಲು ಅವಳು, "ನೀವು ನನ್ನ ತಾತನ ವಿಷಯ ಕೇಳಿರಬಹುದು. ಅವರ ಹೆಸರು ಪಂಜೆ ಮಂಗೇಶರಾವ್ ಅಂತ. ಅವರ ಮಗಳ ಮಗಳು ನಾನು. ಪಂಜೆಯವರ ಮೊಮ್ಮಗಳಾಗಿಯೂ ಕನ್ನಡ ತಿಳಿದಿಲ್ಲವೆಂದು ನನಗೆ ತೀರಾ ಬೇಸರ," ಅಂದಳು.

–ಮಾಯಾ ಶೆಣೈ

ಮರುಭೂಮಿಯಲ್ಲಿ ಎಲ್ಲಿಯೋ ಒಮ್ಮೆ ನೀರಿನ ಝರಿ ಕಂಡು ಬರುವಂತೆ, ಈಗಲೂ ನಮಗೆಲ್ಲಿಯಾದರೂ ಒಮ್ಮೊಮ್ಮೆ ಸಜ್ಜನರು ಕಂಡು ಬರುತ್ತಾರೆ.

ಹುಬ್ಬಳ್ಳಿಯಲ್ಲಿ ನನ್ನ ಬಿಡಾರವಿರುವ ಉಣಕಲ್ ಕ್ರಾಸಿನಿಂದ ಸುಮಾರು ನಾಲ್ಕು ಕಿ.ಮಿ. ದೂರದಲ್ಲಿ ಸವಾಯಿ ಗಂಧರ್ವ ಕಲಾಮಂದಿರವಿದೆ. ನನಗೆ ನಾಟಕ ನೋಡುವ ಹುಚ್ಚು. ನಾನೊಮ್ಮೆ ರಾತ್ರಿ ನಾಟಕ ನೋಡಲು ಸ. ಗಂ. ಕಲಾಮಂದಿರಕ್ಕೆ ಹೋಗಿದ್ದೆ. ನಾಟಕ ಮುಗಿಯಲು ರಾತ್ರೆ ಒಂದು ಗಂಟೆ ಆಯಿತು. ಆ ನಂತರ ಸಿಟಿಬಸ್ ಇರುವುದಿಲ್ಲ. ನನ್ನ ಕಾಲೊಂದು ಊನ ಇರುವದರಿಂದ ನಡೆದು ಮನೆ ಮುಟ್ಟುವುದು ಸಾಧ್ಯವಿದ್ದಿಲ್ಲ. ರಾತ್ರಿ ರಿಕ್ಷಾ ಕೇಳಿದರೆ ದುಬಾರಿ ಬಾಡಿಗೆ ಕೇಳುತ್ತಾರೆ. ಅದೂ ನನ್ನಂಥ ನಿವೃತ್ತ ಪ್ರಾಥಮಿಕ ಶಾಲೆಯ ಶಿಕ್ಷಕನಿಗೆ ಅಸಾಧ್ಯವೇ.

ಆದ್ದರಿಂದ ರಾತ್ರಿ ಅಲ್ಲಿಯೇ (ಸ. ಗಂ. ಕಲಾಮಂದಿರದಲ್ಲಿ) ಮಲಗಿ ಬೆಳಿಗ್ಗೆ ಎದ್ದು ಮನೆಗೆ ಹೋಗತಕ್ಕದ್ದೆಂಬ ವಿಚಾರದಿಂದ, ಜತೆಯಲ್ಲಿ ಒಯ್ದ ಜಮಖಾನೆ ಹಾಸಿದೆ. ಅಷ್ಟರಲ್ಲಿ ಓರ್ವ ಅಪರಿಚಿತ ಯುವಕರೊಬ್ಬರು ಸ್ಕೂಟರ್ ಸಹಿತ ಬಂದು ಆತ್ಮೀಯವಾಗಿ ನನ್ನನ್ನು ವಿಚಾರಿಸಿದರು,

"ಅಜ್ಜಾವರೇ, ಇಲ್ಲಿ ಚಳಿಯಲ್ಲ್ಯಾಕೆ ಮಲಗ್ತೀರಿ?"

"ಏನು ಮಾಡೋದು? ಈಗ ಸಿಟಿಬಸ್ ಇಲ್ಲ."

"ನಿಮ್ಮ ಮನೆ ಎಲ್ಲಿ? ನಿಮ್ಮನ್ನು ಮನೆಗೆ ಮುಟ್ಟಿಸ್ತೇನೆ."

"ನನ್ನ ಬಿಡಾರ ದೂರ. ಉಣಕಲ್ ಕ್ರಾಸಿನಲ್ಲಿದೆ ವಿನಾಕಾರಣವಾಗಿ ನಿಮಗೆ ತೊಂದರೆ!"

"ಹಾಗೇನಿಲ್ಲ ಬನ್ನಿ, ಸ್ಕೂಟರ್ ಹತ್ತಿ. ಹತ್ತೇ ನಿಮಿಷಗಳಲ್ಲಿ ನಿಮ್ಮ ಮನೆಗೆ ಮುಟ್ಟಿಸ್ತೇನೆ."

ಅಷ್ಟೆಲ್ಲ ಆತ್ಮೀಯವಾಗಿ ಒತ್ತಾಯಿಸಿದ್ದರಿಂದ ನಾನು ಅವರ ಸ್ಕೂಟರ್ ಹತ್ತಿದೆ. ಅವರು ಹೇಳಿದಂತೆ ಹತ್ತೇ ನಿಮಿಷಗಳಲ್ಲಿ ಸುರಕ್ಷಿತವಾಗಿ ನನ್ನನ್ನು ನನ್ನ ಮನೆಗೆ ಮುಟ್ಟಿಸಿದರು. ಆಗ ರಾತ್ರಿ ಎರಡು ಹೊಡೆದಿತ್ತು. ನನಗಂತೂ ಅತಿ ಆನಂದ! ಆಶ್ಚರ್ಯ!

ರಾತ್ರಿ ಚಳಿಯಲ್ಲಿ ಮಲಗುವುದು ತಪ್ಪಿದ್ದರಿಂದ ಆನಂದ! ಆದರೂ ಈ ಅಪರಾತ್ರಿಯಲ್ಲಿ ನನ್ನನ್ನು ಸುರಕ್ಷಿತವಾಗಿ ಮನೆಗೆ ಮುಟ್ಟಿಸಿದ ಈ ಸಜ್ಜನರಾರೆಂಬ ಬಗ್ಗೆ ಆಶ್ಚರ್ಯ!

ಅವರ ಪರಿಚಯ ಮಾಡಿಕೊಳ್ಳಬೇಕೆಂಬ ಕುತೂಹಲದಿಂದ ಕೇಳಿದೆ.

"ನಿಮ್ಮ ಮನೆ ಎಲ್ಲಿ?"

"ಸವಾಯಿ ಗಂಧರ್ವ ಕಲಾಮಂದಿರದಿಂದ ಸ್ವಲ್ಪ ಮುಂದೆ ಅಶೋಕ ನಗರದಲ್ಲಿದೆ."

"ಅರೆ! ಮತ್ತೆ ಈಗ ಬಂದಷ್ಟೇ ದೂರ ಹಿಂತಿರುಗಿ ಹೋಗಬೇಕಾಯಿತಲ್ಲವೆ?"

"ಪರವಾ ಇಲ್ಲ, ಸ್ಕೂಟರ್ ಇದೆ, ಹೋಗ್ತೇನೆ. ನಮಸ್ಕಾರ!"

"ನಮಸ್ಕಾರ! ನಿಮ್ಮ ಹೆಸರು?"

ಅವರು ಹೆಸರು ಹೇಳಿ ಹೊರಟೇಬಿಟ್ಟರು.

—ಪಾಂ. ದಾ. ಶಹಾಣೆ

ನಾನಾಗ ಇನ್ನೂ ದ್ವಿತೀಯ ಪಿ. ಯು. ಸಿ. ಯಲ್ಲಿದ್ದೆ. ಗುಡ್ಡೆಮರಡಿಯಲ್ಲಿ ನಮ್ಮ ಪರಿಚಿತರೊಬ್ಬರ ನಲವತ್ತು ಅಡಿ ಅಗಲ ಮತ್ತು ಅಷ್ಟೇ ಸುತ್ತಳತೆಯ ದೈತ್ಯ ಬಾವಿಯೊಂದಿತ್ತು. ಹೊಳೆಯ ಸಮೀಪವೇ ಇರುವುದರಿಂದ ಯಾವಾಗಲೂ ನೀರು ತುಂಬಿರುತ್ತಿತ್ತು. ಪ್ರತಿ ಭಾನುವಾರ ನನ್ನ ಅಣ್ಣ ಹಾಗೂ ಗೆಳೆಯರು ಈಜಲು ಹೋಗುತ್ತಿದ್ದರು. ಒಮ್ಮೆ ನನ್ನನ್ನು ಜೊತೆಗೆ ಕರೆದುಕೊಂಡು ಹೋದರು. ನನಗೋ ಮೊದಲೇ ಈಜು ಬರುತ್ತಿರಲಿಲ್ಲ. ಅವರೆಲ್ಲ ಈಜುವುದನ್ನು ನೋಡಿ ನನಗೂ ಈಜುವುದು ಸುಲಭವೆನಿಸಿತು. ನನ್ನ ಗೆಳೆಯ ಸತೀಶ (ಅವರದ್ದೇ ಬಾವಿ) ಮತ್ತು ನನ್ನ ದೊಡ್ಡಮ್ಮನ ಮಗ ಶ್ರೀಧರ ನನ್ನ ಬೆಂಗಾವಲಾಗಿ ಇರುತ್ತೇನೆಂದು ಭರವಸೆ ಇತ್ತಾಗ ನೀರಿಗೆ ಜಿಗಿದೆ. ಬಾವಿಯ ಅರ್ಧಭಾಗ ಕ್ರಮಿಸಿದ್ದೆ. ಅವರೂ ನನ್ನ ಪಕ್ಕದಲ್ಲಿಯೇ ಸಾಗಿಬಂದಿದ್ದರು. ಆಗ ನನಗೇಕೋ ಹೆದರಿಕೆ: ಹಾಗೂ ಅಸಾಧ್ಯ ಸುಸ್ತು ಪ್ರಾರಂಭವಾಯಿತು. ಕೂಡಲೇ ಈಜುವುದನ್ನು ಬಿಟ್ಟು ಪಕ್ಕದಲ್ಲಿದ್ದವನನ್ನು ಗಟ್ಟಿಯಾಗಿ ಹಿಡಿದುಕೊಂಡೆ. ಇಬ್ಬರೂ ಮುಳುಗಿದೆವು. ನನ್ನನ್ನು ಉಳಿಸುವುದಕ್ಕೋಸ್ಕರ ಅವರಿಬ್ಬರೂ ಪ್ರಾಣ ಒತ್ತೆಇಟ್ಟು ಹೋರಾಡಿದರೆಂದೇ ಹೇಳಬೇಕು. ಆಗಲೇ ಸುಮಾರು ನೀರು ಕುಡಿದಿದ್ದೆ. ಮೇಲೆ ನನ್ನಣ್ಣ ಬೊಬ್ಬೆ ಹೊಡೆಯುತ್ತಾ ಇದ್ದ. ಮೇಲೆ ನಿಂತಿದ್ದವರೆಲ್ಲರ ಮುಖದಲ್ಲೂ ಗಾಬರಿ ಹಾಗೂ ಅಸಹಾಯಕತೆಗಳನ್ನು ಗುರುತಿಸಿದೆ. ಇದರ ಮಧ್ಯೆ ನನಗಿದ್ದುದು ನಾನು ಬದುಕಬೇಕು ಎಂಬಾಶೆ ಮಾತ್ರ. ಇದರ ಮಧ್ಯೆ ನಾನು ತಪ್ಪಿಸಿಕೊಂಡು ಎರಡು ಅಡಿ ಮುಳುಗಿದೆ. ನಾನು ಇನ್ನು ಸತ್ತೇ ಹೋಗುತ್ತೇನೆಂದು ಅನಿಸಿತು. ಮೇಲೆ ಯಾರವೋ ಕಾಲು ಕಂಡಿತು. ಇದ್ದ ಬಲವನ್ನೆಲ್ಲ ಸೇರಿಸಿ ಎಳೆದ. ನಾನಂತೂ ಮೇಲೆ ಬಂದೆ. ಆದರೆ ಅವ ಮುಳುಗಿದ್ದ. ಅಷ್ಟರಲ್ಲಿ ನನ್ನ ಜುಟ್ಟು ಯಾರಿಗೋ ಸಿಕ್ಕಿತು. ಕಡೆಗೂ ನನ್ನನ್ನು ದಡ ಮುಟ್ಟಿಸಿದರು. ಸದ್ಯ ಬದುಕಿದೆ ಎಂದು ಅಪಾರ ಸಂತೋಷವಾಯಿತು. ಆದರೆ ಆಗಲೇ ನೀರಿನಿಂದ ಹೊಟ್ಟೆ ಉಬ್ಬರಿಸಿತ್ತು.

ಆದರೆ ಇದು ನನ್ನ ಜೀವನದಲ್ಲಿ ಮರೆಯಲಾರದ ಘಟನೆಯಾಗಿ ಉಳಿದಿದೆ. ಹಾಗೂ ಅವರಿಬ್ಬರೂ ಮರೆಯದ ವ್ಯಕ್ತಿಯಾಗುಳಿದಿದ್ದಾರೆ.

—ಹೆಚ್. ಗುರುಪ್ರಸಾದ್

# ಸ್ಪಂದನಗಳು

ಇದೊಂದು ನೀಳ್ಗತೆ. ವ್ಯಕ್ತಿಯೊಬ್ಬನ ಆಂತರಿಕ ತಾಕಲಾಟವೇ ಇದರ ವಸ್ತು. ಇಲ್ಲಿಯ ಕಥಾನಾಯಕ ದಂಡಿ ಬೇರಾರೂ ಆಗಿರದೇ ನಾವೋ ನೀವೋ ಆಗಿರಲೂಬಹುದು. ಯಾಕೆಂದರೆ ಆತನ ಸಮಸ್ಯೆಗಳು ನಮ್ಮವೂ ಹೌದು.

ತಮ್ಮ 'ಸ್ಪಂದನಗಳು' ಮೂಲಕ ನಿಮ್ಮನ್ನು ಸ್ಪಂದಿಸಲೆತ್ನಿಸುತ್ತಿದ್ದಾರೆ ಶ್ರೀಮತಿ ಕೆ. ವಿ. ಉಭಯಭಾರತಿ.

ಏನಾದರಾಗಲಿ ಈ ಸಲ ಪಿ. ಎಫ್. ಲೋನ್‌ಗೆ ಅಪ್ಲೈಮಾಡಿ ಬರುವ ಹಣದಿಂದ ಒಂದು ವೆಹಿಕಲ್ ತೆಗೆದುಕೊಳ್ಳುವುದೆಂದುಕೊಂಡ ದಂಡಿ. ದಂಡಿಯ ಪೂರ್ಣ ಹೆಸರು ಕೋದಂಡ ರಾಮಯ್ಯ. ಹೆಸರಿನ ಉತ್ತರಾರ್ಧವನ್ನು ಅವನ ಗೆಳೆಯರು, ಮನೆಯವರು, ಬಂಧುಗಳು ತೆಗೆದು ಹಾಕಿಬಿಟ್ಟಿದ್ದರು. ಇನ್ನು ಉಳಿದ ಪೂರ್ವಾರ್ಧದ ಕೋದಂಡ ಅನ್ನುವುದು ಕೂಡ ಕರೆಯಲು ಉದ್ದವೆಂಬಂತೆ ದಂಡ ಎಂದಾಯಿತು. ಈಗ ಅವನು ದಂಡಿ ಎಂದೇ ಎಲ್ಲರಿಗೂ ಪರಿಚಿತ. ಈ ದಂಡಿ ದಿನಾ ಬಿ.ಟಿ.ಎಸ್. ಬಸ್‌ನಲ್ಲಿ ಓಡಾಡಿ ಸೋತು ಸುಣ್ಣವಾಗಿದ್ದ. ಬಸ್‌ನಲ್ಲಿ ದೊಂಬರಾಟ ಬೇರೆ. ಈ ಮಧ್ಯೆ ಆಗಾಗ್ಗೆ ಬಸ್ ಡ್ರೈವರು, ಕಂಡಕ್ಟರುಗಳು ಹೂಡುವ ದಿಢೀರ್ ಮುಷ್ಕರ. ಇದೆಲ್ಲದರಿಂದ ಬೇಸರ ಬಂದು ಒಂದು ವೆಹಿಕಲ್ ತೆಗೆದುಕೊಳ್ಳಬೇಕೆಂದು ಆತ ನಿರ್ಧರಿಸಿದ. ಇಪ್ಪತ್ತೆಂಟರ ಹರೆಯದ ದಂಡಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ಗುಮಾಸ್ತನಾಗಿದ್ದಾನೆ. ಬಿ. ಎಸ್ಸಿ. ಪದವೀಧರ. ಬ್ಯಾಂಕ್‌ನಲ್ಲಿ ಆರೇಳು ವರ್ಷಗಳ ಸರ್ವೀಸ್ ಆಗಿದೆ. ತಂದೆ ತೀರಿಹೋಗಿ ಐದು ವರ್ಷಗಳಾಗಿವೆ. ತಾಯಿ ತಂಗಿಯರೊಂದಿಗೆ ಇದ್ದಾನೆ.

ತಂಗಿ ಲಲಿತ ಇಪ್ಪತ್ನಾಲ್ಕು ಪ್ರಾಯದವಳು. ಬಿ. ಎ. ಮುಗಿಸಿದ್ದಾಳೆ. ಕೆಲಸಕ್ಕೆ ಹೋಗಲು ಇಷ್ಟವಿಲ್ಲದೆ ಮನೆಯಲ್ಲೇ ಇದ್ದಾಳೆ. ಅಮ್ಮ ಬೇಯಿಸಿ ಹಾಕಿದ ಅಡಿಗೆ, ತಿಂಡಿ ತಿಂದುಕೊಂಡು ಗುಂಡುಗುಂಡಾಗಿ ಓಡಾಡಿಕೊಂಡಿದ್ದಾಳೆ. ಮನೆಗೆಲಸದಲ್ಲಿ ಅಮ್ಮನಿಗೆ ಅಲ್ಪಸ್ವಲ್ಪ ಸಹಾಯ ಮಾಡುತ್ತಾಳೆ. ಮನೆಯ ಬಳಿಯಿರುವ ಸವಿತಾ ಸರ್ಕ್ಯುಲೇಟಿಂಗ್ ಲೈಬ್ರರಿಯಲ್ಲಿ ಮೇಂಬರ್ ಆಗಿ ದಿನಕ್ಕೆ ಎರಡು ಕಾದಂಬರಿಗಳನ್ನು ಓದಿ ಪೂರೈಸುವಳು. ಮಧ್ಯಾಹ್ನದ ಸಮಯದಲ್ಲಿ ಗಡದ್ದಾಗಿ ನಿದ್ರೆ ಹೊಡೆಯುವಳು. ಇವಳ ಸುಖೀ ಜೀವನವನ್ನು ಕಂಡು ದಂಡಿಗೆ ಒಮ್ಮೊಮ್ಮೆ ಅಸೂಯೆ ಉಂಟಾಗುವುದು. ಎಷ್ಟೇ ಆಗಲಿ, ತನ್ನ ತಂಗಿಯಲ್ಲವೇ ಎಂದು ಸುಮ್ಮನಾಗುವನು.

ಮದುವೆಯಾಗಿ ಗಂಡನ ಮನೆಗೆ ಹೋದ ಮೇಲೆ ಸಂಸಾರದ ಕಷ್ಟಕಾರ್ಪಣ್ಯಗಳಿದ್ದದ್ದೇ. ಈಗ ತಾಯಿಯ ಮನೆಯಲ್ಲಿ ಆರಾಮವಾದ ಜೀವನ ವನ್ನು ಸಾಗಿಸಲಿ ಅಂದುಕೊಳ್ಳುವನು. ಅವನಿಗೂ ಅವನ ತಾಯಿಗೂ ಲಲಿತಳ ಮದುವೆಯನ್ನು ಆದಷ್ಟು ಬೇಗ ಮಾಡಬೇಕೆಂಬ ಹಂಬಲ. ಸರಿ ಯಾದ ವರ ಸಿಗಬೇಕಲ್ಲ. ಈಗಿನ ಕಾಲದಲ್ಲಿ ಕೆಲಸದಲ್ಲಿರುವ ಹುಡುಗಿಯರಿಗೆ ಡಿಮ್ಯಾಂಡ್ ಜಾಸ್ತಿ. ಇನ್ನು ಉದ್ಯೋಗವಿಲ್ಲದೆ ಮನೆಯಲ್ಲಿ ಕುಳಿತಿರುವ ಇವಳ ಮದುವೆ ಹೇಗೆ ಮಾಡುವುದು ಎಂದು ದಂಡಿ ಯೋಚಿಸುವನು. ಮದುವೆಯ ವಿಷಯ ಬಂದಾಗ ತಂಗಿ ಹೇಳಿದ್ದಳು, "ಅಣ್ಣಾ, ಮದುವೆ ನಿಧಾನವಾದ್ರೂ ಪರವಾಗಿಲ್ಲ. ಸರಿಯಾದ ಕಡೆ ಸಂಬಂಧ ನೋಡಿ ಮಾಡು. ಇಲ್ಲದಿದ್ದರೆ ಆ ಗಂಡ ಎಂದೆನಿಸಿಕೊಂಡವನೇ ನನ್ನ ಪಾಲಿಗೆ ಗಂಡವಾಗಿಬಿಟ್ಟರೇ!" ಎಂದು. ಅವಳ ಮದುವೆ ಗೆಂದು ಹದಿನೈದು-ಇಪ್ಪತ್ತು ಸಾವಿರದವರೆಗೆ ಉಳಿತಾಯ ಮಾಡಿದ್ದಾನೆ.

ಇಂದು ದಂಡಿ ಬ್ಯಾಂಕಿಗೆ ಬಂದಾಗ ಹತ್ತು ಗಂಟೆಯ ಸಮಯ. ಸಹೋದ್ಯೋಗಿ ಶ್ರೀಕಂಠ ಆಗಲೇ ಬಂದಿದ್ದ. ಇವನನ್ನು ನೋಡಿದ ಅವನು "ಗುಡ್ ಮಾರ್ನಿಂಗ್" ಎಂದು ಕೈಯೆತ್ತಿದ. ಇವನು ಸಹ ನಕ್ಕು ಕೈ ಎತ್ತಿ ಅಟೆಂಡೆನ್ಸ್‌ನಲ್ಲಿ ಸಹಿಮಾಡಿ ಬಂದು ತನ್ನ ಸೀಟ್‌ನಲ್ಲಿ ಕುಳಿತ. ಒಬ್ಬೊಬ್ಬರಾಗಿ ಸಹೋದ್ಯೋಗಿಗಳು ಬರತೊಡಗಿ ದರು. ಗಿರಿಜಾ, ರಮಾ, ರಮೇಶ, ಲೀಲಾ, ಗೀತಾ, ಶಶಿಧರ, ವೆಂಕಟೇಶ, ಶಂಕರ, ಕಾವೇರಿ-ಬಾಯಿ, ಸುವರ್ಣ, ರಾಂಗೋಪಾಲ, ಶಾಸ್ತ್ರಿ, ಸುಬ್ರಹ್ಮಣ್ಯ, ನಾಗೇಶ, ಶೆಣೈ, ಕೃಷ್ಣಭಟ್ಟ, ಮಾಲಿನಿ, ದಮಯಂತಿ, ರಾಜಣ್ಣ... ಎಲ್ಲರೂ ಅಟೆಂಡೆನ್ಸ್‌ನಲ್ಲಿ ಸಹಿ ಹಾಕಿ ತಮ್ಮ ತಮ್ಮ ಸೀಟ್ ಗಳಲ್ಲಿ ಕುಳಿತರು. ತನ್ನ ಕಡೆ ನೋಡಿದವರಿಗೆ ದಂಡಿ ಮುಗುಳ್ನಗೆ ಬೀರಿದ. ಕಸ್ಟಮರ್ಸ್ ಬರತೊಡಗಿದರು. ಎಲ್ಲರೂ ಕೆಲಸದ ಕಡೆ ಗಮನ ಹರಿಸಿದರು. ದಂಡಿ ಸೇವಿಂಗ್ಸ್ ಖಾತೆಯ ವಿಭಾಗದಲ್ಲಿದ್ದ. ಕೆಲವು ಕಸ್ಟಮರ್ಸ್ ಹಣವಿರಿ ಸಲು, ಕೆಲವರು ಹಣವನ್ನು ತೆಗೆದುಕೊಳ್ಳಲು ಬಂದಿದ್ದರು. ಕೆಲಸದ ನಡುವೆ ಸಮಯ ಹೋದದ್ದೇ ತಿಳಿಯಲಿಲ್ಲ. ಲಂಚ್ ಸಮಯದಲ್ಲಿ ರಾಜಣ್ಣನ ಜತೆ ಕ್ಯಾಂಟೀನ್ ಕಡೆ ಹೊರಟ. ಎಲ್ಲರೂ ಗೆಳೆಯರೇ. ಆದರೂ ರಾಜಣ್ಣನ ಸಹವಾಸದಲ್ಲಿ ದಂಡಿಗೆ ಒಂದು ರೀತಿ ಹೆಚ್ಚಿನ ಖುಷಿಯುಂಟಾಗುತ್ತಿತ್ತು. ಅವನ ಭಾವನೆಗಳಿಗೆ ರಾಜಣ್ಣ ಸರಿಯಾಗಿ ಸ್ಪಂದಿಸುತ್ತಿದ್ದ. ರಾಜಣ್ಣ ಒಟ್ಟಿನಲ್ಲಿ ದಂಡಿಯ ಆತ್ಮೀಯ ಮಿತ್ರ. ಕ್ಯಾಂಟೀನ್‌ಗೆ ಇಬ್ಬರೂ ಬಂದವರೇ ಒಂದೆಡೆ ಸ್ಥಳ ಆರಿಸಿ ಕುಳಿತರು. ಮಾಣಿ ಇವರ ಬಳಿ ಬಂದಾಗ ರಾಜಣ್ಣನೇ ಎರಡು ಪ್ಲೇಟ್‌ದೋಸೆ ಆರ್ಡರ್ ಮಾಡಿ ದಂಡಿಯ ಕಡೆ ತಿರುಗಿ— "ಏನೋ ದಂಡಿ, ಪೆಚ್ಚಾಗಿದ್ದೀಯಾ ಏನಾದರೂ ತಮಾಷೆಯಾಗಿ ಮಾತನಾಡೋ" ಎಂದ.

"ಯಾಕೋ ಬೇಜಾರು ಕಣೋ" ಎಂದ ದಂಡಿ.

"ಏನಪ್ಪಾ ಅಂಥ ಯೋಚನೆ? ಮದುವೆ ಮಾಡಿಕೊಳ್ಳುವ ಯೋಚನೆಯೇ?"

"ಸದ್ಯ, ಅದರ ಬಗ್ಗೆ ನಾನು ಯೋಚನೆ ಮಾಡಿಯೇ ಇಲ್ಲ. ನನ್ನ ತಂಗಿಗೆ ಮೊದಲು ಮದುವೆ ಆಗಬೇಕು. ನನ್ನ ಬಗ್ಗೆ ಹೇಳೋದಾದರೆ ಇನ್ನು ಮೂರು-ನಾಲ್ಕು ವರ್ಷಗಳು ಹಾಯಾಗಿರ ಬೇಕೆಂದು ಆಸೆ" ಎಂದ ದಂಡಿ.

"ಅದ್ಯಾಕೊ ಹಾಗೆ ಹೇಳ್ತೀಯ? ಈಗ ನಾನ್ ನೋಡು. ಮದುವೆಯಾದವರೂ ಒಬ್ಬ ಮಗನ ತಂದೆಯಾದವರೂ ಎಷ್ಟು ಆರಾಮವಾಗಿದ್ದೇನೆ. ಸಂಸಾರ, ಜೀವನ ಅನ್ನೋದು ನಾವು ಹೇಗೆ ತೆಗೆದುಕೊಂಡರೆ ಹಾಗೆ."

ರಾಜಣ್ಣ ದಂಡಿಗಿಂತ ಎರಡು ವರ್ಷ ದೊಡ್ಡ ವನು. ಮದುವೆಯಾಗಿ ಗಂಡ ಹೆಂಡತಿಯರು ಅನ್ಯೋನ್ಯವಾಗಿದ್ದಾರೆ. ಮೂರು ವರ್ಷದ ಮಗನೊಬ್ಬನಿದ್ದಾನೆ. ಯೋಚನೆ, ಚಿಂತೆಗಳಿಲ್ಲದೆ ಸಂತೋಷವಾಗಿದ್ದಾನೆ ಎಂದು ಹೇಳಬಹುದು. ಮಾಣಿ ಬಂದು ಇವರ ಟೇಬಲ್ ಮೇಲೆ ದೋಸೆ ಪ್ಲೇಟ್‌ಗಳನ್ನಿಟ್ಟ. ಇಬ್ಬರೂ ತಿನ್ನಲು ಶುರು ಮಾಡಿದರು.

"ಹೋಗಲಿ, ಯಾರಾದರೂ ನಿನಗೆ ಸರಿಹೊಂದು ವಂಥ ಹುಡುಗಿಯನ್ನು ಲವ್ ಮಾಡು. ಲವ್ ಮಾಡೋದ್ರಲ್ಲಿ ಒಂದು ರೀತಿ ಥ್ರಿಲ್ ಇರುತ್ತೆ. ಅದೂ ಅಲ್ಲದೆ ನೀನು ಒಳ್ಳೆ ಫಿಲ್ಮ್ ಹೀರೊ

ಇದ್ದಹಾಗೆ ಇದ್ದೀಯಾ. ಆಕರ್ಷಕ ಮೈಕಟ್ಟಿದೆ. ಯಾವ ಹುಡುಗಿಯಾದರೂ ಪ್ರೀತಿಸ್ತಾಳೆ" ಎಂದ ರಾಜಣ್ಣ.

"ಮಣ್ಣಾಂಗಟ್ಟಿ, ನನ್ನ ಬಳಿ ಯಾವೋಳೂ ಬರಲ್ಲವಲ್ಲ. ನನ್ನ ಹತ್ರ ಬರಕ್ಕೆ ಈ ಹುಡುಗಿಯರಿಗೆ ಭಯವಿರಬಹುದು," ಎಂದ ದಂಡಿ.

"ಅಲ್ಲಾ ಕಣೋ, ಆ ಕೋಡಂಗಿ ಟೇಶಿನೇ ಅದ್ಯಾವಳನ್ನೋ ಲವ್ ಮಾಡಿದ್ದಾನಂತೆ. ಅವನೇ ಒಮ್ಮೆ ನನ್ನ ಬಳಿ ತನ್ನ ಲವ್ ಅಫೇರ್ ಬಗ್ಗೆ ಹೇಳಿಕೊಂಡಿದ್ದ. ಅವನ ಗೆಳತಿ ಜಯಶ್ರೀ ಟೈಪ್ ರೈಟಿಂಗ್ ಇನ್‌ಸ್ಟಿಟ್ಯೂಟ್‌ನಲ್ಲಿ ಪರಿಚಯವಾದಳಂತೆ. ಪರಿಚಯ ಸ್ನೇಹಕ್ಕೆ ತಿರುಗಿ ಪ್ರೇಮದಲ್ಲಿ ಪರ್ಯವಸಾನವಾಯಿತಂತೆ. ನಮ್ಮ ಜನರು ಏನಕೇನ ಪ್ರಕಾರೇಣ ಪ್ರಸಿದ್ಧಿಯಾಗಲು ಬಯಸುವರು. ಈ ನಮ್ಮ ಟೇಶಿ ತನ್ನ ಲವ್‌ನಿಂದ ಪ್ರಸಿದ್ಧಿಯಾಗಿದ್ದಾನೆ. ಅವರ ಪ್ರೇಮಕ್ಕೆ ಮದುವೆಯ ಮೋಕ್ಷವಿದೆಯೋ ಇಲ್ವೊ ಗೊತ್ತಿಲ್ಲ," ಎಂದ ರಾಜಣ್ಣ.

ರಾಜಣ್ಣ ಹೇಳಿದ ಮಾತಿಗೆ ದಂಡಿಗೆ ನಗು ಬಂತು. ಹೌದು, ಆ ವೆಂಕಟೇಶ (ಅವನನ್ನು ಎಲ್ಲರೂ ಕರೆಯುತ್ತಿದ್ದುದು ಟೇಶಿಯೆಂದು) ಹುಡುಗಿಯನ್ನು ಲವ್ ಮಾಡುತ್ತಿರುವುದರಿಂದಲೋ ಏನೋ ಅವನ ಆ ಕೋಡಂಗಿ ಮುಖದಲ್ಲೂ ಒಂದು ರೀತಿಯ ಕಳೆಯೇರಿತ್ತು. ಟ್ರಿಮ್ ಆಗಿ ಡ್ರೆಸ್ ಮಾಡಿಕೊಂಡು ಬರುತ್ತಿದ್ದ. ಇತ್ತೀಚೆಗೆ ಅವನಲ್ಲಿ ಅನೇಕ ಬದಲಾವಣೆಗಳನ್ನು ಗುರುತಿಸಿದ್ದ ದಂಡಿ.

ದೋಸೆ ತಿಂದು ಮುಗಿಸಿದರು. ಎರಡು ಕಾಫಿಗೆ ಹೇಳಿದರು. "ನೋಡೋ, ನನಗೆ ಈ ಲವ್ವು ಗಿವ್ವು ಏನೂ ಬೇಡ. ಅಮ್ಮ ಒಪ್ಪಿದ ಹುಡುಗಿಯನ್ನು ಕಣ್ಣು ಮುಚ್ಚಿಕೊಂಡು ಮದುವೆಯಾಗಿ ಬಿಡ್ತೀನೆ. ಕುಲ, ಗೋತ್ರ, ಜಾತಕಗಳನ್ನೆಲ್ಲ ನೋಡಿ ಮಾಡಿದ ಮದುವೆಗಳೇ ಫೇಯ್‌ಲ್ಯೂರ್. ಇನ್ನು ಈ ಲವ್ ಮ್ಯಾರೇಜ್‌ಗಳು ಎಷ್ಟು ಸಕ್ಸೆಸ್ ಆಗಬಹುದು? ನೀನು ನನ್ನನ್ನು ಬೇಕಾದರೆ 'ಅರಸಿಕ ನನ್ಮಗ' ಅಂತ ಬೇಕಾದರೆ ಹೇಳು. ನನಗೇನೂ ಬೇಜಾರಾಗೊಲ್ಲ" ಎಂದ ದಂಡಿ.

"ಹಾಗಲ್ಲ ಕಣೋ ನಾನು ಹೇಳೋದು, ನಿನಗೆ ಸಾಹಿತ್ಯ–ಸಂಗೀತವೆಂದರೆ ಸಾಕಷ್ಟು ಅಭಿರುಚಿ ಇದೆ. ಯಾವುದೋ ಕತ್ತೆಯಂಥ ಹುಡುಗಿ ಸಿಕ್ಕಿದರೆ ಏನು ಮಾಡ್ತೀಯೋ; ನಿನ್ನ ರಸಿಕತೆ ಎಲ್ಲಾ ನಾಶವಾದ ಹಾಗೇ ತಾನೇ?"

"ಅದರ ಬಗ್ಗೆ ನನಗೆ ಯೋಚನೆ ಇಲ್ಲ. ದುರದೃಷ್ಟವಶಾತ್ ಕತ್ತೆ ಅಂಥ ಹೆಂಡತಿ ಸಿಕ್ಕಿದಳು ಅಂತಿಟ್ಕೊ, ನನ್ನ ಕರ್ಮ ಎಂದು ತಿಳಿದು ಜೀವನ ಸಾಗಿಸುತ್ತೇನೆ. ಅವಳು ಆ ಕಡೆ ಮುಖ ತಿರುಗಿಸಿದರೆ ನಾನು ಈ ಕಡೆ ಮುಖ ತಿರುಗಿಸಿಕೊಂಡರೆ ಆಯಿತು. ಹೊತ್ತು ಹೊತ್ತಿಗೆ ಒಂದಿಷ್ಟು ಊಟ, ತಿಂಡಿ ಮಾಡಿ ಹಾಕಿದರೆ ನನ್ನ ಪುಣ್ಯವೆಂದು ಭಾವಿಸುತ್ತೇನೆ."

ರಾಜಣ್ಣ ಜೋರಾಗಿ ನಕ್ಕು, "ಯಾವುದಾದರೂ ಸಿನೆಮಾಗೆ ಹೋಗೋಣವೇ ಸಂಜೆಗೆ?" ಎಂದು ಕೇಳಿದ ದಂಡಿಯನ್ನು.

"ಯಾವುದಕ್ಕೆ ಹೋಗುವುದು? ಎಲ್ಲಾ ಅದೇ ಹಳಸಲು ಕಥೆಗಳಿರುವ ಸಿನೆಮಾಗಳೇ. ಒಂದೆರಡು ಫೈಟಿಂಗ್, ಒಂದ್ನಾಲ್ಕು ಹಾಡು, ರೇಪು, ರಾಜಕೀಯ, ಮರ್ಡರ್, ಕ್ಯಾಬರೆ ಇಷ್ಟೇ. ಇದನ್ನು ನೋಡಿ ಸಾಕಾಗಿ ಹೋಗಿದೆ. ಕ್ಯಾಬರೆಯಲ್ಲಂತೂ ನರ್ತಕಿ ತನ್ನ ಎದೆ, ತೊಡೆಗಳನ್ನು ಅಸಹ್ಯವಾಗಿ ಕುಲಕಿಸುತ್ತ ಕೋತಿ ಕುಣಿದಂತೆ ಕುಣಿದಾಗ ವಾಕರಿಕೆ ಬಂದಂತಾಗುವುದು. ಇಂಥ ಚಿತ್ರಗಳಿಗೆ ಅದರಲ್ಲೂ ಇಂಥ ದೃಶ್ಯಗಳನ್ನು ನೋಡಲು ಜನರು ಬಾಯಿ ಬಾಯಿ ಬಿಟ್ಟುಕೊಂಡು ಹೋಗುತ್ತಾರಲ್ಲ. ಈ ಜನಗಳಿಗೆ ಬುದ್ಧಿ ಯಾವಾಗ ಬರುತ್ತೊ?" ಎಂದು ಬೇಸರದ ದನಿಯಲ್ಲಿ ಹೇಳಿ ದಂಡಿ.

"ಇದ್ದಿದ್ದರಲ್ಲಿ ಯಾವುದಾದರೂ ಸುಮಾರಾಗಿರುವ ಪಿಕ್ಚರ್‌ಗೆ ಹೋಗೋಣ," ಎಂದ ರಾಜಣ್ಣ.

ಕಾಫಿ ಬಂತು. ಕುಡಿದು ಎದ್ದರು.

ಸಂಜೆ ಇಬ್ಬರೂ ಹಿಂದಿ ಚಿತ್ರ 'ಅರ್ಥ್'ಗೆ ಹೋದರು. ಅಷ್ಟು ಬೇಜಾರೆನಿಸಲಿಲ್ಲ. ಮನೆಗೆ ಬಂದಾಗ ಸಮಯ ಹತ್ತು ಗಂಟೆಯಾಗಿತು. ತಾಯಿ ಕೇಳಿದರು:

"ಎಲ್ಲಿ ಹೋಗಿದ್ಯೊ ಇಷ್ಟು ಹೊತ್ತು?"

"ಪಿಕ್ಚರ್‌ಗೆ ಹೋಗಿದ್ದೆ ಅಮ್ಮ."

ಲಲಿತ ಕೇಳಿದಳು, "ಅಣ್ಣಾ, ನಮ್ಮನೆಗೊಂದು ಟಿವಿ ತಂದಿಡು, ಅಮ್ಮನಿಗೂ. ನನಗೂ ಬೇಜಾರು ಟಿವಿ ಇದ್ದರೆ ಅಷ್ಟು ಬೇಜಾರು ಆಗೊಲ್ಲ!"

"ಇನ್ನೇನು ಕೆಲವು ತಿಂಗಳಲ್ಲೇ ಕಲರ್ ಟಿವಿ ಬರುತ್ತೆ. ಅದನ್ನೇ ತಂದುಬಿಡೋಣ" ಎಂದ ದಂಡಿ.

ವಾಸ್ತವವಾಗಿ ದಂಡಿಗೆ ಟಿವಿ ಬಗ್ಗೆ ಆಸಕ್ತಿಯೇ ಇಲ್ಲ. ಮನಸ್ಸು ಮಾಡಿದ್ದರೆ ಟಿವಿ ಒಂದನ್ನು ಯಾವಾಗಲೋ ತರಬಹುದಿತ್ತು. ಆದರೆ ಅದನ್ನು ತರದಿರುವುದರಲ್ಲಿ ಅವನ ಸ್ವಾರ್ಥವಿತ್ತು, ಒಳ್ಳೆಯ ಸ್ವಾರ್ಥ. ಅವನ ವ್ಯಾಸಂಗ ಅಧ್ಯಯನಕ್ಕೆ ಟಿವಿಯಿಂದ ತೊಂದರೆಯಾಗುತ್ತಿತ್ತು. ಅದನ್ನು ನೋಡುತ್ತಾ ಕುಳಿತರೆ ಓದುವುದು ಯಾವಾಗ?

ಟಿವಿ ವಿಚಾರ ಬಂದಾಗ ದಂಡಿಗೆ ಕೃಷ್ಣ ಭಟ್ಟರು ತಮ್ಮ ಮಗಳ ಬಗ್ಗೆ ಹೇಳಿದ ಮಾತು ಜ್ಞಾಪಕಕ್ಕೆ ಬಂತು. ಅವರು ಹೇಳಿದ್ದರು: "ನನ್ನ ಮಗಳು ಮನೆಯಲ್ಲಿ ಟಿವಿ ಇದ್ದರೂ ಅಕ್ಕಪಕ್ಕದ ಮನೆಗಳಿಗೆ ಹೋಗಿ ಅವರ ಮನೆಯಲ್ಲೇ ಟಿವಿ ನೋಡ್ತಾಳೆ. ನಾನು ಬೇಗ ಮನೆ ಸೇರೋದಿಲ್ಲ. ನನ್ನ ಹೆಂಡತಿ ಹೆಸರಿನಲ್ಲಿ Peerless Investment Agency ತೆಗೆದುಕೊಂಡುಬಿಟ್ಟಿದ್ದೇನೆ. ಇದರ ವಹಿವಾಟಿಗಾಗಿ ನನ್ನ ಸುತ್ತಾಟವಿರುತ್ತೆ. ಮನೆ ಸೇರುವುದೇ ರಾತ್ರಿ ೯ ಅಥವಾ ೯-೩೦ ಆಗಿರುತ್ತೆ. ನಾನಿರದೇ ಇದ್ದರೆ ನನ್ನ ಮಗಳಿಗೆ ಮನೆಯಲ್ಲಿ ಟಿವಿ ನೋಡಲು ಬೇಜಾರು. ಅಕ್ಕಪಕ್ಕದ ಮನೆಗಳಲ್ಲಾದರೆ ಅವಳ ಓರಗೆಯವರು ಇರ್ತಾರೆ. ಅವರ ಜತೆ ನೋಡಿ ಆನಂದಿಸಬಹುದು. ಅವಳ ತಾಯಿಯ ಮಾತನ್ನು ಅವಳು ಕೇಳೊಲ್ಲ."

ಆಗ ದಂಡಿ ಕೇಳಿದ್ದ "ನಿಮ್ಮ ಮಗಳ ವಯಸ್ಸೆಷ್ಟು? ಯಾವ ಕ್ಲಾಸಿನಲ್ಲಿ ಓದು–ತ್ತಿದ್ದಾಳೆ"

"ನನ್ನ ಮಗಳಿಗೆ ೬ ವರ್ಷ ತುಂಬಿದೆ. ಒಂದನೆ ಕ್ಲಾಸಿನಲ್ಲಿ ಓದುತ್ತಿದ್ದಾಳೆ. ಓದುದರಲ್ಲಿ ಬಹಳ ಡಲ್ ಎಂದು ಅವಳ ಟೀಚರ್ ಹೇಳ್ತಾರೆ. ಅದೇಕೋ ನನ್ನ ಮಗಳಿಗೆ ಓದೋದರಲ್ಲಿ ಆಸಕ್ತಿಯೆ ಇರುವಂತಿಲ್ಲ. ನನ್ನ ಹೆಂಡತಿಗೆ ಇವಳಿಗೆ ಓದಿ ಬರೆಸುವುದೇ ಒಂದು ದೊಡ್ಡ ಕೆಲಸವಾಗಿದೆ. ಅವಳು ಹಠಮಾಡಿದಾಗ ಇವಳಿಗೆ ಸಿಟ್ಟು ಬಂದು ಅವಳನ್ನು ಹೊಡೆಯುತ್ತಾಳೆ. ನಾನು ಮನೆಗೆ ಹೋದ ಮೇಲೆ ನನ್ನ ಮಗಳು ತನ್ನಮ್ಮನ ಮೇಲೆ ಚಾಡಿ ಹೇಳ್ತಾಳೆ. ನನ್ನ ಕಂಡರೆ ಅವಳಿಗೆ ಭಯವೇ ಇಲ್ಲ. ತನ್ನಮ್ಮನ ಕಂಡರೆ ಮಾತ್ರ ಭಯ. ನಾನು ಮಗಳಿಗೆ ತಮಾಷೆಯಾಗಿ ಹೇಳ್ತೇನೆ— 'ಏನಮ್ಮಾ, ನೀನು ಓದು ಬರೆಹ ಕಲಿತು ವಿದ್ಯಾವಂತಳಾಗಬೇಕು. ಬರೆಯುವ ಹಾಗೆ ಆಗಬೇಕು. ನಾಳೆ ನಿನಗೆ ಮದುವೆಯಾಗಿ ನಿನ್ನ ಗಂಡ ಬೇರೆ ಊರಲ್ಲಿರ್ತಾನೆ. ಆಗ ಅವನಿಗೆ ಕಾಗದ ಬರೆಯಬೇಕಾದರೆ ನಿನಗೆ ಬರೆಯಲು ಬರುವುದು ಬೇಡವೇ?' ಎಂದು. ಅದಕ್ಕೆ ಅವಳೇನು ಹೇಳಿದಳು ಗೊತ್ತೆ?" ಎಂದು ಜೋರಾಗಿ ನಕ್ಕಿದ್ದರು. 'ಬರೆಯಲು ಬರದೆ ಹೋದ್ರೆ ಏನಪ್ಪಾ, ನನ್ನ ಗಂಡನ ಜತೆ ಫೋನ್‌ನಲ್ಲಿ ಮಾತನಾಡಿದರೆ ಆಯ್ತು' ಅಂದು ಬಿಟ್ಟಳು ಗತ್ತಿನ ದನಿಯಲ್ಲಿ.' ಅವಳ ಮಾತು ಕೇಳಿ ನನಗೆ ಸುಸ್ತು. ಇನ್ನೂ ಒಂದು ತಮಾಷೆ ಕೇಳಿ ಅವಳ ಬಗ್ಗೆ.

"ಅಪ್ಪಾ, ಇವತ್ತು ಬೇಗೆ ಮನೆಗೆ ಬಂದುಬಿಡಪ್ಪ, ಇಲ್ಲದಿದ್ರೆ ಅಮ್ಮ ಹೊಡೀತಾಳೆ, ನನಗೆ ಜ್ಞಾನವೇ ತಪ್ಪಿದ ಹಾಗಾಗುತ್ತೆ' ಅಂತಾಳೆ.

ಅದಕ್ಕೆ ನಾನು 'ಆಗಲಿ ಮರಿ ಬೇಗ ಬರ್ತೀನಿ.' ನಿನಗೆ ಅ. ಆ. ಇ. ಈ. ಬರಸ್ತೀನಿ. ಚಾಕ್ಲೇಟು ತಂದು ಕೊಡ್ತೀನಿ ಅಂತ ಹೇಳ್ತೀನಿ.

'ಅದಕ್ಕೆ ಎಂತಹ ಉತ್ತರವಿತ್ತಳು ಗೊತ್ತೇ?' ಎಂದು ನಕ್ಕು ಹೇಳಿದರು.

"ಹಾಗಾದರೆ ನೀನು ನಿಧಾನವಾಗೇ ಬಾರಪ್ಪಾ ಚಾಕಲೇಟು ಬೇಡ. ಅ ಆ ಇ ಈ ಬರೆಯೋದು ಬೇಡ' ಅಂದಳು.

"ಈ ಹುಡುಗಿಗೇ ನೀವು ಏನು ಹೇಳ್ತೀರಿ. ಬುದ್ಧಿ ಇದೆ ಅಂತಿರೋ ಬುದ್ಧಿ ಇಲ್ಲ ಅಂತಿರೋ?" ಅಂತ ಭಟ್ಟರು ದಂಡಿಯನ್ನು ಕುರಿತು ಕೇಳಿದ್ದರು. ಅವರೇ ಮಾತು ಮುಂದುವರೆಸುತ್ತಾ– "ಬುದ್ಧಿ ಖಂಡಿತಾ ಇದೆ. ಅವಳು ಸೋಮಾರಿ ಕತ್ತೆ ಅಷ್ಟೆ. ಅವಳಿಗೇ ತಲೆ ತಾಕ

ಬೇಕು; ಅವಳ ಕ್ಲಾಸಿನಲ್ಲಿ ಇತರ ಮಕ್ಕಳನ್ನು ನೋಡಿ ತಾನೇ ಬುದ್ಧಿ ಕಲಿಯಬೇಕು." ಎಂದು ಹೇಳಿದ್ದರು. ಇದನ್ನೆಲ್ಲಾ ನೆನೆದು ದಂಡಿಗೆ ನಗು ಬಂದಿತ್ತು. ಈಗಿನ ಕಾಲದ ಮಕ್ಕಳಿಗೆ ಅದೇನು ಬುದ್ಧಿ, ಮಾತು? ನಾವೆಲ್ಲ ಮಕ್ಕಳಾಗಿದ್ದಾಗ ಇಷ್ಟೊಂದು ಬುದ್ಧಿ ಇತ್ತೇ ಅಂದುಕೊಂಡ.

ರಾತ್ರಿ ಊಟ ಮುಗಿಸಿ ಸ್ವಲ್ಪ ಹೊತ್ತು ಯಾವುದೋ ಪತ್ರಿಕೆಯನ್ನು ತಿರುವಿಹಾಕಿ ಮಲಗಿದ.

ಮತ್ತೆ ಮರುದಿನ ಬಿ. ಟಿ. ಎಸ್.ನಲ್ಲಿ ಪ್ರಯಾಣ. ಆ ದಿನ ಬಸ್‌ನಲ್ಲಿ ವಿಪರೀತ ರಶ್. ದಂಡಿಗೇನೋ ಸೀಟ್ ಸಿಕ್ಕಿತ್ತು. ಕೊಳ್ಳಲು ಶಕೆ ಜೇರೆ. ಎರಡು ಬಸ್‌ನ ಜನ ?) ತುಂಬಿಕೊಂಡಿದ್ದರು. ಪಾಪ! ಜನರು ಉಸಿರಾಡಲು ಸಹ ಸಾಧ್ಯವಾಗದೇ ಒದ್ದಾಡುತ್ತಿದ್ದರು. ಹಿಂದಿದ್ದ ಜನಗಳು ಮುಂದಿನ ಜನರಿಗೆ 'ಮುಂದೆ ಹೋಗ್ರಿ, ಮುಂದೆ ಹೋಗ್ರಿ' ಎಂದು ಕಿರಿಚುತ್ತಿದ್ದರು. ಅಲ್ಲಿ ಚಲಿಸಲು ಸಾಧ್ಯವಾದರೇ ತಾನೆ. ಕೆಲವರು ಒಂಟಿ ಕಾಲಲ್ಲಿ ನಿಂತಿದ್ದರು. ಫುಟ್‌ಬೋರ್ಡ್‌ನಲ್ಲಿ ಹದಿನೈದು ಜನ ನೇತು ಹಾಕಿಕೊಂಡಿದ್ದರು. ಇನ್ನು ಕೆಲವರು 'ಕಾಲನ್ನು ತುಳೀತೀರಲ್ರಿ' ಎಂದು ಕೂಗಾಡುತ್ತಿದ್ದರು. ಕಾಲನ್ನು ತುಳಿಯುವ ಮಹಾಶಯರು– 'ಮೊದಲೇ ಒಂದು ಕಾಲಲ್ಲಿ ನಿಂತಿದ್ದೇವೆ. ಇನ್ನೊಂದು ಕಾಲ್ನ ಎಲ್ಲಿಡೋದ್ರಿ? ಕುಳಿತಿರುವವರ ತಲೆಗಳ ಮೇಲೆ ಇಡಬೇಕಷ್ಟೆ!' ಎಂದು ಗೊಣಗುತ್ತಿದ್ದರು. ಕಂಡಕ್ಟರು ಸ್ಥಿತಪ್ರಜ್ಞನಂತೆ ಟಿಕೆಟ್ ಕೊಡ್ತಾನೇ ಇದ್ದ. ಬಸ್ಸೊಳಗೆ ಬರ್‍ತಾನೆ ಇದ್ದ ಜನ ಪ್ರವಾಹಕ್ಕೆ ಕೊನೆಯೇ ಇರಲಿಲ್ಲ. ಯಾರೋ ಒಬ್ರು ಕಂಡಕ್ಟರನಿಗೆ–'ಏ ಕಂಡಕ್ಟಪ್ಪಾ, ಟಿಕೆಟ್ ಕೊಡೋದು ನಿಲ್ಸಪ್ಪಾ ಬಸ್‌ನಲ್ಲಿ ಜಾಗವೇ ಇಲ್ಲ.' ಎಂದರು. ಸರಿ, ಕಂಡಕ್ಟರ್ ಸೀಟಿ ಊದಿದ. ಡ್ರೈವರ್ ನಾಪತ್ತೆ! ಜನರು ಅಸಹನೆಯಿಂದ ಬಸ್‌ನ ಮೇಲ್ಭಾಗ, ಅಕ್ಕಪಕ್ಕಗಳನ್ನು ಗುದ್ದಲು ಶುರು ಮಾಡಿದರು. ಡ್ರೈವರ್‌ನ ಅಡ್ರೆಸ್ಸೇ ಇಲ್ವಲ್ಲಪ್ಪಾ ಎಂದು ಕಂಡಕ್ಟರು ಅವನನ್ನು ಹುಡುಕಿಕೊಂಡು ಬರಲು ಹೊರಟ. ಆ ಡ್ರೈವರ್ ಅದ್ಯಾವುದೋ ಅಂಗಡಿಯ ಮುಂದೆ ಬೀಡಿ ಸೇದುತ್ತಾ ನಿಂತಿದ್ದ ಕಂಡಕ್ಟರನ ಜತೆ ಬಂದ. ಇಬ್ಬರೂ ವಾದಾಡಿಕೊಂಡೇ ಬಂದರು. ಕಡೆಗೂ ಬಸ್ ಚಲಿಸಿತು. ಬಸ್‌ನಲ್ಲಿ ಜನರ ಮಾತು ಶುರುವಾಯಿತು. ಕೆಲವರು Charter, pay scale, bonus, basic, DA ಇದರ ಬಗ್ಗೆಯೇ ಮಾತನಾಡುತ್ತಿದ್ದರು. ಕೆಲವರು ಸಿನಿಮಾಗಳ ಬಗ್ಗೆ, ಕೆಲವರು ರಾಜಕೀಯ ಪಕ್ಷ, ಆಡಳಿತದ ಬಗ್ಗೆ ಮಾತಾಡುತ್ತಿದ್ದರು. ದಂಡಿ ಮಾತ್ರ ಗಂಭೀರವಾಗಿ ಕುಳಿತು ಎಲ್ಲರ ಮಾತುಗಳನ್ನೂ ಕೇಳಿಸಿಕೊಳ್ಳುತ್ತಿದ್ದ. ಮನಸ್ಸಿನಲ್ಲೇ ಅಂದುಕೊಂಡ, ಬಸ್‌ನಲ್ಲಿ ಪ್ರಯಾಣ ಮಾಡಿದರೆ ಅದೆಷ್ಟು ವಿಷಯಗಳನ್ನು ತಿಳಿದುಕೊಳ್ಳಬಹುದು, ಎಂದು. ಕೆಲವು ಸ್ಟಾಪ್‌ಗಳಲ್ಲಿ ಕೆಲವರು ಇಳಿದರೂ ಬಸ್‌ನಲ್ಲಿದ್ದ ರಶ್ ಕಡಿಮೆಯಾಗಲಿಲ್ಲ. ಒಂದು ಸ್ಟಾಪ್‌ನಲ್ಲಿ ಒಬ್ಬ ದಡಿಯ ಇಳಿಯಲು ಒದ್ದಾಡುತ್ತಿದ್ದ. ಜನರ ನಡುವೆ ನುಸುಳಲು ಅವನಿಗೆ ಸಾಧ್ಯವಾಗುತ್ತಿರಲಿಲ್ಲ. 'ಜಾಗ ಬಿಡ್ರಿ ಜಾಗ ಬಿಡ್ರಿ,' ಎಂದು ಅರಚುತ್ತಿದ್ದ. ಜಾಗವೇ ಇಲ್ಲ ಅಲ್ಲಿ, ಜಾಗ ಬಿಡದೆ ಇದ್ರೆ ತಾನು ಇಳಿಯೋದೇ ಇಲ್ಲ ಎಂದು ಆ ದಡಿಯ ಮುನಿಸಿಕೊಂಡ. ಕಡೆಗೂ ಅವನು ಇಳಿಯಲು ಸ್ವಲ್ಪ ಜಾಗ ಮಾಡಿಕೊಟ್ಟರು. ಅವನು ಬೈದುಕೊಂಡೇ ಬಸ್‌ನಿಂದ ಇಳಿದ. ಆಗ ಯಾರೋ– 'ಈ ಮಾರಾಯ ಇಳಿದ. ಇಬ್ಬರು ಹತ್ತಬಹುದು ಈಗ' ಎಂದರು. ಜನ ಗೊಳ್ಳೆಂದು ನಕ್ಕರು. ಆ ಧಡಿಯ ಕಣ್ಣು ಕೆಂಪು ಮಾಡಿಕೊಂಡು ಇವರ ಕಡೆ ನೋಡಿದ. ಬಸ್ ಹೊರಟಿತು. ಇದನ್ನೆಲ್ಲಾ ನೋಡಿ ದಂಡಿಗೆ ಅಳಬೇಕೋ ನಗಬೇಕೋ ತಿಳಿಯಲಿಲ್ಲ. 'ಆಫೀಸು, ಬ್ಯಾಂಕು, ಕಾಲೇಜಿಗೆ ಹೋಗುವ ಸಮಯದಲ್ಲಿ ಹೆಚ್ಚಿಗೆ ಬಸ್‌ಗಳನ್ನು ಓಡಿಸಿದರೆ ಈ ಅವಸ್ಥೆ ಇರುತ್ತದೆಯೇ?' ಎಂದುಕೊಂಡ. ಸಾರಿಗೆ ವ್ಯವಸ್ಥೆ ಬಗ್ಗೆ ಏನು ಹೇಳುವುದೆಂದು ಅವನಿಗೆ ತೋಚಲಿಲ್ಲ.

ದಂಡಿಯು ಇಳಿಯುವ ಸ್ಟಾಪ್ ಬಂತು. ಬಸ್‌ನಿಂದ ಇಳಿದು ಬ್ಯಾಂಕಿಗೆ ಬಂದ.

ಸಂಜೆ ರಾಜಣ್ಣನ ಜತೆ ಶರ್ಟ್‌ಪೀಸ್ ಖರೀದಿ

ಸಲು ಬಟ್ಟೆ ಅಂಗಡಿಗೆ ಹೋದ. ಅಲ್ಲಿ ಒಂದು ಮೋಜು ನಡೆಯಿತು. ಅಂಗಡಿಯಲ್ಲಿ ನಾಲ್ಕೈದು ಹೆಂಗಸರು ಸೀರೆ ವ್ಯಾಪಾರ ಮಾಡುತ್ತಿದ್ದರು. ಅವರುಗಳು ಸೇಲ್ಸ್‌ಮ್ಯಾನ್‌ನ ಬಳಿ ಸೀರೆಗಳ ಕುರಿತು ಚರ್ಚೆ ಮಾಡುತ್ತಿದ್ದರು. 'ಈ ಸೀರೆ ಐದೂವರೆ ಮೀಟರ್ ಇದೆಯೇ? ನೀರಿಗೆ ಹಾಕಿದರೆ ಬಣ್ಣ ಹೋಗುತ್ತದೆಯೇ? ಇದು ಶುದ್ಧ ಜರಿಯೇ?' ಎಂದೆಲ್ಲಾ ಅವನನ್ನು ಕೇಳುತ್ತಿದ್ದರು. ಇದನ್ನೆಲ್ಲಾ ನೋಡುತ್ತಿದ್ದ ದಾಸಿಗೆ ನಗು ಬಂತು. ಸುಮ್ಮನಿರದೆ ಅವರೆಡೆಗೆ ತಿರುಗಿ– 'ಅಲ್ಲಾ, ಈ ದೇಹದ ಚರ್ಮವೇ ಬಣ್ಣ ಕಳೆದುಕೊಳ್ಳುತ್ತೆ, ಸುಕ್ಕು ಬೀಳುತ್ತೆ. ಅಂಥಾದ್ದರಲ್ಲಿ ಈ ಬಟ್ಟೆ ಕಾಲಕ್ರಮೇಣ ಹಾಳಾಗುವುದಿಲ್ಲವೇ? ಅದಕ್ಕೆ ಇಷ್ಟೊಂದು ವಿಚಾರಣೆ? ಬಟ್ಟೆ ಎಷ್ಟು ದಿನ ಉಪಯೋಗಕ್ಕೆ ಬರುವುದೋ ಅಷ್ಟು ದಿನ ಚೆನ್ನ,' ಎಂದು ತಮಾಷೆಯಾಗಿ ನುಡಿದ. ಆ ಹೆಂಗಸರು– 'ಇದ್ಯಾವುದಪ್ಪಾ ವಿಚಿತ್ರ ಪ್ರಾಣಿ' ಎನ್ನುವಂತೆ

ಇವನತ್ತ ನೋಡಿದ್ದರು.

ಭಾನುವಾರಗಳಲ್ಲಿ ಸಾಮಾನ್ಯವಾಗಿ ದಂಡಿ ಎಲ್ಲಿಯೂ ಹೋಗುತ್ತಿರಲಿಲ್ಲ. ಮನೆಯಲ್ಲೇ ಸಂಪೂರ್ಣ ವಿಶ್ರಾಂತಿ ಪಡೆಯುತ್ತಿದ್ದ. ಏನಾದರೂ ಓದಿ ಬರೆದು ಮಾಡುತ್ತಿದ್ದ. ಸಾಯಂಕಾಲದಲ್ಲಿ ಸ್ವಲ್ಪ ಹೊತ್ತು ವಾಕಿಂಗಿಗೆ ಹೋಗುತ್ತಿದ್ದ. ಆ ಭಾನುವಾರವೂ ದಂಡಿ ಬೆಳಿಗ್ಗೆಯಿಂದ ಸಂಜೆಯುವರೆಗೆ ವಿಶ್ರಾಂತಿ ಪಡೆದು ನಂತರ ಸುತ್ತಾಡಲು ಹೊರಟ. ಈ ಬೆಂಗಳೂರಲ್ಲಿ ಎಲ್ಲೆಲ್ಲಿ ನೋಡಿದರೂ ಸಿನಿಮಾ ಮಂದಿರಗಳು, ಹೋಟೆಲ್‌ಗಳು ಇರುವಂತೆ ದೇವಸ್ಥಾನಗಳು ಹೆಚ್ಚಿಕೊಂಡಿವೆ. ಗಲ್ಲಿಗಳಲ್ಲೂ ಸಣ್ಣ ಸಣ್ಣ ದೇವಸ್ಥಾನಗಳು. ಸುತ್ತಾಟ ಮುಗಿದ ಬಳಿಕ ಯಾವುದಾದರೂ ದೇವಸ್ಥಾನಕ್ಕೆ ದಂಡಿ ನುಗ್ಗುತ್ತಿದ್ದ. ದೇವರಲ್ಲಿ ಭಕ್ತಿಯೋ ನಂಬಿಕೆಯೋ ಗೊತ್ತಿಲ್ಲ. ಎಲ್ಲರಿಗೂ ಒಂದಲ್ಲ ಒಂದು ರೀತಿಯ ನೋವು, ಕಷ್ಟಗಳಿರುವಂತೆ ದಂಡಿಗೂ ಇದೆ. ತಂಗಿಯ ಮದುವೆ, ಮನೆ ಕಟ್ಟಿಸುವ ಯೋಚನೆ, ಹಣದ ಚಿಂತೆ... ಹೀಗೆ ಏನೇನೋ. ಯಾರ ಬಳಿಯಲ್ಲಾದರೂ ಕಷ್ಟ, ದುಃಖ ಹೇಳಿಕೊಂಡರೆ ನಗೆಪಾಟಲು. ಆ ದೇವರ ಬಳಿ ಹೇಳಿಕೊಂಡರೆ? ಅವನೇನು ನಗುವುದಿಲ್ಲ. ಅವನಿಗೇ ಅರ್ಜಿ ಹಾಕಿಕೊಳ್ಳೋದು. ಅದರ ಪರಿಣಾಮದ ಬಗ್ಗೆ ಯೋಚನೆ ಏಕೆ ಮಾಡಬೇಕು? ದೇವರಿದ್ದಾನೋ ಇಲ್ವೋ ಗೊತ್ತಿಲ್ಲ. ಏನೋ ಒಂದು ಶಕ್ತಿಯು ಕೈವಾಡವಿದೆ ಎಂದು ನಂಬಿಕೊಂಡಿದ್ದ ಅವನು. ಅದು ಒಂದು ರೀತಿಯ ಮೌಢ್ಯವೇ ಇರಬಹುದು. ಅದರಿಂದ ತೊಂದರೆ ಏನಿಲ್ಲವಲ್ಲ. ಗಣಪತಿ ದೇವಸ್ಥಾನದಿಂದ ಹೊರಗೆ ಬಂದ ದಂಡಿ ಯಾವುದೋ ಒಂದು ರಸ್ತೆಯಲ್ಲಿ ನಡೆಯುತ್ತಿದ್ದ. ಅಲ್ಲೊಂದು ಕಡೆ ಭಾರಿ ಚಪ್ಪರ. ಏನೋ ಸಮಾರಂಭವಿರಬೇಕು. ಮೈಕಾಸುರನ ಹಾವಳಿ ಅಸಾಧ್ಯವಾಗಿತ್ತು. ಒಂದೆರಡು ಟೇಬಲ್‌ಗಳು, ನಾಲ್ಕೈದು ಛೇರ್‌ಗಳನಿಟ್ಟು ವೇದಿಕೆಯಂತೆ ಸಿದ್ಧಪಡಿಸಿದ್ದರು. ಟೇಬಲ್‌ಗಳ ಮೇಲೆ ಒಂದು ದೊಡ್ಡ ಬಿಳಿ ಬಟ್ಟೆಯನ್ನು ಹಾಸಿದ್ದರು. ಅದರ ಮೇಲೆ ಎರಡು ಹೂದಾನಿಗಳನ್ನಿರಿಸಿದ್ದರು. ನಾಲ್ಕು ಗಾಜಿನ ಲೋಟಗಳಲ್ಲಿ ನೀರು ತುಂಬಿಸಿ ಅವುಗಳ ಮೇಲೆ ಮುಚ್ಚಿದ್ದರು. ಸಾಕಷ್ಟು ಜನ ನೆರೆದಿದ್ದರು. ಚಪ್ಪರದ ದ್ವಾರದಲ್ಲಿ ಒಂದು ಬರಹವಿದ್ದ ಕಪ್ಪು ಹಲಗೆಯನ್ನು ನಿಲ್ಲಿಸಿದ್ದರು. ದಂಡಿ ಆ ಕಪ್ಪು ಹಲಗೆಯ ಬಳಿ ಬಂದು ಅದರಲ್ಲಿ ಬರೆದಿದ್ದನ್ನು ಓದತೊಡಗಿದ್ದ. ಶತ ಚಿತ್ರಗಳಲ್ಲಿ ನಟಿಸಿದ ನಟನೊಬ್ಬನಿಗೆ ಸನ್ಮಾನ. ಕಾರ್ಯಕ್ರಮದ ವಿವರಣೆ ಹೀಗಿತ್ತು.

೧) ಅಧ್ಯಕ್ಷರ ಭಾಷಣ.

೨) ಮುಖ್ಯ ಅತಿಥಿಯ ಭಾಷಣ.

೩) ...ನಟನಿಗೆ ಸನ್ಮಾನ.

೪) ಅತಿಥಿಗಳಿಂದ ಮಲಾರ್ಪಣೆ.

೫) .........

೬) ವಂದನಾರ್ಪಣೆ.

ನಾಲ್ಕನೆಯ ಕ್ರಮಸಂಖ್ಯೆಯಲ್ಲಿ ಬರೆದಿದ್ದುದನ್ನು ನೋಡಿ ದಂಡಿಗೆ ಸಿಕ್ಕಾಪಟ್ಟೆ ನಗು ಬಂತು. ಮಲಾರ್ಪಣೆಯೋ, ಮಾಲಾರ್ಪಣೆಯೋ ಎಂದು ಚಿಂತಿಸತೊಡಗಿದ. ಅದ್ಯಾರ ಕೈಯಲ್ಲಿ ಅದನ್ನು ಬರೆಯಿಸಿದ್ದರೋ? ಒಟ್ಟಿನಲ್ಲಿ ಕನ್ನಡದ ಕೊಲೆಯಾಗುತ್ತಿದೆಯಲ್ಲ ಎಂದು ಮರುಗಿದ ಮನಸ್ಸಿನಲ್ಲಿ ಹೀಗಾದರೆ, ಕನ್ನಡದ ಉದ್ಧಾರವಾದ ಹಾಗೆ ಎಂದುಕೊಂಡು ಅಲ್ಲಿಂದ ಮುಂದೆ ಸಾಗಿದ. ಅಲ್ಲೊಂದು ಮನೆಯ ಮುಂದೆ ಶವದ ವ್ಯಾನ್ ನಿಂತಿತ್ತು. ಬಹಳಷ್ಟು ಜನರು ನೆರೆದಿದ್ದರು. ಅಲ್ಲಿ ಒಂದು ಅಜ್ಜಿಯ ಶವ. ಶವದ ಹಣೆಗೆ ದೊಡ್ಡದಾಗಿ ಕುಂಕುಮ ಬಳಿದಿದ್ದರು. ತಲೆಯ ತುಂಬಾ ಹೂವು. ಶವವನ್ನು ಬಿಳಿಯ ಬಟ್ಟೆಯೊಂದರಿಂದ ಹೊದಿಸಲಾಗಿತ್ತು. ಬಟ್ಟೆಯ ಮೇಲೆ ಹೂ, ಹಾರಗಳು ರಾಶಿ ರಾಶಿ. ದಂಡಿ ಸ್ವಲ್ಪ ಹೊತ್ತು ಅದನ್ನೇ ನೋಡುತ್ತಾ ನಿಂತ. ಶವವನ್ನು ಸ್ಟ್ರೆಚರ್‌ನಿಂದ ವ್ಯಾನ್‌ಗೆ ಏರಿಸಿದರು. ನಂತರ ವ್ಯಾನ್‌ನೊಳಗೆ ಹೆಂಗಸರು, ಗಂಡಸರು, ಮಕ್ಕಳು, ಚಿಳ್ಳೆ ಪಿಳ್ಳೆಗಳು ಎಲ್ಲಾ ನುಗ್ಗಿದರು. ವ್ಯಾನಿನವನು ಹೇಳ್ತಾಲೆ ಇದ್ದ 'ಏನ್ರಮ್ಮಾ, ನೀವೆಲ್ಲಾ ಬೇರೆ ವಾಹನದಲ್ಲಿ ಬನ್ನಿ. ಇದರಲ್ಲಿ ಜಾಗ ಇಲ್ಲ' ಎಂದು. ಅವರುಗಳು ಕೇಳಿವರೆ ತಾನೇ? ದಂಡಿಗೆ ಈ ದೃಶ್ಯ ನೋಡಿ ಅನಿಸಿತು. 'ನೋಡಿದ್ರಾ,

ಈ ಅಜ್ಜಿ ಸತ್ತರೆ ಅದೆಷ್ಟು ಜನ ನೆರೆದಿದ್ದಾರೆ. ಆ ವ್ಯಾನ್‌ನಲ್ಲಿ ನೂಕು ನುಗ್ಗಲೆಷ್ಟು? ತಾನು ಸತ್ತರೆ ನಾಲ್ಕು ಜನರು ಬರ್ತಾರೋ ಇಲ್ವೋ, ಅಂಥ ವ್ಯಕ್ತಿತ್ವ ತನ್ನದು. ಈ ಅಜ್ಜಿ ಅದೆಷ್ಟು ಜನಪ್ರಿಯತೆ ಪಡೆದಿದ್ದಾಳೆ!

ಆ ರಸ್ತೆ ದಾಟಿ ರಸ್ತೆಗಿಳಿದ. ಮನೆಯೊಂದರ ಚಪ್ಪರ. ಮದುವೆಯ ಸಂಭ್ರಮವಿದ್ದಿರಬೇಕು. ಮುಂದೆ ಚಪ್ಪರಕ್ಕೆ ಕಟ್ಟಿದ ಮೈಕ್‌ನಿಂದ ನಾದ ಸ್ವರ ಕೇಳಿ ಬರುತ್ತಿತ್ತು. ಆ ಸುಶ್ರಾವ್ಯ ಸಂಗೀತ ವನ್ನು ಅನುಭವಿಸುತ್ತ ಕ್ಷಣ ಕಾಲ ನಿಂತ. ದಂಡಿಗೆ 'ಇದುವೇ ಜೀವನ ಇದು ಜೀವನ' ಎಂದೆನಿಸಿತು. ಒಂದು ಕಡೆ ಸಾವು ನೋವು, ಮತ್ತೊಂದು ಕಡೆ ನಲಿವು ಸಂಭ್ರಮ ಎಂಥ ವಿಪರ್ಯಾಸ! ಏಕೆ ಒಂದೇ ಮನೆಯಲ್ಲಿ ಈ ರೀತಿ ಇರಲಾರದೇ? ಇಂಥ ಸಂದರ್ಭಗಳು ಇರುವ ಸಾಧ್ಯತೆ ಇಲ್ಲವೇ? ಮದುವೆಯಾದ ಹೊಸ ಜೋಡಿ ಹನಿ-ಮೂನ್‌ಗೆ ಹೋಗಲು ಉತ್ಸಾಹ ತಳೆದಿರುವುದು, ಜೋಡಿಯಲ್ಲೊಬ್ಬರ ಸಹೋದರಿಗೆ ವೈಧವ್ಯ ಬಂದಿರುವುದು...ಇವೆಲ್ಲಾ ಏನು?

ಜೀವಸಹಿತ ಇರೋವರೆಗೆ ಮನುಷ್ಯ ನಾದವನು ಏನಾದರೂ ಕರ್ಮ ಮಾಡ್ತಾನೇ ಇರಬೇಕು. ನಗಬೇಕು, ಅಳಬೇಕು, ಹಾಡ ಬೇಕು, ಬರೆಯಬೇಕು, ಓದಬೇಕು, ಸುತ್ತಾಡ ಬೇಕು...ಸುಮ್ಮನಿರುವ ಹಾಗೆಯೇ ಇಲ್ಲ. ಹುಟ್ಟು, ಬದುಕು, ಸಾವು, ಮದುವೆ, ಮಕ್ಕಳು...ಇವೆಲ್ಲಾ ನಾವು ಕೇಳಿದ ಹಾಗೆ ನಡೆಯುಲ್ಲವಲ್ಲ. ಜೀವನದ ನಶ್ವರತೆಯ ವಾಸ್ತವ ಸತ್ಯವನ್ನು ದಂಡಿ ಕಂಡುಕೊಂಡಿದ್ದ. ಜೀವನದ ಬಗ್ಗೆ ನಿರ್ಲಿಪ್ತ ಭಾವನೆಯನ್ನು ಹೊಂದಿದವನಾಗಿ ಬಿಟ್ಟಿದ್ದ.

ದಂಡಿಗೆ ಊರ ತುಂಬಾ ಬಂಧು ಬಾಂಧವರು. ಆದರೂ ಯಾರಲ್ಲೂ ಸಂಪರ್ಕ ಇಟ್ಟುಕೊಂಡಿರಲಿಲ್ಲ. ಯಾರ ಮನೆಗೂ ಹೋಗಿಲ್ಲ. ಈಗ ಹೊಸದಾಗಿ ಹೋಗಲು ಸಂಕೋಚ, ಹಿಂಜರಿಕೆ. ಹೋಗಿ ಅವಲಕ್ಷಣ ವಾಗುವಂತಾದರೆ ಎಂದುಕೊಂಡು ಹೋಗದಿದ್ದ-ರೇನೇ ವಾಸಿ ಎನ್ನುವ ಮನೋಭಾವ ಬೆಳೆಸಿ ಕೊಂಡಿದ್ದ. ಕಾಲಮಹಿಮೆಯೋ ಏನೋ ಸಂಬಂಧಗಳು ಕಳಚಿಕೊಳ್ಳುತ್ತಿವೆ. ಸ್ನೇಹಿತ ರಾಗಲಿ, ಬಂಧುಗಳಾಗಲಿ ಒಟ್ಟಿನಲ್ಲಿ ನಮ್ಮ ಜನಗಳಿಗೆ ತುಂಬಾ ಭಯ ಬಂದುಬಿಟ್ಟಿದೆ. ಯಾವ ಹುತ್ತದಲ್ಲಿ ಯಾವ ಹಾವೋ ಎನ್ನುವ ಹಾಗೆ ನಮ್ಮ ತಂಟೆಗೆ ಬಾರದಿದ್ದರೆ ಸಾಕಪ್ಪ ಅಂತ ಅನ್ನುವ ಜನಗಳೇ ಬಹಳ. ಒಬ್ಬರ-ನ್ನೊಬ್ಬರು ಮನೆಗೆ ಆತ್ಮೀಯತೆಯಿಂದ ಆಹ್ವಾ-ನಿಸುವುದೇ ಕಷ್ಟವಾಗಿದೆ ಅಥವಾ ಅಪರೂಪ ವಾಗಿದೆ. ಎಲ್ಲಾ ಅವರವರ ಪಾಡು ನೋಡಿ ಕೊಳ್ಳುತ್ತಿದ್ದಾರೆ. ಕಾಲ ಬಹಳ ಬದಲಾಗಿದೆ. ಹಿಂದೆ ಅಪ್ಪ, ತಾತನ ಕಾಲದಲ್ಲಿ ಹೀಗಿತ್ತೆ ಎಂದು ಕೊಳ್ಳುವನು. ದಂಡಿ ಯಾರ ಮನೆಗೂ ಹೋಗುವುದಿಲ್ಲ. ಅವನಿಗೆ ಪುಸ್ತಕಗಳೇ ಸಂಗಾತಿ ಗಳು. ಸ್ನೇಹಿತರ ಮದುವೆಗಳಿಗೆ ಒಮ್ಮೊಮ್ಮೆ ದಂದಿ ಹೋಗುತ್ತಿದ್ದ. ಮದುವೆ ಮನೆಗಳಿಗೆ ಹೋದರೆ ಅಲ್ಲೊಂದು ರೀತಿ ಫಜೀತಿ. ಅಲ್ಲಿ ಪರಿಚಯವಿರುವವನೆಂದರೆ ಮದುವೆ ಗಂಡು ಮಾತ್ರ. ಆ ಗಂಡು ಇವನನ್ನು ಯಾವಾಗಲೂ ವಿಚಾರಿಸಿಕೊಳ್ಳಲು ಸಾಧ್ಯವೇ? ಗಂಡಿನ ಬಳಿ ಎರಡು ನಿಮಿಷ ಮಾತಾಡಿ ಬಂದುಬಿಟ್ಟರೆ ಆಮೇಲೆ ಪರದೇಶಿಯಂತೆ ಅಲ್ಲಿರಬೇಕು. ಯಾರೂ ಗಮನಿಸುವುದಿಲ್ಲ. ಮತ್ತೆ ಯಾವಾಗಲೊ ಇನ್ನ್ಯಾರೋ 'ನೀವು......ರವರ ಮದುವೆಗೆ ಬರಲಿಲ್ವೆ?' ಅಂತ ಕೇಳ್ತಾರೆ. ಆಗ ಇವನು ಹೇಳಬೇಕು—'ನಾನು ಬಂದಿದ್ದೆ. ಆದರೆ ನೀವು ನನ್ನನ್ನು ಗಮನಿಸಲಿಲ್ಲ!' ಎಂದು. ಅಂಥ ಜನಪ್ರಿಯತೆ ತನ್ನದು. ತನ್ನ ಬೀದಿಯವ ರಿಗೇ ತನ್ನ ಬಗ್ಗೆ ಗೊತ್ತಿಲ್ಲ, ಎಂದುಕೊಳ್ಳುವನು ದಂಡಿ.

ಮನುಷ್ಯ ಬೆಳೆಯುತ್ತಾ ಬೆಳೆಯುತ್ತಾ ಅದೆಷ್ಟು ಯಾಂತ್ರಿಕವಾಗ್ತಾನೆ, ಸಪ್ಪೆ ಜೀವನ ನಡೆಸ್ತಾನೆ ಎಂದೆನಿಸಿತು ದಂಡಿಗೆ. ಬಾಲ್ಯದ ನೆನಪಿನ ಒಂದೊಂದೇ ಅಲೆಗಳು ತಲೆಯಲ್ಲಿ ಬರ ತೊಡಗಿದವು. ಅವನು ನಾಲ್ಕನೆಯದೋ ಐದ-ನೆಯದೋ ತರಗತಿಯಲ್ಲಿ ಓದುತ್ತಿದ್ದಾಗಿನ ಕಾಲ. ಅವನು, ಅವನ ಗೆಳೆಯರು ಬುಗುರಿ, ಗೋಲಿ, ಚಿನ್ನಿದಾಂಡು, ಕ್ರಿಕೆಟ್, ಗಾಳಿಪಟ, ಕಬಡ್ಡಿ... ಎಲ್ಲಾ ತರಹದ ಆಟಗಳನ್ನು ಆಡುತ್ತಿದ್ದರು.

ಕಿತ್ತಳೆ ಹಣ್ಣಿನ ಸಿಪ್ಪೆ ಹಿಂಡಿ ಚಿಮ್ಮುವ ರಸ ವನ್ನು ಗೋಳುವ ಕಣ್ಣಿಗೆ ಬೀಳಿಸುವುದು. ಅವರು ಉರಿಯಿಂದ ಕಣ್ಣೀರು ಸುರಿಸುತ್ತಾ ಬೈಯ್ಯು ವುದು. ಆಟವೆಲ್ಲಾ ಮುಗಿದು ಅವರವರ ಮನೆ ಗಳಿಗೆ ತೆರಳುವಾಗ ಮನೆಗೂ ಕಟ್ಟಿಕೊಂಡು ವುದು...

ಅವರ ಗುಂಪಿನಲ್ಲಿ ಸುದರ್ಶನ ಎಂಬ ಹುಡುಗ ನಿದ್ದ; ಅವನ ಬಾಯಲ್ಲಿ 'ಲ' ಉಚ್ಚಾರಣೆ ಹೊರಡುತ್ತಿರಲಿಲ್ಲ. ಅದರ ಬದಲಾಗಿ 'ನ'ಕಾರ ಹೊರಡಿಸುತ್ತಿದ್ದ. ಇವರುಗಳು ಪದ್ಯವೊಂದನ್ನು ರಚಿಸಿ ಅದನ್ನು ಅವನ ಬಾಯಿಂದ ಹೇಳಿಸಿ ನಗುತ್ತಿದ್ದರು. ಆ ಪದ್ಯ ಈ ರೀತಿ ಇರುತ್ತಿತ್ತು;

ಅಲ್ಲ ಬೆಲ್ಲ ಬಿಸಿ ಬೆಲ್ಲ
ಬೇಳೆ ಸಾರಲಿ ರುಚಿಯಿಲ್ಲ
ಕೋಳಿ ಬಾಯಲಿ ಹಲ್ಲಿಲ್ಲ
ಸಾಬಿ ತಲೆಯಲಿ ಜುಟ್ಟಿಲ್ಲ

"ಏ ಸುದಿ, ಈ ಪದ್ಯ ಹೇಳೋ" ಎಂದು ಪೀಡಿಸುತ್ತಿದ್ದರು.

ಸುದರ್ಶನ ಹೆದರಿಕೆಯಿಂದ ಹೇಳುತ್ತಿದ್ದ.

ಅನ್ನ ಬೆನ್ನ ಬಿಸಿ ಬೆನ್ನ
ಬೇನೆ ಸಾರನಿ ರುಚಿಯಿನ್ನ
ಕೋನಿ ಬಾಯನಿ ಹನ್ನಿನ್ನ
ಸಾಬಿ ತನೆಯನಿ ಜುಟ್ಟಿನ್ನ

ಇದನ್ನು ಕೇಳಿದ ಅವರುಗಳೆಲ್ಲ 'ಹೋ' ಎಂದು ಜೋರಾಗಿ ನಗುತ್ತಿದ್ದರು. ಸುದಿಗೆ ಇಷ್ಟರಿಂದಲೇ ಮುಕ್ತಿ ಇರುತ್ತಿರಲಿಲ್ಲ. ಇನ್ನೂ ಏನೇನನ್ನೋ ಅವನ ಬಾಯಿಂದ ಹೇಳಿಸಿ ಖುಷಿಪಟ್ಟುಕೊಳ್ಳುತ್ತಿದ್ದರು. ಸುದಿಯು ಹಾಗೆ ಇನ್ನೊಬ್ಬ ಪೆದ್ದ ಇದ್ದ. ಅವನ ಹೆಸರು ಬಾಲ ಕೃಷ್ಣ. ಇವರೆಲ್ಲ ಅವನನ್ನು ಬಾಲು ಎಂದು ಕರೆ ಯುತ್ತಿದ್ದರು. ಒಂದು ಹಾಳೆಯಲ್ಲಿ L R P N K ಎಂದು ಬರೆದು ಅದನ್ನು ಓದು ಹೇಳು ತ್ತಿದ್ದರು. "ತಮಿಳಿನಲ್ಲಿ ಏನರ್ಥ ಬರುತ್ತದೆ?" ಎಂದು ಕೇಳುತ್ತಿದ್ದರು. ಅವ 'ಎಲಾರ್ ಪೀ ಎನ್‌ಕೆ' ಎಂದು ಹೇಳಿ ಪೆಚ್ಚು ಪೆಚ್ಚಾಗಿ ನಿಲ್ಲು ತ್ತಿದ್ದ. ಇವರೆಲ್ಲ 'ಗೊಳ್' ಎಂದು ನಗುತ್ತಿ ದ್ದರು.

ಹಾವಾಡಿಗ, ಬುಡಬುಡಿಕೆಯವರು, ದೊಂಬ ರಾಟದವರು, ಮಾರಮ್ಮನ ವೇಷದವರು ಬಂದರೆ ಅವರ ಸುತ್ತ ದಂಡಿ ಹಾಗೂ ಅವನ ಗೆಳೆಯರು ನೆರೆಯುವರು. ಹಾವಾಡಿಗನ ಮಾಯಾಮಂತ್ರ, ದೊಂಬರಾಟದವರ ಕಸರತ್ತು, ಸರ್ಕಸ್ಸು ಎಲ್ಲ ವನ್ನೂ ವಿಸ್ಮಯದಿಂದ ನೋಡುತ್ತಾ ನಿಂತಿರುತ್ತಿ ದ್ದರು. ಮಾರಮ್ಮನ ವೇಷದವನು ಚಾವಟಿ ಯಿಂದ ಮೈಗೆ ಫಟ್ ಫಟ್ ಎಂದು ಹೊಡೆದು ಕೊಳ್ಳುವುದನ್ನು ನೋಡಿ ಭಯಪಟ್ಟುಕೊಳ್ಳು ತ್ತಿದ್ದರು. ಬುಡಬುಡಿಕೆಯವನು ಅದೇನೇನೋ ಬಾಯಲ್ಲಿ ಒದರುತ್ತಿದ್ದ—ನೋಡ್ರಪ್ಪಾ ನೋಡಿ ಕಲಿಯುಗದಾಗಿನ ಮಹಿಮೆಯಾ — ಗಂಡಸರ ಎದೇಲಿ ಮೊಲೆ ಮೂಡ್ತೈತಿ, ಹೆಂಗಸರ ಮೊಗದ ಮ್ಯಾಗೆ ಮೀಸೆ ಬರ್‍ತೈತಿ ಬುಡುಕ್ ಎಂದು ಬುಡ ಬುಡಿಕೆಯನ್ನಾಡಿಸುತ್ತಿದ್ದ. ದಂಡಿಗೆ ಅವನ ಕೈಲಿದ್ದ ಬುಡಬುಡಿಕೆಯ ಮೇಲೇ ಕಣ್ಣು. ಅದು ತನಗೆ ಸಿಕ್ಕಿದರೇ? ಎಂದುಕೊಳ್ಳುತ್ತಿದ್ದ. ಅವನ ಮಾತುಗಳು ಅರ್ಥವೇ ಆಗುತ್ತಿರಲಿಲ್ಲ.

ಮನೆಯ ಅಟ್ಟದಲ್ಲಿ ಕುಳಿತು ಶಂಕರಾಚಾ- ರ್ಯರ ಮೋಹಮುದ್ಗರದ ಶ್ಲೋಕಗಳನ್ನು ಗಟ್ಟಿಯಾಗಿ ಹಾಡಿಕೊಳ್ಳುತ್ತಿದ್ದ. 'ನಾರೀ ಸ್ತನ- ಭರ ನಾಭೀದೇಶಂ...' ಎಂದು ಹೇಳುವಾಗ ಅವನ ಅಜ್ಜಿ ಕೂಗಿಕೊಳ್ಳುತ್ತಿದ್ದರು "ಲೋ ದಂಡಿ, ಜೋರಾಗಿ ಹೇಳಬೇಡವೋ, ಮನಸ್ಸಿ ನಲ್ಲೇ ಗಟ್ಟಿ ಮಾಡಿಕೊಳ್ಳೋ" ಎಂದು. ಏಕೆ ಹೀಗೆ ಹೇಳ್ತಾರೆ ಅಜ್ಜಿ ಎಂದು ಅವನಿಗೆ ಆಗ ಅರ್ಥವಾಗುತ್ತಿರಲಿಲ್ಲ. ಈಗ ಅದರ ಅರ್ಥ ವಾಗ್ತಿದೆ.

ಬಾಲ್ಯದ ಸವಿ ನೆನಪಿನಲ್ಲೇ ದಂಡಿ ಮನೆ ಸೇರಿದ. ಲಲಿತ ಯಥಾ ಪ್ರಕಾರ ಯಾವುದೋ ಕಾದಂಬರಿ ಓದುತ್ತಿದ್ದಳು. ಮನೆಯಲ್ಲಿ ಯಾವಾ ಗಲೂ ಒಂದು ರೀತಿಯ ಮೌನವಿರುತ್ತದೆ. ತಾಯಿ, ತಂಗಿ, ದಂಡಿಗೆ ಈ ಮೌನ ಅಭ್ಯಾಸ ವಾಗಿ ಬಿಟ್ಟಿದೆ.

ಒಂದು ಮಧ್ಯಾಹ್ನ ದಂಡಿಯ ಗೆಳೆಯ ವರದ ರಾಜನ ಸವಾರಿ ಬ್ಯಾಂಕಿಗೆ ಚಿತ್ತೈಸಿತು. ವರದ ರಾಜ ಎಲ್. ಐ. ಸಿ.ಯಲ್ಲಿ ಡೆವಲಪ್‌ಮೆಂಟ್ ಆಫೀಸರನಾಗಿದ್ದಾನೆ. ಮೊದಲು ಅದೇ ಆಫೀಸಿ

ನಲ್ಲಿ ಅಸಿಸ್ಟೆಂಟನಾಗಿದ್ದು, ಈ ಆಫೀಸರನ ಹುದ್ದೆಗೆ ಅರ್ಜಿ ಹಾಕಿಕೊಂಡು, ಸಂದರ್ಶನದಲ್ಲಿ ಸೆಲೆಕ್ಟ್ ಆಗಿದ್ದ. ಡೆವಲಪ್‌ಮೆಂಟ್ ಆಫೀಸರನಾಗಿ ಐದು ವರ್ಷಗಳಾಗಿವೆ. ಅವನ ಕೈಯಲ್ಲಿ ಹೆಲ್ಮೆಟ್, ಬ್ರೀಫ್‌ಕೇಸ್ ಯಾವಾಗಲೂ ಇದ್ದದ್ದೇ. ಇದರ ಬಗ್ಗೆ ದಂಡಿ ಹಾಸ್ಯ ಮಾಡಿದ್ದಾಗ ಅವನು, "ಹೌದ್ರಪ್ಪಾ, ನಮಗೆ ಈ ಎರಡು ವಸ್ತುಗಳು ಬೆನ್ನ ಮೇಲೆ ಶನಿ ಅಂಟಿದ ಹಾಗೆ. ಇವಿಲ್ಲದಿದ್ದರೆ ನಮ್ಮ ಕೆಲಸವೇ ಸಾಗೋದಿಲ್ಲ" ಎಂದು ಹೆಲ್ಮೆಟ್ ಕಡೆ ಬೆರಳು ಮಾಡಿ ತೋರಿಸುತ್ತಾ "ಅದರಲ್ಲೂ ಈ ತಲೆಯನ್ನು ಮರೆಯೋ ಹಾಗೇ ಇಲ್ಲ" ಅಂತ ತಮಾಷೆಯಾಗಿ ಹೇಳಿದ್ದ.

ವರದರಾಜ ದಂಡಿಯ ಕೈ ಕುಲುಕುತ್ತ, "ಲೋ ದಂಡಿ, ಇವತ್ತು ಬಹಳ ಬೇಜಾರಾಗಿ ಹೋಗಿದೆ. ಯಾಕಾದರೂ ಡೆವಲಪ್‌ಮೆಂಟ್ ಆಫೀಸರ್ ಆದೆನೋ ಎಂದೆನಿಸಿದೆ. ಸದಾ ತಿರುಗಾಡುತ್ತಲೇ ಇರಬೇಕು. ಸದಾ ಬಿಸಿನೆಸ್ ಮಾತುಗಳೇ—ಪ್ರೊಪೋಸಲ್, ಪಾಲಿಸಿ, ಡಿಪಾಜಿಟ್, ಏಜೆಂಟ್ಸ್, ಸರ್ವಿಸಿಂಗ್...ಎಂದು. ನನ್ನ ಮನೆಯಲ್ಲಿ ಬೈತಾಲೇ ಇರ್ತಾರೆ—'ಮನೆಯೇ ಸೇರೋಲ್ಲ. ಹಬ್ಬ ಇಲ್ಲ, ಹರಿದಿನ ಇಲ್ಲ. ಸದಾ ನಿನ್ನ ಕೆಲಸವೇ ಆಯ್ತು. ಮಾತೆತ್ತಿದರೆ ಬಿಸಿನೆಸ್ ಅಂತ ಹೇಳ್ತಿ' ಎಂದು. ನನಗೂ ಅವರು ಹೇಳೋದು ಸರಿ ಅಂತ ಅನ್ನಿಸ್ತೆ. ಈ ಉದ್ಯೋಗ ಹಿಡಿದ ಮೇಲೆ ನಾವುಗಳು ಒಂದು ರೀತಿ ರಸವೆಲ್ಲಾ ಹೀರಿ ಹೋದ ಕಬ್ಬಿನ ಸಿಪ್ಪೆಯಂತೆ ಆಗಿಬಿಟ್ಟಿದೀವಿ. ನಮ್ಮಲ್ಲಿ ಜೀವವೇ ಇಲ್ಲ ಅಂತ ಹೇಳಬಹುದು. ನಮ್ಮದು ಸುಡುಗಾಡು ಜೀವನ. ಸಾರವೆಲ್ಲಾ ಸೋರಿ ಹೋಗಿ ಚರಟದ ರೀತಿ ಆಗಿದ್ದೀವಿ" ಎಂದು ಬೇಸರದ ದನಿಯಲ್ಲಿ ನುಡಿದ.

"ಯಾಕೋ ಅಷ್ಟು ಬೇಜಾರು ಮಾಡಿಕೊಂಡಿದ್ದೀ?" ಎಂದ ದಂಡಿ.

"ಬೇಜಾರಲ್ಲೇ ಇನ್ನೇನು? ಇವತ್ತು ಸ್ವಲ್ಪ ಬಿಡುವು ಮಾಡಿಕೊಂಡು ಬಂದೆ. ನೀನು, ರಾಜಣ್ಣ ನನ್ನ ಜತೆ ಸ್ವಲ್ಪ ಹೊತ್ತು ಕಂಪೆನಿ ಕೊಟ್ಟರೆ ನನಗೆ ಸ್ವಲ್ಪ ಜೀವ ಬರಬಹುದು. ನಿಮ್ಮ ಮಾತುಗಳನ್ನು ಕೇಳ್ತಾ ಇದ್ದರೆ ನನಗೆ ತುಂಬಾ ಖುಷಿ ಆಗುತ್ತೆ. ನನ್ನ ಫೀಲ್ಡ್‌ನಲ್ಲಿ ಒಳ್ಳೆಯ ಮಾತುಗಳಿಗೆ ಕ್ಷಾಮ ಬಂದುಬಿಟ್ಟಿದೆ. ಸಂಜೆ ಯಾವುದಾದರೂ ಬಾರ್‌ಗೆ ಹೋಗೋಣ" ಎಂದ ವರದರಾಜ.

ಬಾರ್ ಅನ್ನುವ ಶಬ್ದ ಕಿವಿಗೆ ಬಿದ್ದಾಗ ದಂಡಿಗೆ ಒಂದು ವರ್ಷದ ಹಿಂದಿನ ಘಟನೆ ನೆನಪಿಗೆ ಬಂತು. ದಂಡಿಗೆ ಕುಡಿಯುವ ಅಭ್ಯಾಸವೇ ಇರಲಿಲ್ಲ. ಆಗ ಸಹೋದ್ಯೋಗಿ ರಂಗಗೋಪಾಲ ಮಗನ ತಂದೆಯಾದ ಸಂದರ್ಭದಲ್ಲಿ ಅದರ ಸೆಲೆಬ್ರೇಷನ್ ಸಲುವಾಗಿ ಕೆಲವು ಗೆಳೆಯರಿಗೆ ಪಾರ್ಟಿ ಕೊಟ್ಟಿದ್ದ. ದಂಡಿ ಸವಿನಯವಾಗಿ ತಿರಸ್ಕರಿಸಿದ್ದನಾದರೂ ಗೆಳೆಯರ ಒತ್ತಾಯದಿಂದ ಬಾರ್‌ಗೆ ಹೋಗಿದ್ದ. ಸ್ವಲ್ಪ ಬೀರ್, ವಿಸ್ಕಿ ಕುಡಿದರೆ ತಪ್ಪೇನಿಲ್ಲ ಎಂದು ಗೆಳೆಯರ ಜತೆ ಕುಡಿದಿದ್ದ. ಮೊದಮೊದಲು ವಾಕರಿಕೆ ಬಂದಂತಾದರೂ ಆಮೇಲಾಮೇಲೆ ಅದಕ್ಕೆ ಒಗ್ಗಿಕೊಂಡ. ಪಾರ್ಟಿ ಮುಗಿದಾಗ ರಾತ್ರಿ ಹತ್ತೂವರೆ ಆಗಿತ್ತು. ದಂಡಿಗೆ ತಲೆ ಸುತ್ತುತ್ತಿತ್ತು. ನಡಿಗೆಯಲ್ಲಿ ಸಮತೋಲನ ಕಳೆದುಕೊಂಡಿದ್ದ. ಅವನ ಸ್ಥಿತಿಯನ್ನು ನೋಡಿ ರಾಜಣ್ಣ, ಶಂಕರ ಅವನ ಮನೆಯ ವರೆಗೂ ಜತೆಯಾಗಿ ಬಂದರು. ದಂಡಿಗೆ ಹೊಟ್ಟೆಯಲ್ಲಿ ಏನೋ ಒಂದು ರೀತಿ ಸಂಕಟವಾಗುತ್ತಿತ್ತು. ಮನೆಯ ಬಾಗಿಲು ತಟ್ಟಿದಾಗ ಅವನ ತಾಯಿ ಬಾಗಿಲು ತೆಗೆದರು. ದಂಡಿಯ ಪಕ್ಕದಲ್ಲಿದ್ದ ರಾಜಣ್ಣ, ಶಂಕರನನ್ನು ಅವರು ನೋಡಿದರು. ಗಾಬರಿಯಾಗಿ "ಏನೋ ದಂಡಿ?" ಎಂದು ಅವನ ಬಳಿ ಬರತೊಡಗಿದರು. ಆಗ ದಂಡಿ ಆವೇಶ ಬಂದವನಂತೆ "ನಿಲ್ಲು" ಎಂದು ಜೋರಾಗಿ ಅರಚಿದ್ದ. ಅವನ ಉದ್ದೇಶ ಅವನ ತಾಯಿ ಹತ್ತಿರ ಬಂದಾಗ ಅವರ ಮೂಗಿಗೆ ವಿಸ್ಕಿಯ ವಾಸನೆ ಹೊಡೆಯಬಾರದು ಎಂದು. ನಂತರ ಬಿರುಗಾಳಿಯಂತೆ ಬಚ್ಚಲು ಮನೆಗೆ ನುಗ್ಗಿ ಬಾಯಿಗೆ ಬೆಟ್ಟು ಹಾಕಿಕೊಂಡು ವಾಂತಿ ಮಾಡಿದ. ಅವನ ತಾಯಿಗೆ ನಿಜಕ್ಕೂ ಗಾಬರಿಯಾಯಿತು. "ದಂಡಿಗೆ ಏನಾಯ್ತು? ಏಕೆ ವಾಂತಿ ಮಾಡ್ತಿದ್ದಾನೆ?" ಎಂದು ಅವನ ಗೆಳೆಯರನ್ನು ಕೇಳಿದರು. ಆಗ ಆ ಗೆಳೆಯರು ಗುಟ್ಟು ಬಿಟ್ಟುಕೊಡದೆ — "ಏನಿಲ್ಲಮ್ಮಾ, ನಾವೆಲ್ಲಾ

ಸಿನೆಮಾಕ್ಕೆ ಹೋಗಿದ್ದೆವು. ಅಮೇಲೆ ಪಾನಿ ಪೂರಿ, ಸಮೋಸ, ಅದೂ ಇದೂ ಎಂದು ಪಟ್ಟಾಗಿ ತಿಂದೆವು. ಇವನಿಗೆ ಆ ಎಣ್ಣೆ ತಿಂಡಿ ಒಗ್ಗಲಿಲ್ಲ ಅಂತ ಕಾಣುತ್ತೆ. ಆ ಪದಾರ್ಥಗಳನ್ನು ಕಮಟು ಎಣ್ಣೆಯಲ್ಲಿ ಕರಿದಿದ್ದರೇನೋ ಹೊಟ್ಟೆ ತೊಳಸುತ್ತಿದೆ ಎಂದ. ಅದಕ್ಕೆ ಅವನ ಜತೆಯಲ್ಲಿ ನಾವು ಬಂದೆವು" ಎಂದು ಸುಳ್ಳಿನ ಕಂತೆಯನ್ನು ಬಿಚ್ಚಿದರು. ಆಗ ದಂಡಿಯ ತಾಯಿಗೆ ಸಮಾಧಾನವಾಗಿತ್ತು. ಆ ಘಟನೆಯ ನಂತರ ದಂಡಿಗೆ ಬಾರ್‌ಗೆ ಹೋಗಲು ಭಯವಾಗುತ್ತಿತ್ತು: ಗೆಳೆಯರು ಕರೆದಾಗ "'ನಿಲ್ಲು' ಆಗುತ್ತೆ ಕಣ್ರೋ" ಎಂದು ತಮಾಷೆಯಾಗಿ ಹೇಳುತ್ತಿದ್ದ. ವಾಂತಿ ಎನ್ನುವ ಬದಲು 'ನಿಲ್ಲು' ಶಬ್ದವನ್ನೇ ಬಳಸುತ್ತಿದ್ದ. ಕೆಲವು ತಿಂಗಳಲ್ಲೇ ಕುಡಿತಕ್ಕೆ ಒಗ್ಗಿ ಹೋದ. ಹಾಗೆಂದು ಸದಾ ಕುಡಿಯುತ್ತಿರಲಿಲ್ಲ. ತಿಂಗಳಿಗೊಮ್ಮೆಯೋ ಏನೋ.

ಸಂಜೆ ರಾಜಣ್ಣ, ವರದರಾಜರ ಜತೆ ದಂಡಿ ಗುಂಡು ಹಾಕಿದ್ದು ಆಯಿತು. ಫೋನಾರ್ಗ್ರಫಿಯಿಂದ ಹಿಡಿದು ಫಿಲಾಸಫಿವರೆಗೆ ಮಾತನಾಡಿದರು. ವರದರಾಜ, "ಅಬ್ಬಾ, ನನ್ನ ತಲೆ Fresh ಆಯ್ತಪ್ಪಾ" ಎಂದು ಇವರನ್ನು ಬೀಳ್ಕೊಂಡಿದ್ದ.

ದಂಡಿ ಮರುದಿನ ಬ್ಯಾಂಕಿಗೆ ಬಂದಾಗ ವೆಂಕಟೇಶ, ಸುಬ್ರಹ್ಮಣ್ಯ, ನಾಗೇಶರು ಮಾಲಿನಿ, ಸುವರ್ಣ, ದಮಯಂತಿಯರ ಬಗ್ಗೆ ಏನೇನೋ ಮಾತನಾಡುತ್ತಿದ್ದರು. ಹುಡುಗಿಯರ ಬಗ್ಗೆ ಏನೆಲ್ಲ ಮಾತನಾಡುವುದನ್ನು ಕಂಡು ದಂಡಿಗೆ ರೇಗಿ ಹೋಯಿತು. ಇವರ ಹುಳುಕುಗಳೇ ನೂರೆಂಟು. ಆ ಹುಡುಗಿಯರ ಪೂರ್ವಾಪರವನ್ನೆಲ್ಲಾ ಪತ್ತೆ ಹಚ್ಚುವ ಕೆಲಸಕ್ಕೆ ಇವರ ತಲೆಗಳು ಫಿಸಿಯೋಗವಾಗುತ್ತಿವೆಯಲ್ಲಾ ಎಂದು ಮರುಗಿದ. ಅವರ ಕಣ್ಣುಗಳೋ ಎಕ್ಸ್-ರೆ ಇದ್ದ ಹಾಗೆ. ಹುಡುಗಿಯರ ಇಡೀ ಶರೀರವನ್ನೇ ಭೇದಿಸಿ ನೋಡುತ್ತಿದ್ದವು. ಮಾಲಿನಿಯನ್ನು ಕುರಿತು ಅಸಹ್ಯಕರ ಮಾತುಗಳನ್ನು ಕೇಳುವಾಗ ಇವನಿಗೆ ವೇದನೆಯಾಗುತ್ತಿತ್ತು. ಮಾಲಿನಿ ಮುವತ್ತೈದರ ಹರೆಯದ ಹೆಣ್ಣು. ತುಂಬಿದ ಕೊಡದಂತೆ ಗರ್ವವಿಲ್ಲದಿರುವವಳು, ಆಕರ್ಷಕ ಮೈಕಟ್ಟುಳ್ಳವಳು. ಬುದ್ಧಿವಂತೆ, ಗುಣವಂತೆ. ನೋಡಲು ಚೆನ್ನಾಗಿದ್ದಾಳೆ. ಒಡಲಾಳದಲ್ಲಿ ನೋವನ್ನು ತುಂಬಿಕೊಂಡಿದ್ದಾಳೆ. ಅವಳ ಪರಿಚಯದವನೊಬ್ಬ ಇವಳನ್ನು ಗಿಲೀಟಿನ ಮಾತುಗಳಿಂದ ಒಲಿಸಿಕೊಂಡು ಮದುವೆಯಾಗುವೆನೆಂದು ಭಾಷೆ ಕೊಟ್ಟಿದ್ದನಂತೆ. ಇವಳು ಅವನನ್ನು ಮನಸಾರೆ ಪ್ರೀತಿಸಿದ್ದಳಂತೆ. ಆದರೆ ಅವನು ಇವಳಿಗೆ ಕೈಕೊಟ್ಟು ಶ್ರೀಮಂತ ಮನೆತನದ ಅತಿ ರೂಪವಂತ ಹೆಣ್ಣನ್ನು ಮದುವೆ ಮಾಡಿಕೊಂಡನಂತೆ. ಇಂಥ ವಿಶ್ವಾಸದ್ರೋಹದಿಂದ ಮಾಲಿನಿ ಬಹಳ ನೊಂದಿದ್ದಳು. ಈ ವಿಷಯವನ್ನು ಮಾಲಿನಿಯೇ ದಂಡಿಗೆ ಒಂದು ಸಲ ಹೇಳಿದ್ದಳು. ಆಗ ಅವನಿಗೆ ಎನಿಸಿತ್ತು– "ಮೋಸ, ವಂಚನೆ, ಅನ್ಯಾಯ ಇವೆಲ್ಲ ಬದುಕಿನ ಸಹಜವಾದ ಅಂಗವೇ ಎನ್ನುವಷ್ಟು ಪರಿಸ್ಥಿತಿಯು ಅವನತಿಯಾಗಿದೆಯಲ್ಲಾ" ಎಂದು. ಮೋಸ ಮಾಡಿದ ಅವನನ್ನು ಹಿಡಿದು ನಾಲ್ಕು ಬಾರಿಸಬೇಕು ಎಂದು ದಂಡಿಗೆ ಕೋಪ ಬಂದಿತ್ತು. ಅಂಥ ನೀಚನನ್ನು ಮಾಲಿನಿ ಕ್ಷಮಿಸಿದ್ದಳು. ತನಗೆ ಮದುವೆಯೇ ಬೇಡವೆಂದು ತೀರ್ಮಾನಿಸಿಕೊಂಡಿದ್ದಳು. ಅವಳ ನಿಸ್ತೇಜ ಮುಖದಲ್ಲಿ ಚಿಂತೆಯ ಗೆರೆಗಳು ಮೂಡಿರುವುದನ್ನು ದಂಡಿ ಗಮನಿಸಿದ್ದ. ತನ್ನ ನೋವು, ದುಗುಡ ಭಾವನೆಗಳನ್ನು ಹೃದಯದಲ್ಲೇ ಬಚ್ಚಿಟ್ಟುಕೊಂಡಿದ್ದಳು. ಯಾವನೋ ಒಬ್ಬ ಗಂಡಸು ತನಗೆ ಮೋಸ ಮಾಡಿದನೆಂದು ಎಲ್ಲಾ ಗಂಡಸರನ್ನು ದ್ವೇಷಿಸುತ್ತಿರಲಿಲ್ಲ ಅವಳು. ತನ್ನೊಡನೆ ಮನಬಿಚ್ಚಿ ಮಾತನಾಡುವುದಿಲ್ಲವೇ ಎಂದುಕೊಳ್ಳುತ್ತಿದ್ದ ದಂಡಿ. ಎಷ್ಟೋ ಸಲ ಅವನಿಗೆ ಅನಿಸುತ್ತಿತ್ತು– 'ಇವಳನ್ನೇ ತಾನು ಮದುವೆಯಾದರೆ ಹೇಗೆ?' ಎಂದು. ತನ್ನ ವಯಸ್ಸು ಇಪ್ಪತ್ತೆಂಟು. ಅವಳು ತನಗಿಂತ ದೊಡ್ಡವಳು. ಆದರೇನಾಯಿತು, ತಾನು ೩೫–೩೬ರ ಗಂಡಸಿನಂತೆ ಕಾಣುತ್ತೇನೆ. ಅವಳು ಒಪ್ಪಬೇಕಲ್ಲ ಎಂದುಕೊಳ್ಳುತ್ತಿದ್ದ. ತನ್ನ ಯೋಚನೆಗೆ ತನಗೇ ನಗು ಬರುತ್ತಿತ್ತು. ಕ್ರಿಯೆಗಿಂತಲೂ ಭಾವ ಮುಖ್ಯವಲ್ಲವೇ? ತನಗ್ಯಾಕೆ

ಈಗ ಮದುವೆಯ ಯೋಚನೆ ಬಂತು? ಎಂದು ಸುಮ್ಮನಾಗುತ್ತಿದ್ದ. ಮಾಲಿನಿ ತನ್ನ ಇಬ್ಬರು ತಂಗಿಯರಿಗೆ ಮದುವೆ ಮಾಡಿದ್ದಾಳೆ. ತಮ್ಮನನ್ನು ಓದಿಸುತ್ತಿದ್ದಾಳೆ. ಅವನು ಇಂಜನಿಯರಿಂಗ್‌ನ ಆರನೇ ಸೆಮಿಸ್ಟರ್‌ನಲ್ಲಿದ್ದಾನೆ.

ಇನ್ನೊಂದು ಬಾರಿ ಮಾಲಿನಿ ದಂಡಿಯ ಬಳಿ ಹೇಳಿದ್ದಳು: "ದಂಡಿ, ಹೆಣ್ಣುಮಕ್ಕಳಾಗಿ ಹುಟ್ಟಬಾರದು. ಅದರಲ್ಲೂ ಬಡವರ ಮನೆಯಲ್ಲಿ. ಹುಟ್ಟಿದರೂ ಶ್ರೀಮಂತರ ಮನೆಯಲ್ಲಿ ಹುಟ್ಟಬೇಕು. ಇಲ್ಲದಿದ್ದರೆ ಅವರಿಂದ ಯಾವ ಪುರುಷಾರ್ಥವೂ ಸಾಧ್ಯವಾಗುವುದಿಲ್ಲ." ಅವಳ ಸ್ವರದಲ್ಲಿ ನೋವು ತುಂಬಿತ್ತು. ಶುಷ್ಕವಾಗಿ ನಕ್ಕಿದ್ದಳು. ಆಗ ದಂಡಿ ತನಗೆ ತಿಳಿದ ರೀತಿಯಲ್ಲಿ ಅವಳಿಗೆ ಸಮಾಧಾನ ಹೇಳಿದ್ದ. "ನೀವೇಕೆ ಹಳೆಯದನ್ನೆಲ್ಲ ದುಃಸ್ವಪ್ನವೆಂದು ಮರೆಯಬಾರದು? ಯಾರಾದರೂ ಯೋಗ್ಯ ಪುರುಷನನ್ನು ಏಕೆ ಮದುವೆಮಾಡಿಕೊಳ್ಳಬಾರದು? ನಿಮ್ಮ ಜೀವನದಲ್ಲಿ ಹೊಸಬೆಳಕು ಮೂಡಿ ಬರಲಿ" ಎಂದು. ಆದರೆ ಅವಳು ತುಟಿಯಂಚಿನಲ್ಲೇ ನಕ್ಕು ಹೇಳಿದ್ದಳು. "ನನ್ನ ಹೃದಯ ಎಂದೋ ಸತ್ತು ಹೋಗಿದೆ. ನನ್ನ ದೇಹ ಮಾತ್ರ ಜೀವಂತವಾಗಿದೆ. ಜೀವ ಸಹಿತ ಇರುವುದೇ ಒಂದು ಹೆಚ್ಚುಗಾರಿಕೆ" ಎಂದು. ದಂಡಿಗೆ ಅವಳ ಮನೋಯಾತನೆ ಅರ್ಥವಾಗಿತ್ತು. ತೀವ್ರ ವೇದನೆ ಪಡುತ್ತ ಮೌನವಾಗಿ ಅಳುತ್ತಿರುವವಳಂತೆ ಅವಳು ಕಾಣಿಸುತ್ತಿದ್ದಳು. ಅವಳನ್ನು ವಂಚಿಸಿದ ಧೂರ್ತನನ್ನು ಸಿಗಿದು ತೋರಣ ಕಟ್ಟಬೇಕೆನಿಸಿತ್ತು ಅವನಿಗೆ.

ದಮಯಂತಿ ಯಾವನ ಜತೆಯಲ್ಲೋ ತಿರುಗಾಡ್ತಾಳೆ, ಅದರ ಬಗ್ಗೆ ಈ ಜನರಿಗೆ ಕೆಟ್ಟ ಕುತೂಹಲ. ಇವರ ಕೆಲಸ ಮತ್ತೊಬ್ಬರ ಚಲನವಲನ ಗಮನಿಸುತ್ತಿರುವುದೇ? ಇವರ ನಾಲಿಗೆಗೆ ಹತೋಟಿಯೇ ಇಲ್ಲ. ಮತ್ತೊಬ್ಬರ ಚಾರಿತ್ರ್ಯವಧೆ ಮಾಡುವುದರಲ್ಲಿ ನಿಸ್ಸೀಮರು. ಬೇರೊಬ್ಬರ ಅಪಪ್ರಚಾರದ ಬಗ್ಗೆ ಕಿವಿಗೊಡುವುದೇ ಈ ಜನರಿಗೆ ಗೊತ್ತಿರುವುದು. ಇವರ ಮನಸ್ಸು ಅಪಕ್ವ. ಇವರ ತಲೆಯಲ್ಲಿ ಬುದ್ಧಿಯಿದೆಯೇ ಎಂದುಕೊಳ್ಳುವಂತಾಯಿತು. 'ಬು' ಇರುವ ಸ್ಥಳದಲ್ಲಿ 'ಲ' ಇರಬಹುದು ಎಂದುಕೊಂಡ ದಂಡಿ.

ಹೆಣ್ಣುಮಕ್ಕಳ ಬಗ್ಗೆ ನಾವು ಕೆಟ್ಟದಾಗಿ ಯೋಚಿಸಬಾರದು. ಅವರ ನೋವಿನ ಕಣ್ನೋಟ, ಅಸಹಾಯಕರ ಬಿಸಿಯುಸಿರು, ನಮ್ಮನ್ನು ಸುಟ್ಟು ಬಿಡುತ್ತದೆ ಎಂದುಕೊಂಡ. ಮನುಷ್ಯ ಅಪಾರ್ಥಭೂತಿ. ಮೇಲ್ನೋಟಕ್ಕೆ ಸಭ್ಯನಂತೆ ಕಂಡುಬಂದರೂ ಅಂತರ್ಯದಲ್ಲಿ ಅತ್ಯಂತ ಕಪಟಿ, ಕ್ರೂರಿ, ವಿಷಯಲಂಪಟನಾಗಿರಲೂ ಸಾಧ್ಯ! ಮನುಷ್ಯ ಮೃಗವೂ ಅಲ್ಲ, ಮನುಷ್ಯ ಮನುಷ್ಯನೇ. ಮೃಗಕ್ಕೆ ಹೋಲಿಸಿ ಅದಕ್ಕೇಕೆ ಅವಮಾನ ಮಾಡಬೇಕು? ಮೃಗ ತನ್ನ ಹೊಟ್ಟೆ ತುಂಬಿದ ನಂತರ ತನ್ನೆದುರಿಗೇ ಬೇಟೆ ಇದ್ದರೂ ಸುಮ್ಮನಿರುತ್ತೆ. ಆದರೆ ಮನುಷ್ಯ! ತನ್ನ ಹೊಟ್ಟೆ ತುಂಬಿದರೂ ದುರಾಶಾಪಾತಕಿ. ಮತ್ತೂ ಬೇಕು. ಹಣ, ಹೆಣ್ಣು, ಮಣ್ಣು... ಎಲ್ಲದರ ಮೇಲೂ ತೀರದ ದಾಹ. ಷಂಡ ಮುಂಡೇ ಮಕ್ಕಳು. ಇವರನ್ನೆಲ್ಲಾ ಹಿಡಿದು ಚಚ್ಚಿಹಾಕಬೇಕೆನಿಸುವುದು. ಎಲ್ಲರೂ ಮುಖವಾಡ ಧರಿಸುವವರೇ.

ದಂಡಿ ಮಧ್ಯಾಹ್ನ ರಾಜಣ್ಣನೊಂದಿಗೆ ಕ್ಯಾಂಟೀನ್‌ಗೆ ಹೋದಾಗ ಇವರು ಕೂತಿದ್ದ ಕಡೆಗೆ ಹತ್ತಿರವಾಗಿಯೇ ವೆಂಕಟೇಶ, ಸುಬ್ರಹ್ಮಣ್ಯ, ರಾಂಗೋಪಾಲ, ಶಶಿಧರ, ಶ್ರೀಕಂಠ ಇವರೆಲ್ಲ ಕುಳಿತಿದ್ದರು. ಅವರು ಜೋರು ದನಿಯಲ್ಲಿ ಸಂಗೀತದ ಬಗ್ಗೆ ಮಾತನಾಡುತ್ತಿದ್ದರು. ಇವರಿಗೂ ಸಂಗೀತಕ್ಕೂ ಎಲ್ಲಿಯ ಸಂಬಂಧ? ಎಂದು ದಂಡಿಗೆ ನಗು ಬಂದಿತ್ತು, ಶಂಕರಾಭರಣಂ, ಸಾಗರ ಸಂಗಮಂ ಹಾಡುಗಳ ಬಗ್ಗೆ ಚರ್ಚೆ ನಡೆದಿತ್ತು. "ಎಸ್. ಪಿ. ಬಾಲಸುಬ್ರಹ್ಮಣ್ಯಂ ಅದೇನು ಹಾಡಿದ್ದಾನೆ! ಅವನ ಕಂಠಮಾಧುರ್ಯ ಅದೇನು ಇಂಪು!" ಅಂತ ಒಬ್ಬ ನುಡಿದ. "ಶಾಸ್ತ್ರೀಯ ಸಂಗೀತವೆಂದರೆ ಅದೇ ಕಣೋ" ಅಂತ ಮತ್ತೊಬ್ಬ ಹೇಳಿದ. "ಎಸ್. ಪಿ. ತರಹ ಯಾರೂ ಹಾಡಕ್ಕಾಗುಲ್ಲ ಅಲ್ವಾ" ಅಂತ ಇನ್ನೊಬ್ಬ. ದಂಡಿಗಂತೂ ಇವರ ಮಾತುಗಳನ್ನು ಕೇಳಿ ರೋಸಿ ಹೋಯಿತು. ಸಂಗೀತದ ಗಂಧವೇ ಇರದ ಈ

ಮುಂತು ಮುಂಡೇವ್ರು ಸಂಗೀತದ ಬಗ್ಗೆ ಏನೇನೋ ಮಾತನಾಡುತ್ತಾವಲ್ಲ. ಸಂಗೀತ ಎಂದರೆ ಇವರುಗಳು ಏನು ತಿಳಿದಿರುವರು? ಮೂರ್ಖರು! ಶುದ್ಧ ವಾದ. ಶಾಸ್ತ್ರೀಯ ಸಂಗೀತ ಕೇಳಿದ್ದಾರೆ ತಾನೇ ಇವರುಗಳು? ಸಿನಿಮಾ ಸಂಗೀತವನ್ನೇ ಸಂಗೀತವೆಂದು ತಿಳಿದಿದ್ದಾರಲ್ಲ. ಇವರಿಗೆ ಅದೇ ಪ್ರಿಯ. ದಂಡಿಗೆ ಸಾಹಿತ್ಯ ಹೇಗೆ ಪ್ರಿಯವಾದ ವಿಷಯವಾಗಿತ್ತೋ ಸಂಗೀತವೂ ಅಷ್ಟೇ ಪ್ರಿಯವಾಗಿತ್ತು. ಸಂಗೀತವನ್ನು ಕೇಳಿ ಅನುಭವಿಸುವ ಸಂಸ್ಕಾರವಿತ್ತು. ಅನೇಕ ರಾಗಗಳ ಪರಿಚಯವಿತ್ತು. ಸುಪ್ರಸಿದ್ಧ ಸಂಗೀತ ವಿದ್ವಾಂಸರ ಗಾಯನವನ್ನು ಕೇಳಿ ಆನಂದಿಸಿದ್ದ. ವಾದ್ಯ ಸಂಗೀತವೂ ಅವನಿಗೆ ಇಷ್ಟವಾಗಿತ್ತು. ಈಗ ಇವರ ಮಾತುಗಳನ್ನು ಕೇಳಿ 'ಮುಡ್ಡಿ ಮುಂಡೇವು' ಅಂತ ಮನಸ್ಸಿನಲ್ಲೇ ಬೈದುಕೊಂಡ.

ಲಂಚ್ ಮುಗಿಸಿಕೊಂಡು ಬಂದರು ರಾಜಣ್ಣ, ದಂಡಿ. ಮಾಲಿನಿ ತನ್ನ ಸ್ನೇಹಿತೆಯರ ಜತೆ ಮನೆಯಿಂದ ತಂದಿದ್ದ ಲಂಚನ್ನು ಆಗ ತಾನೇ ತಿಂದು ಮುಗಿಸಿದ್ದಳು. ಇವರೆಲ್ಲಾ ತಮ್ಮ ತಮ್ಮ ಸೀಟುಗಳಲ್ಲೇ ಲಂಚ್ ತೆಗೆದುಕೊಳ್ಳುವರು. ತನಗೆ ಈ ಲಂಚ್ ಮನೆಯಿಂದ ತರುವ ಅಭ್ಯಾಸವೇ ಇಲ್ಲವಲ್ಲ ಅಂದುಕೊಂಡ ದಂಡಿ. ಮಾಲಿನಿ ದಂಡಿಯಡೆಗೆ ನೋಡಿ ಮುಗುಳ್ನಕ್ಕಳು. ಇವನೂ ನಕ್ಕ. ಮಾಲಿನಿ ಸೀಟ್‌ನಿಂದ ಎದ್ದು ಇವನ ಬಳಿಗೆ ಬಂದಳು. ತನ್ನ ಬಳಿ ಇದ್ದ ಚೇರ್ ತೋರಿಸಿ "ಕುಳಿತುಕೊಳ್ಳಿ" ಎಂದ ಅವಳಿಗೆ. ಅವಳು ಕುಳಿತು ಹೇಳಿದಳು: "ದಂಡಿ, ನನ್ನ ಸ್ನೇಹಿತೆಯರೇ ನಮ್ಮಿಬ್ಬರ ಬಗ್ಗೆ ಅಪಾರ್ಥ ಕಲ್ಪಿಸಿದ್ದಾರೆ. ನಾವಿಬ್ಬರೂ ಮದುವೆ ಮಾಡಿಕೊಳ್ತೀವೆ ಎಂದೆಲ್ಲಾ ತಿಳಿದಿದ್ದಾರೆ. ನನಗೆ ಇದನ್ನು ತಡೆಯಲಾರದೆ ನಿಮ್ಮ ಬಳಿ ಹೇಳುತ್ತಾ ಇದ್ದೇನೆ. ಒಮ್ಮೊಮ್ಮೆ ಈ ಹೆಂಗಸರು ಸಹ ನನಗೆ ಕಿರಿಕಿರಿ ಉಂಟು ಮಾಡ್ತಾರೆ. ಇವರಿಗೂ ಕಿಲ್ಬಿಷ ಬುದ್ಧಿ ಇದೆ. ನೋಡಿ, ಆ ಲೀಲಾಳನ್ನು ಅದೆಷ್ಟು ಪರಿಹಾಸ್ಯ ಮಾಡಿಕೊಂಡು ನಗ್ತಾರೆ. ಅವಳಿಗೆ ಸ್ವಲ್ಪ ಹಲ್ಲುಬ್ಬು ಇದೆ. ಮಾತನಾಡುವಾಗ ತೊದಲುತ್ತದೆ. ಅವರ ಬಗ್ಗೆ ಅದೆಷ್ಟು ಆಡಿಕೊಳ್ತಾರೆ. ಈ ಜನರಿಗೆ ಮತ್ತೊಬ್ಬರ ಕುಂದುಕೊರತೆಗಳನ್ನು ಎತ್ತಿ ತೋರಿಸುವುದೇ ಒಂದು ರೀತಿಯ ಆನಂದವನ್ನು ಕೊಡುತ್ತದೆಯೇನೋ. ನೀವು ಹೇಳ್ತೀರಿ, ಗಂಡಸರು ಹೆಂಗಸರನ್ನು ಆಡಿಕೊಳ್ತಾರೆ, ಗೇಲಿ ಮಾಡ್ತಾರೆ ಎಂದು. ಈ ಹೆಂಗಸರೇ ತಮ್ಮವರನ್ನು ಗೇಲಿ ಮಾಡಿಕೊಂಡು ಖುಷಿಪಟ್ಟುಕೊಳ್ಳುವರಲ್ಲ, ಇದಕ್ಕೇನು ಹೇಳ್ತೀರಿ?"

"ಯಾವುದನ್ನೂ ಅತಿಯಾಗಿ ಹಚ್ಚಿಕೊಳ್ಳಬೇಡಿ. ಅವರ ಮಾತುಗಳನ್ನು ಲೆಕ್ಕಕ್ಕೆ ಇಡಬೇಡಿ. ಉದಾಸೀನತೆಯನ್ನು ತೋರಿಸಿ.. ಸುಮ್ಮನಾಗ್ತಾರೆ" ಎಂದ ದಂಡಿ.

ಸಾಯಂಕಾಲ ಮನೆಗೆ ಬಂದಾಗ ದಂಡಿಯ ತಾಯಿ ಅವನಿಗೆ ಒಂದು ಪತ್ರವನ್ನು ಕೊಟ್ಟರು, ಪತ್ರ ಶಿವರಾಮುವಿನಿಂದ ಬಂದಿತ್ತು. ಶಿವರಾಮು ಇವನ ಆಪ್ತ ಸ್ನೇಹಿತ. ಕಾಲೇಜಿನಲ್ಲಿ ಓದುತ್ತಿದ್ದಾಗ ಸಹಪಾಠಿಯಾಗಿದ್ದ, ಬಿ. ಎಸ್‌ಸಿ. ಮುಗಿಸಿದ ನಂತರ ಬಿ. ಎಡ್. ಮಾಡಿ ಈಗ ತುಮಕೂರಿನ ಹೈಸ್ಕೂಲ್ ಒಂದರಲ್ಲಿ ಉಪಾಧ್ಯಾಯನಾಗಿದ್ದಾನೆ. ಅವನಿಗೆ ಹುಡುಗಿಯೊಬ್ಬಳು ನಿಶ್ಚಯವಾಗಿದ್ದಾಳೆಂದೂ ಇನ್ನೆರಡು ತಿಂಗಳುಗಳಲ್ಲೇ ವಿವಾಹವಾಗುವುದಾಗಿಯೂ ಬರೆದಿದ್ದ. ದಂಡಿಗೆ ಇವನು ಮದುವೆಯಾಗುವ ಸಮಾಚಾರ ತಿಳಿದು ಬಹಳ ನಗು ಬಂತು. ಕಾಲೇಜು ದಿನಗಳ ನೆನಪು ಅಲೆ ಅಲೆಯಾಗಿ ಬರತೊಡಗಿತು.

ದಂಡಿ ಕಾಲೇಜಿನಲ್ಲಿ ಓದುತ್ತಿದ್ದಾಗ ಶಿವರಾಮು, ನಟರಾಜ ಆತ್ಮೀಯ ಸ್ನೇಹಿತರಾಗಿದ್ದರು. ಮೂವರೂ ಗಳಸ್ಯ ಕಂಠಸ್ಯ ಎನ್ನುವಂತಿದ್ದರು. ಈ ಶಿವರಾಮುವಿಗೆ ಹುಡುಗಿಯರನ್ನು ನೋಡುವ ಹುಚ್ಚು. ತನ್ನ ಎದುರುಮನೆ ಹುಡುಗಿ ಪಾರಿಜಾತಳ ಮೇಲೆ ಅದೇನೇನೋ ಕವನಗಳನ್ನೆಲ್ಲಾ ರಚಿಸಿದ್ದ. ಅವುಗಳನ್ನು ತಮ್ಮ ಮುಂದೆ ಓದುತ್ತಿದ್ದ. ವಾರಕ್ಕೆ ಮೂರು ದಿನ ಅಥವಾ ನಾಲ್ಕು ದಿನ ದೇವಸ್ಥಾನಗಳಿಗೆ ಭೇಟಿ ಕೊಡುತ್ತಿದ್ದ. ಕಾರಣ ಇಷ್ಟೇ, ಅಲ್ಲಿ ಬರುವ ಹುಡುಗಿಯರು, ಹೆಂಗಸರನ್ನು ನೋಡುವ ಬಯಕೆ. ತಾನು ದೇವಸ್ಥಾನಕ್ಕೆ ಹೋಗುವುದಲ್ಲದೆ ತನ್ನನ್ನೂ ನಟರಾಜನನ್ನೂ ಬಲವಂತವಾಗಿ ಅಲ್ಲಿಗೆ ಕರೆದೊಯ್ಯುತ್ತಿದ್ದ.

ಅದರಲ್ಲೂ ಗುರುವಾರ ಬಂದರಂತೂ ರಾಘವೇಂದ್ರ ಸ್ವಾಮಿ ಮಠಕ್ಕೆ ತಪ್ಪದೆ ಕರೆದು ಕೊಂಡು ಹೋಗುತ್ತಿದ್ದ. ಈ ರಾಘವೇಂದ್ರ ಸ್ವಾಮಿಗಳ ಪ್ರಸಿದ್ಧಿಯೋ, ಮಹಿಮೆಯೋ ಒಟ್ಟಿನಲ್ಲಿ ಬಹಳ ಹೆಂಗಸರು ಹುಡುಗಿಯರು ಬಂದಿರುತ್ತಿದ್ದರು. ಒಮ್ಮೆ ಹೀಗೆ ಒಂದು ಗುರುವಾರ ಮಠಕ್ಕೆ ಹೋಗಿದ್ದರು. ಅಲ್ಲಿ ಒಬ್ಬ ಹೆಂಗಸು ಎಲ್ಲರ ಕಣ್ಣಿಗೂ ಬೀಳುವಂತಿದ್ದಳು. ಅವಳ ಶರೀರ ಬಹಳ ಅಗಾಧವಾಗಿತ್ತು. ಸಾಲದುದಕ್ಕೆ ಪಾರದರ್ಶಕ ಸೀರೆ ಬೇರೆ ಉಟ್ಟಿದ್ದಳು. ಈ ಶಿವರಾಮು ಮೊದಲೇ ಕೋತಿ. ಅವಳನ್ನೇ ತದೇಕ ದೃಷ್ಟಿಯಿಂದ ನೋಡುತ್ತಿದ್ದ. ಪಾರದರ್ಶಕ ಸೆರಗಿನಿಂದ ಅವಳ ಎದೆಯ ಸೀಳು ನಿಚ್ಚಳವಾಗಿ ಕಾಣುತ್ತಿತ್ತು. ಶಿವರಾಮು ತನ್ನ ಗೆಳೆಯರಿಗೆ ಈ ದೃಶ್ಯವನ್ನು ತಿವಿದು ತಿವಿದು ತೋರಿಸಿದ್ದ. ಆಗ ದಂಡಿ ಗಂಭೀರವಾಗಿರುವಂತೆ ಅವನಿಗೆ ಬುದ್ಧಿ ಹೇಳಿದ್ದ. ಮಠದಿಂದ ಹೊರಗೆ ಬಂದ ನಂತರ ಆ ಹೆಂಗಸಿನ ಬಗ್ಗೆ ಮಾತ ನಾಡತೊಡಗಿದ.

"ಲೋ ದಂಡಿ, ಆ ಹೆಂಗಸಿನ ಎದೆ ಸೈಜಿನ ಬ್ರಾ ಸಿಗುತ್ತೇನೋ ಅಂಗಡಿಯಲ್ಲಿ?"

"ನಿನಗ್ಯಾಕೆ ಅವರ ಬಗ್ಗೆ ಯೋಚನೆ ಬಂತು?" ಎಂದ ದಂಡಿ.

"ಏನಿಲ್ಲ, ಅವಳ ಸೈಜಿನ ಬ್ರಾ ಅಂಗಡಿಯಲ್ಲಿ ಸಿಗದಿದ್ದರೆ ಏನು ಮಾಡ್ತಾಳೆ ಅಂತ."

"ಅಂಗಡಿಯಲ್ಲಿ ಸಿಗದಿದ್ದರೆ ದರ್ಜಿ ಕೈಯಲ್ಲಿ ಅಳತೆಗೆ ಸರಿಯಾಗಿ ಬ್ರಾ ಸ್ಟಿಚ್ ಮಾಡಿಸ್ತಾಳೆ." ಎಂದು ಹಾಸ್ಯವಾಗಿ ನುಡಿದ ದಂಡಿ.

"ಅಲ್ಲ ಆ, ಹೆಂಗಸನ್ನು ಕಟ್ಟಿಕೊಂಡಿರುವ ಗಂಡಸು ಹೇಗಿರ್ತಾನೋ ಎಂದು ನನಗೆ ಕುತೂಹಲ."

"ಅವಳಿಗೆ ಮದುವೆಯಾಗಿದೆ ಎಂದು ಹೇಗೆ ಹೇಳ್ತೀ?"

"ಅವಳ ಕಾಲ್ ಬೆರಳಲ್ಲಿ ಕಾಲುಂಗುರ ಇದೆ."

"ಆ ಗಂಡ ಎನಿಸಿಕೊಂಡವನು ನರಪೇತಲನಾದರೆ ಅವನು ಸತ್ತ. ಅವ ಯಾವಾಗಲೂ ಆರ್ಥೋಪೀಡಿಕ್ ಸರ್ಜನ್ ಬಳಿ ಚಿಕಿತ್ಸೆ ಪಡೆಯುತ್ತಾ ಇರಬೇಕು." ಎಂದು ಏನೇನೋ ಮಾತ ಗುಟ್ಟಿದ್ದ.

ಈ ಶಿವರಾಮು ಛದ್ಮವೇಷ ಹಾಕುವುದರಲ್ಲಿ ಪಾರಂಗತನಾಗಿದ್ದ. ಎರಡನೆ ವರ್ಷದಲ್ಲಿ ಓದುತ್ತಿದ್ದಾಗ ಕಾಲೇಜಿನ ವಾರ್ಷಿಕೋತ್ಸವದಂದು ಇವನು ಸಹ ಭಾಗವಹಿಸಿದ್ದ. ಫ್ಯಾನ್ಸಿ ಡ್ರೆಸ್ ಸ್ಪರ್ಧೆಯಲ್ಲಿ ಇವನು ಕ್ಯಾಬರೆ ನರ್ತಕಿಯ ವೇಷ ಧರಿಸುವವನಿದ್ದ. ಈ ವೇಷಕ್ಕೆ ತಕ್ಕ ಬಟ್ಟೆ ಬರೆ, ರವಿಕೆ, ಎಲ್ಲವನ್ನು ಅದೆಲ್ಲಿಂದಲೋ ಹೊಂದಿಸಿ ಕೊಂಡಿದ್ದ. ಸೀಳು ಮ್ಯಾಕ್ಸಿಯಿಂದ ಅವನ ರೋಮಭರಿತ ಕಾಲುಗಳು ಕಾಣಿಸುತ್ತಿದ್ದುವು. ತನ್ನ ಕಾಲುಗಳ ಬಗ್ಗೆ ಅವನು ಮರೆತಿದ್ದ ಎಂದು ತೋರುತ್ತದೆ. ಅವನ ಗೆಳೆಯರಲ್ಲಿ ಯಾರೋ ಇದನ್ನು ನೋಡಿ 'ಹೋ' ಎಂದು ನಕ್ಕಿದ್ದರು. ಆಗ ಅವನೇನು ಮಾಡಿದ ಗೊತ್ತೇ— ಅಷ್ಟೇ! ಯಾರಿಂದಲೋ ಕಡ್ಡಿ ಪೆಟ್ಟಿಗೆ ತೆಗೆದು ಕೊಂಡು ಕಡ್ಡಿ ಗೀರಿ ಕಾಲಿನ ರೋಮಗಳನ್ನೆಲ್ಲಾ ಸುಟ್ಟು ಹಾಕಿದ. ನಂತರ ಪೌಡರ್ ಬಳಿದ ಅದರ ಮೇಲೆ. ಅವನ ಕಾಲುಗಳು ನುಣ್ಣ



"ನನ್ಮಗ ನಿಮ್ಮ ಮಗಳನ್ನು ಮದುವೆ ಯಾಗೋಕ್ಕೆ ಒಂಟಿ ಕಾಲಲ್ಲಿ ನಿಂತಿದ್ದಾನ್ರೀ."

ಕಡಿಮೆ ಹೆಣ್ಣಿನ ಕಾಲುಗಳಂತೆ ಕಂಡವು. ಒಟ್ಟಿನಲ್ಲಿ ಒರಟು ಮನುಷ್ಯ ಅವನು.

ಇವನದು ಇನ್ನೂ ಏನೇನೋ ವಿಕೃತ ಚೇಷ್ಟೆಗಳು. ರೈಲಿನಲ್ಲಿ ಹೋಗುವಾಗ ಟಿಕೆಟ್ ತೆಗೆದುಕೊಂಡಿದ್ದರೂ ತೆಗೆದುಕೊಳ್ಳದವನಂತೆ ನಟಿಸುತ್ತಿದ್ದ. ಟಿಕೆಟ್ ಚೆಕ್ ಮಾಡುವವನಿಗೆ ಅನುಮಾನ ಬರುತ್ತಿತ್ತು. ಚೆಕ್ ಮಾಡುವ ಸಮಯಕ್ಕೆ ಸರಿಯಾಗಿ ಶೌಚಕ್ಕೆ ಹೋಗುತ್ತಿದ್ದ. ಎಷ್ಟು ಹೊತ್ತಾದರೂ ಹೊರಗೆ ಬರುತ್ತಿರಲಿಲ್ಲ. ಅನುಮಾನ ಇನ್ನೂ ಜಾಸ್ತಿಯಾಗುವುದಕ್ಕೆ ಆಸ್ಪದ ಕೊಡುತ್ತಿದ್ದ. ಸ್ವಲ್ಪ ಹೊತ್ತಾದ ನಂತರ ಅಲ್ಲಿಂದ ಹೊರಬರುತ್ತಿದ್ದ. ಸಂಶಯದಿಂದ ಟಿಕೆಟ್ ತೋರಿಸುವಂತೆ ಕೇಳಿದಾಗ ತನ್ನ ಜೇಬಿನಿಂದ ಟಿಕೆಟ್ಟನ್ನು ನಿಧಾನವಾಗಿ ತೆಗೆದು ತೋರಿಸುತ್ತಿದ್ದ. ಆಗ ಎಲ್ಲರೂ ಬೆಪ್ಪಾಗುತ್ತಿದ್ದರು. ಬಸ್ ವಿಷಯದಲ್ಲಿಯೂ ಅಷ್ಟೇ. ಬಸ್ ಹೊರಡಲು ಶುರುವಾಯಿತು ಎನ್ನುವಾಗ ಅದೆಲ್ಲಿಂದಲೋ ಓಡಿ ಬರೋದು. ಇವನನ್ನು ನೋಡಿದ ಕಂಡಕ್ಟರು, ಪ್ರಯಾಣಿಕರು ಬಸ್ಸನ್ನು ನಿಲ್ಲಿಸುವಂತೆ ಡ್ರೈವರನಿಗೆ ಹೇಳುವುದು. ಬಸ್ ನಿಂತಾಗ ಅದರಲ್ಲಿ ಹತ್ತಿಕೊಳ್ಳದೆ ಬಸ್ಸನ್ನೂ ದಾಟಿಕೊಂಡು ಓಡುವುದು. ಆಗ ಕಂಡಕ್ಟರು, ಡ್ರೈವರುಗಳು ಬೇಜಾರಿನಿಂದ ಸಿಡುಕುವುದು- ಹೀಗೆ ಏನೇನೋ ಆಟವಾಡ್ತಿದ್ದ. ಇವನ ಮಂಗ ಚೇಷ್ಟೆ ಹೇಳ್ತಾ ಹೋದರೆ ಕೊನೆಯೇ ಇಲ್ಲ "ನಾನು ಗಿಟಾರ್ ಬಾರಿಸ್ತೀನಿ ಕಣ್ರೋ" ಎಂದು ತನ್ನ ಜನಿವಾರವನ್ನೇ ಸ್ಟೈಲ್ ಆಗಿ ಹಿಡಿದುಕೊಂಡು ಗಿಟಾರ್ ಬಾರಿಸುವಂತೆ ನಟಿಸುತ್ತಿದ್ದ. ದಂಡಿ ಹಾಗೂ ಇತರರಿಗೆ ಇವನು ಪುಕ್ಕಟೆ ಮನೋರಂಜನ ನೀಡುತ್ತಿದ್ದ. ಅವನ್ನೆಲ್ಲ ನೆನೆದು ದಂಡಿಗೆ ನಗು ಉಕ್ಕಿ ಬಂತು. ಇಂಥವನು ಮದುವೆ ಮಾಡಿಕೊಂಡು ಹೆಂಡತಿಯೊಂದಿಗೆ ಜವಾಬ್ದಾರಿಯುತ ಬಾಳ್ವೆಯನ್ನು ನಡೆಸುವನೇ ಎಂದುಕೊಂಡ.

ದಿನಗಳು ಕಳೆಯುತ್ತಿದ್ದವು. ಒಂದು ಬೆಳಿಗ್ಗೆ ಯಥಾಪ್ರಕಾರ ದಂಡಿ ಬ್ಯಾಂಕಿಗೆ ಬರಲು ಬಸ್ನಲ್ಲಿ ಪ್ರಯಾಣ ಮಾಡುತ್ತಿದ್ದ. ಯಾವುದೋ ಒಂದು ಸ್ಟಾಪ್‌ನಲ್ಲಿ ನಾಲ್ಕೈದು ಹುಡುಗಿಯರು ಬಸ್ ಹತ್ತಿಕೊಂಡರು. ಕಾಲೇಜು ಹುಡುಗಿಯರಿರಬೇಕು. ಹದಿನೆಂಟು, ಹತ್ತೊಂಬತ್ತು ಪ್ರಾಯದವರಿರಬೇಕು. ಇವನ ಕಡೆ ನೋಡುತ್ತ ಏನೇನೋ ಗುಸಪಿಸ ಮಾತನಾಡಿಕೊಳ್ಳುತ್ತಿದ್ದರು. ದಂಡಿ ಅವರೆಲ್ಲರನ್ನೂ ಗಮನಿಸಿ ನೋಡತೊಡಗಿದ. ಅವರು ಸೀಟ್ ಇಲ್ಲದೆ ನಿಂತುಕೊಂಡಿದ್ದರು. ಮತ್ತೊಂದು ಸ್ಟಾಪ್‌ನಲ್ಲಿ ಇನ್ನಷ್ಟು ಜನ ಬಸ್‌ಗೆ ಹತ್ತಿಕೊಂಡರು. ಈ ಹುಡುಗಿಯರು ಹಿಂದೆ ಹಿಂದೆ ಬರಬೇಕಾಯಿತು. ಡ್ರೈವರ್ ಒಮ್ಮೆ ಸಡನ್ ಬ್ರೇಕ್ ಹಾಕಿದಾಗ ಒಬ್ಬಳು ಹುಡುಗಿ ಇವನ ಮೈಮೇಲೆ ಬಿದ್ದಳು. ಇವನು ತುದಿಯ ಸೀಟ್‌ನಲ್ಲಿ ಕುಳಿತಿದ್ದ ಬೇರೆ. ಇವನ ಮೇಲೆ ಬಿದ್ದ ಹುಡುಗಿ ಸಾವರಿಸಿಕೊಂಡು ನಿಂತಳು. ಆ ಹುಡುಗಿಯ ಕಡೆಗೊಮ್ಮೆ ನೋಡಿದ. ಅವಳು ಒಂದು ಕಣ್ಣು ಹೊಡೆಯಬೇಕೇ? ಇವನು ತಬ್ಬಿಬ್ಬಾದ. ಈ ಹುಡುಗಿಯರ ಕಾಲು ಬೆರಳುಗಳಲ್ಲಿ ಕಾಲುಂಗುರಗಳು ಬೇರೆ ಇದ್ದವು. ಇವರಿಗೆ ಮದುವೆಯಾಗಿದೆಯೇ ಎಂದುಕೊಳ್ಳುವಂತಾಯಿತು. ಆದರೆ ಅವರು ಮದುವೆಯಾದವರಂತೆ ಕಂಡುಬರಲಿಲ್ಲ. ಹಾಗಾದರೆ ಈ ಕಾಲುಂಗುರಗಳು? ಫ್ಯಾಷನ್‌ಗಾಗಿ ಧರಿಸುವರೇನೋ ಎಂದು ಯೋಚಿಸಿದ. ಬರೀ ಕಾಲುಂಗುರವೇನು? ಇತ್ತೀಚೆಗೆ ಮದುವೆಯಾಗದ ಹುಡುಗಿಯರು ಕೊರಳಲ್ಲಿ ಕರಿಮಣಿ ಸರ ಧರಿಸಿರುವುದನ್ನೂ ಅವನು ನೋಡಿದ್ದ. ಇದು ಫ್ಯಾಷನ್‌ಗಾಗಿಯೋ ಇಲ್ಲ ಸ್ವರಕ್ಷಣೆಗಾಗಿಯೋ ಎಂಬುದು ಅವನಿಗೆ ಹೊಳೆಯಲಿಲ್ಲ.

ಅಂದು ಬ್ಯಾಂಕಿನಲ್ಲಿ ಪ್ರೊಮೋಷನ್, ಟ್ರಾನ್ಸ್‌ಫರ್‌ಗಳ ಬಗ್ಗೆಯೇ ಮಾತುಕತೆ. ದಂಡಿಗೂ ಸಬ್ ಅಕೌಂಟೆಂಟ್ ಆಗಿ ಬಡ್ತಿ ಸಿಕ್ಕಿತ್ತು. ವೆಲ್ಲೂರಿಗೆ ವರ್ಗಾಯಿಸಿದ್ದರು. ಕಳೆದ ವರುಷವೇ ಅವನಿಗೆ ಬಡ್ತಿ ಸಿಕ್ಕಿದ್ದರೂ ಬೇರೆ ಊರಿಗೆ ಹೋಗಲು ಬೇಸರಿಸಿ ಅದನ್ನು ತಿರಸ್ಕರಿಸಿದ್ದ. ಈ ಸಲವಾದರೂ ಈ ಬಡ್ತಿ ಸ್ವೀಕರಿಸಬೇಕೆಂದುಕೊಂಡ. ಆದರೂ ಹೋಗಲೇ? ಬೇಡವೇ? ಎಂಬ ದ್ವಂದ್ವದಲ್ಲಿ ಸಿಲುಕಿದ. ಶಾಸ್ತ್ರಿಗೆ ಸಹ ಬಡ್ತಿ ಸಿಕ್ಕಿ ಕೊಯಿಮುತ್ತೂರಿಗೆ ವರ್ಗವಾಗುವುದರಲ್ಲಿದ್ದ. ಶೆಣೈಗೆ ಧರ್ಮಪುರಿಗೆ ಸಿಕ್ಕಿತ್ತು. ಅವರಿಬ್ಬರೇನೋ ಬೇರೆ ಊರಿಗೆ ಹೋಗಲು ಸಿದ್ಧವಾಗಿದ್ದರು. ದಂಡಿಗೆ

ಮಸ್ಕಾ ಹೊಡೆಯುವ ಬುದ್ಧಿ ಇಲ್ಲ. ಶಿಫಾರಸು, ವಶೀಲಿ ಇಲ್ಲವೇ ಇಲ್ಲ. ಪ್ರೊಮೋಷನ್ ಅದರ ಪಾಡಿಗೆ ಅವನ ಪಾಲಿಗೆ ಸಿಕ್ಕಿತ್ತು. ಬ್ಯಾಂಕ್ ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದ.

ಮನೆಗೆ ಬಂದ ದಂಡಿ ತಾಯಿ ತಂಗಿಯರಿಗೆ ತನಗೆ ಬಡ್ತಿ ಸಿಕ್ಕಿ ಬೇರೆ ಊರಿಗೆ ಹೋಗಬೇಕಾದುದನ್ನು ಹೇಳಿದ. ಅವರುಗಳೇನೋ "ಹೋಗು, ಪರವಾಗಿಲ್ಲ" ಎಂದು ಧೈರ್ಯ ಹೇಳಿದರು.

ಇಷ್ಟು ವರ್ಷ ಬೆಂಗಳೂರಿನಲ್ಲೇ ಇದ್ದು ಈಗ ಪರವೂರಿಗೆ ಹೋಗಬೇಕಾಗಿ ಬಂದುದು, ಅಲ್ಲಿ ವಾಸ ಮಾಡಬೇಕಾಗಿ ಬಂದು ದಂಡಿಗೆ ಸ್ವಲ್ಪ ಯೋಚನೆಯನ್ನುಂಟುಮಾಡಿತ್ತು. ಕಡೆಗೂ ವೆಲ್ಲೂರಿಗೆ ಹೋಗುವುದೆಂದು ತೀರ್ಮಾನಿಸಿಕೊಂಡ. ವೆಲ್ಲೂರೇನು ದೂರವಿಲ್ಲ. ನಾಲ್ಕು ಅಥವಾ ನಾಲ್ಕೂವರೆ ಗಂಟೆಗಳ ಬಸ್ ಪ್ರಯಾಣ. ಬಸ್ ಪ್ರಯಾಣ ಬೇಜಾರಾದರೆ ರೈಲಿನಲ್ಲಿ ಕಾಟ್ಪಾಡಿಯವರೆಗೆ ಹೋಗಿ ಅಲ್ಲಿಂದ ೧೦–೧೫ ನಿಮಿಷದ ಬಸ್ ಪ್ರಯಾಣ ಮಾಡಬಹುದು. ಆ ಊರನ್ನು ನೋಡಿಯೇಬಿಡೋಣವೆಂದು ನಿರ್ಧರಿಸಿದ.

ದಂಡಿಯನ್ನು ರಿಲೀವ್ ಮಾಡುವ ಹಿಂದಿನ ದಿನ ಅವನಿಗಾಗಿ ಒಂದು ಪಾರ್ಟಿ ಇಟ್ಟುಕೊಂಡಿದ್ದರು. ಬ್ಯಾಂಕಿನಲ್ಲಿ, ಅವನಿಗೆ ಆಗುವವರು, ಆಗದವರು ಎಲ್ಲರೂ ಒಳ್ಳೆಯ ಮಾತುಗಳನ್ನಾಡಿದರು. ಕೆಲವರು ಭಾಷಣವನ್ನೇ ಬಿಗಿದರು. ಅವನಿಗೆ ಒಂದು ಬ್ರೀಫ್ ಕೇಸನ್ನು ಉಡುಗರೆಯಾಗಿ ಇತ್ತರು. ಅವನ ಗೆಳೆಯರಾದ ಶಾಸ್ತ್ರಿ, ಶೆಣೈಗೆ ಮರುದಿನ ಪಾರ್ಟಿ ಇತ್ತು. ಮನೆಗೆ ಬಂದ ದಂಡಿಗೆ ಮನಸ್ಸಿನಲ್ಲಿ ಏನೋ ಅವ್ಯಕ್ತ ಸಂಕಟ. ಬೆಂಗಳೂರಿನ ಋಣ ತೀರಿತೋ ಏನೋ, ತನ್ನ ನೀರಿನ ಋಣ ಎಲ್ಲೆಲ್ಲಿಯೋ ಎಂದುಕೊಂಡ.

ಸೋಮವಾರ ಡ್ಯೂಟಿ ರಿಪೋರ್ಟ್ ಮಾಡಿಕೊಳ್ಳಬೇಕಾಗಿತ್ತು. ದಂಡಿ ಭಾನುವಾರವೇ ವೆಲ್ಲೂರಿಗೆ ಹೊರಟ. ಅವನು ಪ್ರಯಾಣಿಸಿದ ಬಸ್ನಲ್ಲಿ ಒಂದು ಶೆಟ್ಟರ ಕುಟುಂಬ—ತಂದೆ, ತಾಯಿ, ನಾಲ್ಕು ಮಕ್ಕಳು ಇದ್ದರು. ಮಧ್ಯಾಹ್ನದ ಬಿಸಿಲು ಬೇರೆ. ಬಸ್ನಲ್ಲಿ ಈ ಕುಟುಂಬದ್ದೇ ಗಲಾಟೆ. ಬೆಂಗಳೂರಿನಿಂದ ವೆಲ್ಲೂರು ತಲಪುವ ವರೆಗೂ ಇವರುಗಳು ಅದೇನೇನೋ ತಿನ್ನುತ್ತಲೇ ಇದ್ದರು. ಇವರ ಬಾಯಿಗಳಿಗೆ ವಿಶ್ರಾಂತಿಯೇ ಇರಲಿಲ್ಲ. ಪಾಕಂ, ಪೊಪ್ಪು, ನಿಪ್ಪಟ್ಟು. ರವೆ ಉಂಡೆ, ಕೋಡುಬಳೆ... ಅದೆಷ್ಟು! ಆ ಮಕ್ಕಳಿಗೊ ಧಾವಂತ ಬೇರೆ. ಇದನ್ನೆಲ್ಲಾ ನೋಡುತ್ತಿದ್ದ ದಂಡಿಗೆ ನಗು ಬರುತ್ತಿತ್ತು. ವೆಲ್ಲೂರು ತಲಪಿದ ಬಳಿಕ ಲಾಡ್ಜ್ ಒಂದರಲ್ಲಿ ಇಳಿದುಕೊಂಡ. ಸಂಜೆಯೆಲ್ಲಾ ಊರು ಸುತ್ತಿದ. ಮರುದಿನ ಬ್ಯಾಂಕಿಗೆ ಹೋಗಿ ಕೆಲಸಕ್ಕೆ ರಿಪೋರ್ಟ್ ಮಾಡಿಕೊಂಡ. ಬ್ಯಾಂಕ್‌ನ ಸಿಬ್ಬಂದಿಯಲ್ಲಿ ಕರ್ನಾಟಕದವನೊಬ್ಬನಿದ್ದ. ಅವನ ಹೆಸರು ಸೀತಾರಾಮ ಎಂದು. ದಂಡಿ ಅವನ ಸ್ನೇಹವನ್ನು ಕೆಲವೇ ಗಂಟೆಗಳಲ್ಲಿ ಸಂಪಾದಿಸಿದ. ಸೀತಾರಾಮ ಅವನಿಗೆ ಹೇಳಿದ. "ಕೆಲವು ದಿನ ಲಾಡ್ಜ್‌ನಲ್ಲೇ ಇರಿ. ಆಮೇಲೆ ಮನೆಯೊಂದನ್ನು ಬಾಡಿಗೆಗೆ ಪಡೆಯುವಿರಂತೆ" ಎಂದು. ದಂಡಿಗೆ ಜಾಯ್ನಿಂಗ್ ಟೈಂ ಎಂದು ಒಂದು ವಾರ ಸಮಯ ಕೊಟ್ಟಿದ್ದರು. ದಂಡಿ ಅದೇ ಸಂಜೆ ಬೆಂಗಳೂರಿಗೆ ಪ್ರಯಾಣ ಬೆಳೆಸಿದ. ಒಂದು ವಾರ ಬೆಂಗಳೂರಿನಲ್ಲೇ ಇದ್ದು ವೆಲ್ಲೂರಿಗೆ ಹೊರಡಬೇಕಾದ ಒಂದಿನ ದಿನ ತನಗೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು ವೆಲ್ಲೂರಿಗೆ ಹೊರಟುಬಂದ. ಸೀತಾರಾಮ ಇದ್ದಿದ್ದರಲ್ಲಿ ಒಂದು ಲಾಡ್ಜ್‌ನಲ್ಲಿ ಅಗ್ಗವಾಗಿ ರೂಮನ್ನು ಬಾಡಿಗೆಗೆ ಕೊಡಿಸಿದ. ಬಾಡಿಗೆ ತಿಂಗಳಿಗೆ ನೂರಎಂಭತ್ತು ರೂಪಾಯಿ-ಗಳು. ರೂಮಿನ ಬಾಡಿಗೆ ಅಷ್ಟೇನೂ ದುಬಾರಿಯೆನಿಸಲಿಲ್ಲ. ವಾರ ಕಳೆಯಿತು.

ಒಂದು ವಾರ ವೆಲ್ಲೂರಿನಲ್ಲಿ ಬಾಳುವೆ ನಡೆಸಿದ್ದು ದಂಡಿಗೆ ಸಾಕೋ ಸಾಕೆನಿಸಿತ್ತು. ತಮಿಳರ ನಡುವೆ ಜೀವನ ಸಾಗಿಸುವುದು ಬೇಸರ ತಂದಿತ್ತು. ಬ್ಯಾಂಕಿನ ಸಹೋದ್ಯೋಗಿಗಳು ತಮಿಳರು, ಮಲೆಯಾಳಿಗಳೇ ಆಗಿದ್ದರು. ಈ ಸಹೋದ್ಯೋಗಿಗಳು ತಮ್ಮ ಹೆಂಡಂದಿರನ್ನು, ಮಕ್ಕಳನ್ನು ತಮ್ಮ ತಮ್ಮ ಊರಿನಲ್ಲೇ ಬಿಟ್ಟಿರುತ್ತಿದ್ದರು. ಸಾಮಾನ್ಯವಾಗಿ ಇವರ ಹೆಂಡಂದಿರು ನರ್ಸ್‌ಗಳೋ, ಟೀಚರ್‌ಗಳೊ ಆಗಿರುತ್ತಿದ್ದರು. ಅವರುಗಳು ತಮ್ಮ ಉದ್ಯೋಗವನ್ನು ಬಿಡಲಾ-ರರು. ಹೀಗಾಗಿ ಈ ಗಂಡಸರು ಮದುವೆಯಾ

ದರೂ ಬ್ರಹ್ಮಚಾರಿಯ ಜೀವನವನ್ನು ನಡೆಸುತ್ತಿದ್ದರು.

ದಂಡಿಗೆ ಹೋಟೆಲ್ ಊಟ ತಿಂದು ಬೇಸರ ಬಂತು. ಸ್ನೇಹಿತರ ಬಳಿ ಅಲ್ಲಿ ಎಲ್ಲಿಯಾದರೂ ಊಟದ ಮೆಸ್ ಇದೆಯೇ ಎಂದು ವಿಚಾರಿಸಿದ. ಆಫೀಸರ್ ಅರವಿಂದಾಕ್ಷನ್ ಹೇಳಿದರು, "ಬ್ಯಾಂಕಿನ ಪಕ್ಕದ ಬೀದಿಯಲ್ಲಿ ಒಂದು ಮನೆಯಲ್ಲಿ ಒಬ್ಬಳು ಪಾಟಿ (ಮುದುಕಿ) ಮೆಸ್ ರೀತಿಯಲ್ಲಿ ನಡೆಸುತ್ತಾಳೆ. ಅಲ್ಲಿ ಹೋಗಿ ವಿಚಾರಿಸಿ" ಎಂದ.

ಬೆಳಿಗ್ಗೆ, ಮಧ್ಯಾಹ್ನದ ಹೊತ್ತು, ತಿಂಡಿ, ಕಾಫಿ ಹಣ್ಣುಗಳನ್ನು ಸೇವಿಸಿ ಕಾಲಹಾಕುತ್ತಿದ್ದ ದಂಡಿ. ರಾತ್ರಿ ಒಂದು ಹೊತ್ತು ಮಾತ್ರ ಪಾಟಿಯ ಮನೆಯಲ್ಲಿ ಊಟ ಮಾಡುತ್ತಿದ್ದ. ಊಟ ಸೊಗಸಾಗಿರುತ್ತಿತ್ತು. ರಾತ್ರಿ ವೇಳೆ ಎಂಟೂವರೆ ಅಥವಾ ಒಂಭತ್ತು ಆಗಿಹೋದರೆ ಪಾಟಿಯ ಮಗ ಊಟಕ್ಕೆ ಬಡಿಸುತ್ತಿದ್ದ. ಅವನು ಅನ್ನ, ಹುಳಿ, ಬಡಿಸುವಾಗ "ಪೋದುಮಾ, ಪೋದುಮಾ" ಎಂದು ಕೇಳುತ್ತಿದ್ದ. ಇವನು ಪಾಟಿಯಷ್ಟು ಧಾರಾಳ ಅಲ್ಲ. ಈ ರೀತಿ ಅವನು ಕೇಳುವಾಗ ಕಪಾಳಕ್ಕೆರಡು ಬಾರಿಸಲೇ ಎಂದುಕೊಳ್ಳುವನು ದಂಡಿ. ಸಾಮಾನ್ಯವಾಗಿ ತಮಿಳು ನಾಡಿನಲ್ಲಿ ಅನ್ನವನ್ನು ಧಾರಾಳವಾಗಿ ಬಡಿಸುವರು ಎಂದು ಕೇಳಿದ್ದ. ಆದರೆ ಈ ಆಸಾಮಿ ಒಳ್ಳೆಯ ಜಿಪುಣಾಗ್ರೇಸರನಾಗಿದ್ದಾನಲ್ಲ ಎಂದುಕೊಳ್ಳುತ್ತಿದ್ದ. ಇವನಿಂದ ಬಡಿಸಿಕೊಳ್ಳುವುದೇ ಬೇಡವೆಂದು ರಾತ್ರಿ ೭-೩೦ ಅಥವಾ ಎಂಟು ಗಂಟೆಯ ಒಳಗೆ ಅಲ್ಲಿಗೆ ಹೋಗುತ್ತಿದ್ದ. ಆಗ ಪಾಟಿಯೇ ಊಟಕ್ಕೆ ಬಡಿಸುತ್ತಿದ್ದಳು. ಇವಳ ಮಗ ಲಾಟರಿ ಟಿಕೆಟ್ ಏಜೆನ್ಸಿ ಮಾಡುತ್ತಿದ್ದ.

ಇಲ್ಲಿನ ಜನಗಳಿಗೆ ಬರೀ ತಿನ್ನೋದು, ಸಿನಿಮಾ ನೋಡೋದು, ಅಡಿಕೆ, ಎಲೆ ಜಗಿಯೋದು ಇಷ್ಟೇ ಗೊತ್ತಿರುವುದು. ಇದು ದಂಡಿಯ ಗಮನಕ್ಕೆ ಬಂದ ಸಂಗತಿ. ಸಾಯಂಕಾಲದ ವೇಳೆ ಕಾಲ ಹಾಕುವುದು ಹೇಗೆ ಎಂದು ಯೋಚಿಸುತ್ತಿದ್ದ. ವೆಲ್ಲೂರು ದೊಡ್ಡ ಊರೇನೂ ಅಲ್ಲ. ಸುತ್ತಿದ ಬೀದಿಗಳನ್ನೇ ಸುತ್ತುತ್ತಿದ್ದ. ಆ ಊರಿನಲ್ಲಿ ಒಂದು ಪಾರ್ಕ್, ಅಲ್ಲೊಂದು ಕಡೆ ಡೈನೊಸಾರ್ (ಬೃಹದಾಕಾರದ ಸರ್ಪ)ಅನ್ನು ಹಳೆಯ ರಬ್ಬರ್

ಟೈರ್‌ಗಳಿಂದ ಜೋಡಿಸಿ ರೂಪಿಸಿದ್ದರು. ಆ ಪಾರ್ಕ್‌ಗೆ ಹೋದಾಗಲೆಲ್ಲ ಅದನ್ನು ದಂಡಿ ನೋಡುತ್ತಿದ್ದ. ಪಾರ್ಕ್‌ನಲ್ಲಿ ಕೂತು ಅಲ್ಲಿಗೆ ಬರುವ ಹೋಗುವ ಜನರನ್ನು ಗಮನಿಸುತ್ತಿದ್ದ. ಬೇಜಾರಾದಾಗ ಆಕಾಶದ ಕಡೆಗೆ ದಿಟ್ಟಿಸುತ್ತಿದ್ದ. ನಕ್ಷತ್ರಗಳು, ಚಂದ್ರ, ಮೋಡ ಇವುಗಳನ್ನು ನೋಡುತ್ತಿದ್ದ. ಮನಸ್ಸು ಮಾತ್ರ ಕೊನೆಯಿಲ್ಲದ ಯೋಚನೆಯ ಪ್ರವಾಹಕ್ಕೆ ಸಿಕ್ಕುತ್ತಿತ್ತು. ದಿಕ್ಕೆಟ್ಟ ಪರದೇಶಿಯಂತೆ ಸುತ್ತಾಡುತ್ತಿದ್ದ. ಓಡಾಡಲು ಬೇಜಾರಾದರೆ ಲಾಡ್ಜ್‌ನಲ್ಲೇ ತನ್ನ ರೂಮಿನಲ್ಲಿ ಸುಮ್ಮನೆ ಕುಳಿತಿರುತ್ತಿದ್ದ. ಏನಾದರೂ ಓದುತ್ತಿದ್ದ. ಇನ್ನೆಷ್ಟು ಕಾಲ ಈ ಊರಲ್ಲಿ ಜೀವನ ಸಾಗಿಸುವುದು ಎಂದು ಲೆಕ್ಕ ಹಾಕುತ್ತಿದ್ದ. ತನ್ನ ಬದುಕಿಗೆ ಉದ್ದೇಶವೂ ಇಲ್ಲ. ನಿರ್ದಿಷ್ಟ ಗುರಿಯೂ ಇಲ್ಲ ಎಂದುಕೊಳ್ಳುತಿದ್ದ.

ಒಮ್ಮೊಮ್ಮೆ ಸಿನಿಮಾಕ್ಕೆ ಹೋಗುತ್ತಿದ್ದ ದಂಡಿ. ತಮಿಳು ಸಿನಿಮಾಗಳೇ ಜಾಸ್ತಿ. ಅದರಲ್ಲೂ ಹಳೆಯ ತಮಿಳು ಸಿನಿಮಾಗಳು. ನೋಡದೆ ಇದ್ದ ತಮಿಳು ಸಿನಿಮಾಗಳನ್ನು ನೋಡತೊಡಗಿದ. ಪಾಪಮನ್ನಿಪ್ಪು, ಪಾಶಮಲರ್, ಪಡಕೋಟಿ. ಪಾದಕಾಣಿಕ್ಕೈ, ಇರುಮ್ಬು ಪಿತ್ತನ್... ಒಂದೊಂದಾಗಿ ನೋಡುತ್ತಿದ್ದ. ವೆಲ್ಲೂರಿನಲ್ಲಿ ಮತ್ತೊಂದು ಚೆನ್ನಾಗಿರುವ ಸ್ಥಳವೆಂದರೆ ಅಲ್ಲಿನ ಮುರುಗನ ದೇವಾಲಯ. ದೇವಾಲಯದ ಬೃಹತ್ ಗೋಪುರ ಬಹಳ ದೂರದವರೆಗೆ ಕಾಣುತ್ತಿತ್ತು. ವಾರಕ್ಕೆ ಎರಡು ಸಲವಾದರೂ ಆ ದೇವಾಲಯಕ್ಕೆ ಹೋಗುತ್ತಿದ್ದ. ದೇವಾಲಯದ ಒಳಗೆ ಸ್ವಚ್ಛವಾಗಿತ್ತು. ಸುಂದರ, ಪ್ರಶಾಂತ ವಾತಾವರಣ. ಎಷ್ಟೋ ಸಲ ಅಲ್ಲಿ ಕುಳಿತುಕೊಂಡು ಯೋಚಿಸುತ್ತಿದ್ದ.

ವೆಲ್ಲೂರಿಗೆ ದಂಡಿ ಬಂದು ಐದಾರು ತಿಂಗಳುಗಳೇ ಉರುಳಿದವು. ಬೆಂಗಳೂರಿಗೆ ನಾಲ್ಕೈದು ಬಾರಿ ಬಂದು ಹೋಗಿದ್ದ. ಕೊಯಿಮುತ್ತೂರಿನಿಂದ ಶಾಸ್ತ್ರಿ ಪತ್ರ ಬರೆದಿದ್ದ. ಎಂದಾದರೂ ಒಂದೆರಡು ದಿನಗಳ ರಜೆ ಹಾಕಿ ತನ್ನ ಊರಿಗೆ ಬಂದು ಹೋಗಬೇಕೆಂದು ಕೋರಿದ್ದ. ಸರಿ. ದಂಡಿ ಕೊಯಿಮುತ್ತೂರಿಗೆ ಹೊರಟ. ಭಾನುವಾರವನ್ನು ಸೇರಿಸಿಕೊಂಡು ಒಟ್ಟು ಮೂರು ದಿನ ರಜೆ ಬರುವಂತೆ ಎರಡು ದಿನಗಳಿಗೆ ಕ್ಯಾಷುಯಲ್ ಲೀವ್ ಅಪ್ಲೈ ಮಾಡಿದ. ಶಾಸ್ತ್ರಿಗೆ ತಾನು ಅವನ ಊರಿಗೆ ಬರುವುದಾಗಿ ಮುಂಚಿತವಾಗಿ ಪತ್ರದ ಮೂಲಕ ತಿಳಿಸಿದ್ದ. ದಂಡಿ ಕೊಯಿಮುತ್ತೂರಿಗೆ ಬಂದಾಗ ಶಾಸ್ತ್ರಿಗೆ ಬಹಳ ಸಂತೋಷವಾಯಿತು. ಕೊಯಿಮುತ್ತೂರಿನ ಮುಖ್ಯ ಸ್ಥಳಗಳನ್ನು ತೋರಿಸಿದ. ಇಷ್ಟು ದೂರ ಬಂದಮೇಲೆ 'ಮರುದ ಮಲೆ'ಗೆ ಹೋಗದಿದ್ದರೆ ಹೇಗೆ ಎಂದು ಮರುದಿನ ಅವರಿಬ್ಬರು ಮರುದ ಮಲೆಗೆ ಹೊರಟರು.

ಮರುದ ಮಲೆಗೆ ಅರ್ಧ ಗಂಟೆಯ ಬಸ್ ಪ್ರಯಾಣ. ಅಲ್ಲಿಗೆ ತಲುಪಿ ಬೆಟ್ಟವನ್ನೇರತೊಡಗಿದರು. ಬೆಟ್ಟಕ್ಕೆ ಸುಮಾರು ಏಳು ನೂರು ಮೆಟ್ಟಿಲುಗಳಿರಬೇಕು. ಭಕ್ತಾದಿಗಳ ದೊಡ್ಡ ಕ್ಯೂ ಇತ್ತು. ದೇವರ ದರ್ಶನಕ್ಕಾಗಿ ಎರಡೂವರೆ ಗಂಟೆಗಳ ಕಾಲ ಕಾಯಬೇಕಾಯಿತು. ಈ ಜನರ ಭಕ್ತಿ, ಬೂಟಾಟಿಕೆ, ಹಾಹಾಕಾರ, ಧಾವಂತ. ತೀರ್ಥಕ್ಕೆ ಕೈ ಚಾಚುವುದು... ಇವೆಲ್ಲಾ ನೋಡಿ ದಂಡಿಗೆ ಜಿಗುಪ್ಸೆಯಾಗುತ್ತಿತ್ತು. ಇವರುಗಳಿಗೆ ದೇವರಲ್ಲಿ ನಿಜವಾದ ಭಕ್ತಿಭಾವ ಇದೆಯೋ ಎಂದುಕೊಳ್ಳುತ್ತಿದ್ದ. ಎಲ್ಲರೂ ಮಾಡ್ತಾರಲ್ಲ ನಾವು ಮಾಡೋಣ ಎಂದೋ ಅಥವಾ ಏನೋ ಭಯದಿಂದಲೋ ಇವರುಗಳು ಹೀಗಾಡುವುದು. ಈ ದೇವಸ್ಥಾನಗಳಲ್ಲಿ ಭಕ್ತಿ ಪ್ರದರ್ಶಿಸುವುದು ಕಷ್ಟಕರವೇ. ಏಕೆ ಗೊತ್ತೇ? ದೇವರ ದರ್ಶನ ಮಾಡುತ್ತಾ ಕೈ ಜೋಡಿಸಿ, ಕಣ್ಮುಚ್ಚಿ ಭಾವಪರವಶರಾಗಿ "ದೇವಾ" ಅಂತ ಪ್ರಾರ್ಥಿಸಿಕೊಳ್ಳುವಷ್ಟರಲ್ಲಿ ಕ್ಯೂನಲ್ಲಿದ್ದ ಹಿಂದಿನವರು ತಳ್ಳಿ ಹಾಕಿಬಿಡುತ್ತಾರೆ. ಕಣ್ಣು ಬಿಟ್ಟು ನೋಡಿದರೆ ಎದುರಿಗೆ ಯಮದೂತನ ಹಾಗೆ ಪೂಜಾರಿ ನಿಂತಿರುತ್ತಾನೆ. ಈ ತೋರಿಕೆಯ ಭಕ್ತಿಯಾದರೂ ಏಕೆ ಎಂದೆನಿಸುವುದು.

ಮರುದ ಮಲೆಯನ್ನು ದರ್ಶನ ಮಾಡಿ ಬಂದ ಮರುದಿನ ಗುರುವಾಯೂರಿಗೆ ಹೋಗಲು ನಿರ್ಧರಿಸಿದರು. ಮಧ್ಯಾಹ್ನ ಕೊಯಿಮುತ್ತೂರನ್ನು ಮೂರು ಗಂಟೆಗೆ ಬಿಟ್ಟರು. ಬಸ್‌ನಲ್ಲಿ ಪ್ರಯಾಣಿಸಿ ಗುರುವಾಯೂರನ್ನು ರಾತ್ರಿ ೭-೩೦ ಅಥವಾ ಎಂಟಕ್ಕೆ ತಲುಪಿದರು. ಸ್ವಲ್ಪ ಹೊತ್ತು ಬಸ್‌ಸ್ಟ್ಯಾಂಡ್‌ನಲ್ಲೇ ಸುತ್ತಿದರು.

ಗುರುವಾಯೂರಿನ ವಿಶೇಷವೆಂದರೆ ಬೆಳಗಿನ ರುಷಾವ ಮೂರು ಗಂಟೆಯಲ್ಲಿ ದೇವರ ದರ್ಶನ ಮಾಡುವುದು. ಅದು ಮಂಗಳಕರವೆಂದು ಅಲ್ಲಿನ ಜನರ ನಂಬಿಕೆ. 'ಸರಿ, ನಾವೂ ದೇವರ ವಿಶೇಷ ದರ್ಶನ ಪಡೆಯೋಣ' ಎಂದುಕೊಂಡು, ಶಾಸ್ತ್ರಿ ಹಾಗೂ ದಂಡಿ ಅಲ್ಲೇ ಯಾವುದೋ ಸಿನೆಮಾಕ್ಕೆ ಎರಡನೇ ಆಟಕ್ಕೆ ಹೋದರು. ಮಧ್ಯರಾತ್ರಿ ಮೀರಿತ್ತು. ಹನ್ನೆರಡು ಅಥವಾ ಹನ್ನೆರಡೂವರೆ ಇರಬೇಕು. ಆಗ ಜನವರಿ ತಿಂಗಳು ಬೇರೆ. ಅಯ್ಯಪ್ಪನ ಭಕ್ತರುಗಳು ಬೇರೆ ತುಂಬಿಕೊಂಡಿದ್ದರು. ಯಾವ ಹೋಟೆಲ್‌ನಲ್ಲೂ ರೂಮುಗಳು ಖಾಲಿ ಇರಲಿಲ್ಲ. ಸರಿ, ಬಸ್‌ಸ್ಟಾಂಡ್‌ನಲ್ಲೇ ಕಾಲ ತಳ್ಳಿದರು. ರೂಮೇ ಮಾಡದೆ ಆ ರಾತ್ರಿ ಅಲ್ಲಿ ಕಳೆದಿದ್ದಾಯ್ತು. ಬೆಳಗಿನ ರುಷಾವ ಎರಡು ಗಂಟೆಯ ವೇಳೆಗೆ ಬಸ್‌ಸ್ಟಾಂಡ್ ಬಳಿಯೇ ನೀರನ್ನು ತೆಗೆದುಕೊಂಡು ಮುಖತೊಳೆದು ಕೊಂಡು ಸ್ನಾನ ಮಾಡಿದರು. ಮೂರು ಗಂಟೆಯ ವೇಳೆಗೆ ಶ್ರೀ ಕೃಷ್ಣನ ದರ್ಶನವಾಯಿತು. ಚಂಪೆ, ಮದ್ದಳೆ, ತಾಳಗಳ ಶಬ್ದ. ಅವರು ಒಂದು ರೀತಿಯ ದಿವ್ಯಾನುಭವವನ್ನು ಪಡೆದಂತಾಯಿತು. ಬೆಳಿಗ್ಗೆ ಅಲ್ಲಿಂದ ಕೊಯಿಮುತ್ತೂರಿಗೆ ಪ್ರಯಾಣ ಮಾಡಿದರು. ಸ್ವಲ್ಪ ಕಾಲ ಶಾಸ್ತ್ರಿಯ ಮನೆಯಲ್ಲಿ ವಿಶ್ರಮಿಸಿಕೊಂಡು ದಂಡಿ ವೆಲ್ಲೂರಿಗೆ ಬಸ್‌ನಲ್ಲಿ ಹೊರಟು ಬಂದ. ಒಂದೆರಡು ದಿನ ಬೇರೆ ಊರಿನ ಪರಿಸರದಲ್ಲಿದ್ದು ಬಂದುದು ಅವನ ಮನಸ್ಸಿಗೆ ಹಿತನೀಡಿತ್ತು.

ಯಥಾಪ್ರಕಾರ ಮರುದಿನದಿಂದ ಬ್ಯಾಂಕಿಗೆ ಕೆಲಸ, ಸಂಜೆಯ ಸುತ್ತಾಟ, ಪಾಟಿ ಮನೆಯ ಊಟ, ಲಾಡ್ಜ್‌ನಲ್ಲಿನ ವಾಸ. ಇದು ನಿತ್ಯದ ಪರಿಪಾಠ. ಅದೇಕೋ ಈ ಜನರಲ್ಲಿ ಮಾತು ಕಡಿಮೆ ಆಗಿದೆ. 'ಊಟ ಆಯ್ತು,' 'ತಿಂಡಿ ಆಯ್ತು', 'ಕಾಫಿ ಆಯ್ತು' ......ಇವೆಲ್ಲಾ ಮಾಮೂಲು ಮಾತುಗಳು. ಇದರ ಬಗ್ಗೆ ಕೇಳೋದೇನು? ಎನ್ನುವ ಮನೋಭಾವ ಈ ಜನರದು. ಹರಟೆ ಹೊಡೆಯೋದಾದರೂ ಯಾವುದರ ಕುರಿತು? ಈ ಜನರಿಗೆ ಕಾಫಿ ಇದ್ದರೆ ಆಯಿತು. ಸದಾ ಕಾಫಿಯನ್ನು ಕುಡಿಯುತ್ತಾ ಇರ್ತಾರೆ. ಇದನ್ನು ಕುಡಿಯದಿದ್ದರೆ ಇವರಿಗೆ 'ಹೆಡ್ ಏಕ್' ಬರುತ್ತಂತೆ. ಸಮಯಕ್ಕೆ ಸರಿಯಾಗಿ ಕಾಫಿ ಕುಡಿಯದಿದ್ದರೆ ಪ್ರಾಣ ಹೋಗುತ್ಯೇ?

ಅಂತೂ ಇಂತೂ ದಂಡಿ ವೆಲ್ಲೂರಿನ ಜೀವನಕ್ಕೆ ಹೊಂದಿಕೊಂಡ. ಬೇರೆ ವಿಧಿಯಿಲ್ಲವಲ್ಲ. ತನ್ನ ಕಷ್ಟ-ಕಾರ್ಪಣ್ಯಗಳ ಬಗ್ಗೆ ಹೇಳಿಕೊಂಡರೆ ಆ ಜನರು ಏನು ಮಾಡ್ತಾರೆ? ಹೇಳಿಕೊಳ್ಳೋದೆ ಬೇಡ - ಅನಿಸುತ್ತೆ ಅವನಿಗೆ. ತಾನೇನಾದರೂ ಅಳುತ್ತಾ ಕುಳಿತರೆ ಈ ಬೇಸರ, ಕಷ್ಟ ಬಗೆ ಹರಿಯುತ್ತದೆಯೋ? ಇಲ್ಲ. ಅದಕ್ಕೇಕೆ ಅಳಬೇಕು. ಪ್ರಾರಬ್ಧ ಕರ್ಮ ಅಂತ ಹೀಗೇ ಜೀವಿಸಬೇಕು. ಹಾಗಿದ್ದರೆ ಚಂದ, ಹೀಗಿದ್ದರೆ ಚಂದ ಎಂದು ಪ್ರತಿಯೊಬ್ಬನು ಅಂದುಕೊಳ್ಳುವುದು ಸಹಜ. ಕರಾರುವಾಕ್ಕಾಗಿ ಹೀಗೆ ಇರ್ತೀವಿ ಅಂತ ಹೇಳಲು ಯಾರಿಗೆ ಸಾಧ್ಯ? ಏಕೋ ದಂಡಿಗೆ ಅರವತ್ತು ವರ್ಷದ ಮುದುಕನ ವೈರಾಗ್ಯ ಭಾವ ಆವರಿಸಿಕೊಂಡು ಬಿಟ್ಟಿತ್ತು.

ಮುಂದಿನ ವಾರ ಅವನ ತಂದೆಯವರ ಶ್ರಾದ್ಧವಿತ್ತು. ಶ್ರಾದ್ಧದ ಹಿಂದಿನ ದಿನವೇ ಬೆಂಗಳೂರಿನಲ್ಲಿದ್ದ ದಂಡಿ. ಶ್ರಾದ್ಧದ ದಿನ ಪುಷ್ಕಳವಾದ ತಿಥಿ ಊಟವಾಯಿತು. ವೆಲ್ಲೂರಿನಲ್ಲಿ ಮೆಸ್ ಊಟ ತಿಂದು ಅವನ ಬಾಯಿ ಮರಗಟ್ಟಿತ್ತು. ತಿಥಿ ಊಟ ಪಟ್ಟಾಗಿ ಹೊಡೆದು ಜೀರ್ಣಿಸಿಕೊಂಡ.

ಸಂಜೆ ತಿರುಗಾಡಿಕೊಂಡು ಬರಲು ಮನೆಯಿಂದ ಹೊರಟಾಗ ಅಕಸ್ಮಾತ್ ಗೆಳೆಯ ಪ್ರಕಾಶನ ದರುಶನವಾಯಿತು. ಈ ಪ್ರಕಾಶ ದಂಡಿಯ ಬಾಲ್ಯ ಸ್ನೇಹಿತ. ಪಿ. ಯು. ಸಿ. ವರೆಗೆ ಇಬ್ಬರೂ ಜತೆಯಲ್ಲಿ ಓದಿದವರು. ಇವನು ಬಿ. ಎಸ್‌ಸಿಗೆ ಸೇರಿದಾಗ ಅವನು ಮೆಡಿಕಲ್ ಕೋರ್ಸ್‌ಗೆ ಸೇರಿದ. ಈಗ ಡಾಕ್ಟರನಾಗಿ ವಿಶ್ವೇಶ್ವರಪುರಂನಲ್ಲಿ ಕ್ಲಿನಿಕ್ ಒಂದನ್ನಿಟ್ಟಿದ್ದಾನೆ.

ಸ್ಕೂಟರ್‌ನಲ್ಲಿ ಹೋಗುತ್ತಿದ್ದ ಪ್ರಕಾಶ ದಂಡಿಯನ್ನು ನೋಡಿದವನೇ ಸ್ಕೂಟರ್ ನಿಲ್ಲಿಸಿದ. ದಂಡಿಯೋ ಅವನ ಭುಜದ ಮೇಲೆ ಕೈ ಹಾಕಿ ವಿಶ್ವಾಸದಿಂದ "ಹೇಗಿದ್ಯಪ್ಪಾ ನಿನ್ನ ಪ್ರಾಕ್ಟೀಸು?" ಎಂದು ಕೇಳಿದ.

ಆದಕ್ಕೆ ಪ್ರಕಾಶ– "ಏನೋ ಸುಮಾರಾಗಿದೆ;

ಈ ಪ್ರಾಕ್ಟೀಸಿನಿಂದ ನನಗೆ ಪ್ರಯೋಜನವಿಲ್ಲ. MD ಮುಗಿಸಿ ವಿದೇಶಕ್ಕೆ ಹೋಗಬೇಕೆಂಬ ಪ್ಲಾನ್ ಇದೆ. ಅದರ ಬಗ್ಗೆ ಗಾಢವಾಗಿ ಆಲೋಚಿಸುತ್ತಿದ್ದೇನೆ" ಎಂದ.

"ಅದ್ಸರಿ, ನಿನ್ನ ಗೆಳತಿಯರಾದ ವೇದು, ರುಕ್ಕು, ನಾಗು, ಸೀತು ಅವರುಗಳೆಲ್ಲ ಹೇಗಿದ್ದಾರೆ?" ಎಂದು ಹಾಸ್ಯವಾಗಿ ಕೇಳಿದ ದಂಡಿ.

"ಅವರಿಗೇನಾಗಿದೆ? ನನ್ನ ಪ್ರಾಣ ತಿಂತಾರೆ ಅಷ್ಟೆ. ಅವರಿಗಂತೂ ಬೇರೆ ಉದ್ಯೋಗವಿಲ್ಲ. ನನ್ನ ಕ್ಲಿನಿಕ್‌ಗೆ ಏನಾದರೂ ನೆವ ಹಾಕಿಕೊಂಡು ಬರ್‍ತಾರೆ. ಒಂದಕ್ಕಿಂತ ಒಂದು ಕೋತಿಗಳೇ. ರೋಗವಿಲ್ಲದಿದ್ದರೂ ರೋಗಿಗಳ ನೆಪ ಹಾಕ್ತಾರೆ. ಅವರ ಉದ್ದೇಶ ನನ್ನೊಂದಿಗೆ ಹರಟೆ ಹೊಡೆಯಬೇಕೆಂದು, ನನಗೋ ಅವರ ಮಾತುಗಳೇ ಅಲರ್ಜಿ. ಅವರ ಕೊರೆತವನ್ನು ಹೇಗೆ ಸಹಿಸುವುದು? ಇನ್ನೊಂದು ತಮಾಷೆ. ಒಬ್ಬಳು ನನ್ನ ಹತ್ರ ಮಾತಾಡ್ತಾ ಇರ್‍ತಾಳೆ ಅಂತಿಟ್ಕೋ. ಆಗ ಮತ್ತೊಬ್ಬಳು ಬಂದಾಗ ಅವಳ ಮುಖ ನೋಡ್ಬೇಕು. ಇವಳನ್ನು ದುರುಗುಟ್ಟಿಕೊಂಡು ನೋಡ್ತಾ ಇರ್‍ತಾಳೆ, ಹಾಳಾದವಳು ನನಗಿಂತ ಮುಂಚೆ ಬಂದಿದ್ದಾಳಲ್ಲ ಎಂದು. ಇವರ ಮತ್ಸರ ಕಂಡು ನನಗೆ ನಗು, ಅಲ್ಲದೆ, ಎದನ್ನು ನೋಡಲು ಒಂದು ಮೋಜು," ಇಂದು ನಗುತ್ತಾ ಹೇಳಿದ ಪ್ರಕಾಶ.

"ಡಾಕ್ಟರನಾದರೆ ಒಳ್ಳೇ ಚಾನ್ಸ್ ನೋಡು. ಹುಡುಗಿಯರೇ ನಿಮ್ಮ ಬಳಿಗೆ ಬರ್‍ತಾರೆ. ನನ್ನಂಥವನ ಬಳಿ ಯಾರು ಬರ್‍ತಾರೆ?" ಎಂದು ದಂಡಿ ಹೇಳುವಾಗ ಅವನ ಮುಖದಲ್ಲಿ ನಿರಾಸೆಯ ಭಾವ ಮೂಡಿತ್ತು.

"ಯಾವಾಗ್ಲೋ ನಿನ್ನ ಮದುವೆ?" ಎಂದು ಕೇಳಿದ ಪ್ರಕಾಶ.

"ಏನೋ, ನೀನು ಸಹ ಹೀಗೆ ಕೇಳ್ತೀಯಲ್ಲೋ. ನನಗೆ ಈ ವಿಷಯದ ಬಗ್ಗೆ ಮಾತನಾಡಲು ಇಷ್ಟವಿಲ್ಲ." ಎಂದು ಬೇಸರದ ಸ್ವರದಲ್ಲಿ ನುಡಿದ ದಂಡಿ. ಪ್ರಕಾಶ ಯಾವುದೋ ಅವಸರದ ಕೆಲಸದ ನಿಮಿತ್ತವಾಗಿ ಹೋಗುತ್ತಿರುವುದಾಗಿ ದಂಡಿಯಿಂದ ಬೀಳ್ಕೊಂಡ.

ಪರಿಚಿತ ಜನರೆಲ್ಲ "ನಿನ್ನ ಮದುವೆ ಯಾವಾಗ?" ಎಂದು ಕೇಳುವರು ದಂಡಿಯನ್ನು. ಈ ಜನಗಳಿಗೆ ಮದುವೆ, ಮಕ್ಕಳು, ಸಂಸಾರದ ಬಗ್ಗೆ ಬಿಟ್ಟು ಬೇರೆ ಮಾತೇ ಇಲ್ಲವೇ ಎಂದುಕೊಳ್ಳುವನು ದಂಡಿ. ಮದುವೆ ಮಾಡಿ ಮೂಗುದಾರ ಹಾಕಿಬಿಡುವುದರಲ್ಲಿ ಈ ಜನರಿಗೆ ಅತಿ ಖುಷಿ. ಮದುವೆಯಾದ ಮೇಲೆ ಜೀವನ ಸ್ವಲ್ಪ ಏರು ಪೇರಾದಲ್ಲಿ ಇದೇ ಜನ ಪೃಷ್ಠ ಹೊಡೆದುಕೊಂಡು ನಗುತ್ತಾರೆ. ವೆಲ್ಲೂರಿಗೆ ಓಡಬೇಕೆನಿಸುವುದು ದಂಡಿಗೆ. ಅಲ್ಲಿಯಾದರೆ ತನ್ನ ಬಗ್ಗೆ ಯಾರೂ ಏನನ್ನೂ ವಿಚಾರಿಸುವುದಿಲ್ಲ. ಅದು ಎಷ್ಟೋ ವಾಸಿ ಎಂದುಕೊಳ್ಳುವನು ದಂಡಿ.

ಅವನ ತಂಗಿಗೆ ಐದಾರು ಕಡೆ ವರಾನ್ವೇಷಣೆಗಾಗಿ ಪ್ರಯತ್ನಿಸಿದ್ದರು ಅವನ ತಾಯಿ. ಯಾವುದೂ ಸಫಲವಾಗುವಂತೆ ಕಂಡುಬಂದಿರ-

---

## ಅಯ್ಯಪ್ಪ ಭಕ್ತರ ಕಲಹ; ಇರಿತ

ಮಂಗಳೂರು, ಜ. 7: ಸುದ್ದಿಯಲ್ಲ



"ಸ್ವಲ್ಪ ಭಕ್ತಿ ಉಕ್ಕಿಬಂತು ಅಷ್ಟೇ..."

ಲಿಲ್ಲ. ಅವಳ ಮದುವೆಯೇ ಅವರಿಗೆ ದೊಡ್ಡ ಚಿಂತೆಯಾಗಿತ್ತು.

ವೆಲ್ಲೂರಿಗೆ ಬಂದು ಎಂಟು ಹತ್ತು ದಿನಗಳು ಕಳೆದಿದ್ದುವು. ಎಂದಿನಂತೆ ದಂಡಿ ಬ್ಯಾಂಕಿಗೆ ಅಂದು ಬಂದಾಗ ಆವನ ಟೇಬಲ್ ಮೇಲೆ ಅವರಮ್ಮನ ಪತ್ರ ಅವನಿಗಾಗಿ ನಿರೀಕ್ಷಿಸುತ್ತಿತ್ತು. ಕಾಗದ ಬಿಡಿಸಿ ಓದಿದಾಗ ಮನಸ್ಸಿಗೆ ತಂಪಾಯಿತು. ಲಲಿತಳನ್ನು ಶಾನುಭೋಗರಾದ ರಾಮಕೃಷ್ಣಯ್ಯನವರ ಮಗ ವೇಣುಗೋಪಾಲ ಮದುವೆಯಾಗಲು ಒಪ್ಪಿಕೊಂಡಿರುವನಂತೆ. ವೇಣುಗೋಪಾಲ ಕೆನರಾ ಬ್ಯಾಂಕಿನಲ್ಲಿ ಉದ್ಯೋಗದಲ್ಲಿದ್ದಾನೆ. ಸರಳ ವಿವಾಹಕ್ಕೆ ಒಪ್ಪಿಕೊಂಡಿರುವರಂತೆ. ಮದುವೆಯನ್ನು ಮುಂದಿನ ತಿಂಗಳು ಹದಿನಾಲ್ಕರಂದು ನಡೆಸಲು ಹಿರಿಯರು ನಿಶ್ಚಯಿಸಿದ್ದಾರೆಂದು ತಾಯಿ ಬರೆದಿದ್ದರು. ಇದರ ಜತೆಗೆ ಮತ್ತೊಂದು ಸಿಹಿ ಸುದ್ದಿಯನ್ನು ತಿಳಿಸಿದ್ದರು. ಶಾನುಭೋಗರ ತಂಗಿಯ ಮಗಳು ಜಯಲಕ್ಷ್ಮಿ ಸಹ ಮದುವೆಗಿರುವಳೆಂದೂ ಅವಳು ತನಗೆ ಅನುರೂಪ ಜೋಡಿಯಾಗುವುದರಲ್ಲಿ ಅನುಮಾನವೇ ಇಲ್ಲವೆಂದು ಬರೆದಿದ್ದರು. ಜಯಲಕ್ಷ್ಮಿ ವಿದ್ಯಾವಂತ ಗುಣವಂತ, ಬುದ್ಧಿವಂತ, ವಿನಯಶೀಲ ಹುಡುಗಿಯೆಂದು ಹೊಗಳಿದ್ದರು. ಲಲಿತಳ ಮದುವೆಯಾದ ಸ್ವಲ್ಪ ದಿನಗಳಲ್ಲೇ ತನ್ನದೂ ಮದುವೆ ನಡೆದುಹೋದರೆ ಅವರು ಜವಾಬ್ದಾರಿ ಇಲ್ಲದೆ ನೆಮ್ಮದಿಯಾಗಿರಬಹುದೆಂದು ತಿಳಿಸಿದ್ದರು. ತನ್ನ ಮದುವೆಯ ಬಗ್ಗೆ ದಂಡಿಗೆ ಅಷ್ಟೇನೂ ಆಸಕ್ತಿ, ಉತ್ಸಾಹವಿರಲಿಲ್ಲ.

ರಾತ್ರಿ ತನ್ನ ರೂಮಿನಲ್ಲಿ ದಂಡಿ ತಾಯಿ ಬರೆದಿದ್ದುದರ ಬಗ್ಗೆ ಯೋಚಿಸುತ್ತಿದ್ದ. ಮದುವೆ, ಮಕ್ಕಳು ಸಂಸಾರ, ರೋಗರುಜಿನ, ವೃದ್ಧಾಪ್ಯ... ಇವು ಬಿಟ್ಟು ಜೀವನದಲ್ಲಿ ಬೇರೆ ನಿಲ್ಲವೇ? ಉದ್ಯೋಗ. ತಾಯಿ ತಂಗಿಯರು, ಸ್ನೇಹಿತರು. ಬಂಧು-ಬಾಂಧವರು ಎಲ್ಲವನ್ನೂ ತೊರೆದು ಹಿಮಾಲಯಕ್ಕೆ ಹೊರಟುಬಿಟ್ಟರೆ? ಎಂದು ಸಹ ಆಲೋಚಿಸಿದ. ಈ ಪ್ರಪಂಚದಲ್ಲಿ ಅರ್ಥಾತ್ ಈ ಸಮಾಜದಲ್ಲಿ ಗೌರವವಾಗಿ ಬಾಳಬೇಕಾದರೆ ಈ ಸಂಸ್ಕಾರಗಳೆಲ್ಲ ಆಗಲೇ ತೀರಬೇಕೆನ್ನುವ ಮಟ್ಟಿಗೆ ನಮ್ಮ ಜನಗಳ ತಲೆಯಲ್ಲಿ ಬೇರೂರಿಬಿಟ್ಟಿದೆ. ಇದನ್ನೆಲ್ಲಾ ಬಿಟ್ಟು ಬೇರೆ ರೀತಿ ಬಾಳಲು ಹೋದರೆ ಹುಚ್ಚ, ವಿಚಿತ್ರಪ್ರಾಣಿ ಎಂಬ ಬಿರುದು ಬಾವಲಿಗಳನ್ನು ಪುಕ್ಕಟೆಯಾಗಿ ನೀಡುವರು. ಈ ಜೀವನವೇ ಒಂದು ನಾಟಕ. ಪ್ರತಿಯೊಬ್ಬ ಜೀವಿಯೂ ಪಾತ್ರಧಾರಿಯೇ ಇಲ್ಲಿ. ಈ ವ್ಯವಸ್ಥೆಯಲ್ಲಿ ತಾನು ಹೊರಳಾಡಬೇಕು. ಈ ಮನುಷ್ಯ ನಿರ್ಮಿತ ವ್ಯವಸ್ಥೆಯ ವಿರುದ್ಧ ದಂಗೆ ಏಳುವ ಶಕ್ತಿ ತನಗಿದೆಯೇ? ಯೋಚಿಸಿದ ಹಾಗೆಲ್ಲ ದಂಡಿಯ ತಲೆ ಬಿಸಿಯಾಗಿತ್ತು. ಮನಸ್ಸು ಗಲಿಬಿಲಿಗೊಂಡಿತ್ತು. ಯಾವುದರ ಬಗ್ಗೆಯಾದರೂ ಯೋಚನೆ ಮಾಡುತ್ತಿರುವುದೇ ತನ್ನ ಜಾಯಮಾನವಾಯಿತಲ್ಲ ಎಂದು ಹಲುಬಿದ ದಂಡಿ. ಗಂಟಲು ಒಣಗಿ ಬರುತ್ತಿತ್ತು. ಉಗುಳನ್ನು ನುಂಗಿಕೊಂಡು ದೀರ್ಘ ನಿಟ್ಟುಸಿರು ಬಿಟ್ಟ. ಹಾಸಿಗೆಗೆ ಒರಗಿ ಛಾವಣಿಯ ಮೂಲೆಯಲ್ಲೆಲ್ಲೋ ದೃಷ್ಟಿಯನ್ನು ನೆಟ್ಟ, ಅವನ ಮುಖದಲ್ಲಿ ಸಣ್ಣದೊಂದು ಕಿರುನಗೆ ಮೂಡಿತು. ಕಣ್ಣೆವೆಗಳು ಭಾರವಾಗತೊಡಗಿದವು. ೦



Edited, printed & published by M. N. Mahishi on behalf of the [redacted]), Loka Shikshana Trust, Samyukta Karnataka Press, Koppikar Road, Hubli-580 020, Phone : 64307. Rept : Bombay: V. Satyamurthy Phone: 5510502, Calcutta : H. Majumdar Phone : 46-42331 Madras : K. A. Subramanian Phone : 842201; New Delhi : V. K. Chopra Phone : 7114785.

*Registered with the Registrar of Newspapers for India under No. 3530/57*

Licence No. L2120/WPP No.